# ಕಸ್ತೂರಿ

ಕನ್ನಡ ಡೈಜೆಸ್ಟ್



ವ್ಯವಸ್ಥಾಪಕ ಸಂಪಾದಕ :

ಕೆ. ಶಾಮರಾವ್

**

ಸಹಸಂಪಾದಕ :

ಮಾಧವ ನಾ. ಮಹಿಷಿ

**

ಕಲೆ :

ಪಿ. ಆರ್. ಪಾಟೀಲ

**

ಮುಖಪುಟ :

ಹಿಮಗಿರಿಯ ಒಡಲಲ್ಲಿ

**

ಛಾಯಾಚಿತ್ರ :

ಸೀತಾರಾಮ ಪಾಟೀಲ

ಚಂದಾ ದರಗಳು :

| | | |
|---|---|---|
| ಬಿಡಿ ಸಂಚಿಕೆ | ... | ೨-೫೦ |
| ೧ ವರ್ಷಕ್ಕೆ | ಅಂಚೆ ಸೇರಿ | ೨೯-೦೦ |
| ೨ ವರ್ಷಕ್ಕೆ | ,, | ೫೫-೦೦ |
| ೩ ವರ್ಷಕ್ಕೆ | ,, | ೮೨-೦೦ |

KASTURI. December 1986


# ಬೆಳಕಿಂಡಿ

ಬರಿಗೈಯಲ್ಲಿರುವವರೆ ಸಚ್ಚಾರಿತ್ರ್ಯರಾಗಿರುವುದು ಹೆಚ್ಚು.

—ಜಾನ್ ಹೆರಾಲ್ಡ್

•

ಮನುಷ್ಯ ತನ್ನ ಪಾಪಗಳನ್ನು ಒಪ್ಪಿಕೊಳ್ಳುವದಿಲ್ಲವೇಕೆ? ಏಕೆಂದರೆ ಅವನಿನ್ನೂ ಅವುಗಳಲ್ಲೇ ಮುಳುಗಿರುತ್ತಾನೆ. ನಿದ್ರೆಯಿಂದೆದ್ದವನಿಗೆ ಮಾತ್ರ ತನ್ನ ಸ್ವಪ್ನಗಳನ್ನು ಹೇಳಲು ಸಾಧ್ಯವಾಗುತ ದೆ.

—ಸೆನೆಕಾ

•

ಮುಕ್ತ ಹೃದಯಿಗಳಲ್ಲದವರ ಎದುರು ನಾವು ನಮ್ಮ ಹೃದಯಗಳನ್ನು ಬಿಚ್ಚದಂತೆ ಜಾಗ್ರತೆ ವಹಿಸಬೇಕು.

-ಫ್ರಾನ್ಸಿಸ್ ಬ್ಯೂಮಾಂಟ್

•

ಶಿಸ್ತಿನ ಪಾಠ ಕಲಿಯುವುದು ಪ್ರತಿಕೂಲವೆಂಬ ಶಾಲೆಯಲ್ಲಿ.

—ಮಹಾತ್ಮಾ ಗಾಂಧಿ

---


## ಚಂದಾದಾರರಿಗೆ ಸೂಚನೆ

'ಕಸ್ತೂರಿ' ತಿಂಗಳ ಒಂದನೇ ದಿನಾಂಕದೊಳಗೆ ಪ್ರಕಟವಾಗುವುದು. ತಿಂಗಳ ೫ ನೇ ದಿನಾಂಕದೊಳಗೆ ತಲುಪದೇ ಹೋದ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪತ್ರವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

# ಈ ಸಂಚಿಕೆಯಲ್ಲಿ


| | | | |
|---|---|---|---|
| ಸಹಚಿಂತನ | ... | | ೩ |
| ಕ್ರೋಧ ಮತ್ತು ಅಹಂಕಾರ | ... | ಪ. ರಾಮಕೃಷ್ಣ ಶಾಸ್ತ್ರಿ | ೫ |
| ಭಾರತ- ಒಂದು ಅದಮ್ಯ ಚೇತನ | ... | ಎಚ್. ಶೇಷಾದ್ರಿ | ೭ |
| ಲಾಸ್ ಆಗಬಾರದ 'ಕೈ'– ಕೈಲಾಸಂ | ... | ಖಜಾನೆ ಕೃಷ್ಣಮೂರ್ತಿ | ೮ |
| ರಕ್ತ ಕೊರತೆಯ ನಿವಾರಣೆ ಹೇಗೆ? | ... | ಡಾ. ಎಚ್. ಮಹಾದೇವಪ್ಪ | ೧೮ |
| ನಾಶ (ಕಥೆ) | ... | "ಪಾರ್ವತಿ" | ೨೨ |
| ಪದಾರ್ಥ ಚಿಂತಾಮಣಿ | ... | ಪಾವೆಂ. | ೨೬ |
| ಮೊಗಲರ ಕಾಲದಲ್ಲಿ ಕರ್ನಾಟಕದ ರಾಜ್ಯವ್ಯವಸ್ಥೆ | | ಆದ್ಯ ರಾಮಾಚಾರ್ಯ | ೨೮ |
| ರತ್ನಗಳು-ನವರತ್ನಗಳು | ... | ಅ. ವೆಂ. ಗುಂಡೂರಾಯ | ೩೩ |
| ಪುನರಾವರ್ತಿತ ಏಕಕಗಳ ಅವಿಭಾಜ್ಯತೆ | ... | ಜಿ. ಟಿ. ನಾರಾಯಣರಾವ್ | ೩೬ |
| ಅಹೋಬಲ ಶಂಕರರೊಂದಿಗೆ (ಸಂದರ್ಶನ) | ... | ಡಾ. ಎಸ್. ಕೆ. ಜೋಶಿ | ೪೧ |
| ಇರುವೆ ಸಾಲು | ... | ಕೆ. ಚಂದ್ರಮೌಳಿ | ೪೯ |
| ಇಸಡೋರಾ ಡಂಕನ್–ಜಗತ್ತನ್ನೇ ಕುಣಿಸಿದ ನೃತ್ಯಗಾತಿ | | ಮುನಿಯಾಲ್ ಗಣೇಶ ಶೆಣೈ | ೫೩ |
| ಪರಿಸರ ಕಾರ್ಯಕರ್ತನಾಗಿ ಎರಡು ವರ್ಷ | ... | ಪಾಂಡುರಂಗ ಹೆಗಡೆ | ೫೭ |
| ಜೋರಾಸ್ಟ್ಯಾಂಕೋದ ಟಾಗೋರರು | ... | ಪ್ರೊ. ಸೋವ್ರೋನ್ ಸೋಮ್ | ೬೬ |
| ನಿಮ್ಮ ಶಬ್ದಭಾಂಡಾರ ಬೆಳೆಯಲಿ | ... | | ೭೩ |
| ಸೇಡು (ಕಥೆ) | ... | ರಾಬರ್ಟ್ ಬಾರ್ | ೭೫ |
| ಕತ್ತಲ ಕಂದಮ್ಮ ಕೇಟಿ | ... | ರಾಬರ್ಟ್ ಹಾಲ್ | ೭೯ |
| ಮುಟ್ಟಿದರೆ ಮುನಿ ಲೋಹ | ... | ತ. ಕು. ನಾಗಭೂಷಣ | ೮೩ |
| ಅಫೀಮು | ... | ಮೋಹನ ಗ. ಹೆಗಡೆ | ೮೯ |
| ಚಿಂತೆ ದೂರಾಗಬೇಕೆ? | ... | ಎಚ್. ಪಾಂಡುರಂಗ ವಿಟ್ಠಲ | ೯೪ |
| ಶವ (ಕಥೆ) | ... | ಕುನ್ನಂತಾನಂ ರಾಮಚಂದ್ರ | ೯೭ |
| ಇದುವೆ ಜೀವ ಇದು ಜೀವನ | ... | | ೧೦೩ |
| ಆತ್ಮಹತ್ಯೆ ಅಪರಾಧವೆ? | ... | ಸಂಜೀವ | ೧೦೫ |

ಪುಸ್ತಕ ವಿಭಾಗ

ಡಾನ್ ನದಿಯ ತೀರದಲ್ಲಿ ಮೂಲ ರಶಿಯನ್: ಮಿಖಾಯಿಲ್ ಶೊಲೊಖೊವ್ ೧೦೯
ಸಂಗ್ರಹಾನುವಾದ: ಪಿ. ಪಿ. ಉಪಾಧ್ಯಾಯ

ಸಿಹಿಚಿಗುರು

ಅಕ್ಟೋಬರ್ 'ಕಸ್ತೂರಿ'ಯಲ್ಲಿ ಪಾ. ವೆಂ. ಅವರು ಬರೆದ 'ಪದಾರ್ಥ ಚಿಂತಾಮಣಿ'ಯ ಕೊನೆಯಲ್ಲಿ (ಪುಟ ೨೯) ಹುಡುಗ ಎಂಬ ಶಬ್ದ ಪೃಥುಕ ಎಂಬ ಸಂಸ್ಕೃತಪದದಿಂದ ಬಂದಿರಬೇಕು ಎಂದಿದ್ದಾರೆ.

ಆದರೆ ಈ ಪದ ಸಂಸ್ಕೃತದ ಪುತ್ರ ಶೌರಸೇನಿಯಲ್ಲಿ ಪುತ್ತೊ ಪುಡುಗೋ ಆಗಿ ಹುಡುಗನಾಗಿರಬಹುದೆಂದೂ ಸಂಸ್ಕೃತದ ಅರ್ಭಕ ಶೌರಸೇನೆಯಲ್ಲಿ ಭುರಗೂ ಆಗಿ-ಮಡುಗೋ ಆಗಿ ಹುಡುಗವಾಗಿರಬಹುದೆಂದೂ ಅನ್ಯತ್ರ ಊಹೆಗಳಿವೆ.

ಸುಳ್ಯ (ದ. ಕ.) –ತುದಿಯಡ್ಕ ವಿಷ್ಣಯ್ಯ

ನವೆಂಬರ್ ತಿಂಗಳ ಸಂಚಿಕೆಯ 'ಪದಾರ್ಥ ಚಿಂತಾಮಣಿ'ಯಲ್ಲಿ ಶ್ರೀ ಪಾ. ವೆಂ. ಆಚಾರ್ಯರು ಕೆಲವು ಪದಗಳ ಸಮುಚಿತ ವಿಶ್ಲೇಷಣೆ ಎಸಗಿದ್ದಾರೆ. ಕೊನೆಯಲ್ಲಿ 'ಹುಡು ಯುದ್ಧ' ಎಂದರೆ ಗುಜರಾತಿಯಲ್ಲಿ ಟಗರು ಕಾಳಗವೆಂದಿದೆಯೆಂದು ಬರೆದಿದ್ದಾರಷ್ಟೆ? ಆ ಕುರಿತು ಕಿಂಚಿತ್ ವಿವರವನ್ನು ನನ್ನರಿವಿನಿಂದ ಸೂಚಿಸಬಯಸುತ್ತೇನೆ.

ದಿ. ಪಂಡಿತ ಮುಳಿಯ ತಿಮ್ಮಪ್ಪಯ್ಯ ಸ್ಮಾರಕ 'ಶ್ರದ್ಧಾಂಜಲಿ' ಗ್ರಂಥದಲ್ಲಿ, ಸಂಸ್ಕೃತ ಕನ್ನಡೋಭಯ ಭಾಷೆಗಳಲ್ಲಿ ಉದ್ದಾಮ ಪಂಡಿತರಾಗಿದ್ದ ದಿ. ಕಡವ ಶಂಭುಶರ್ಮರು ಬರೆದೊಂದು ಕವನ ವಿಂತಿದೆ:

**ನಿನ್ನಡಿ ಮುಟ್ಟಿದ ಹುಡುಗಂ**
**ಕನ್ನಡ ಪಂಡಿತನೆನಿಪ್ಪುದೇಂ ಪಿರಿದಾಯ್ತೇ?**
**ಕನ್ನಡ ಕವಿಯುಮವಂ ಮೇಣ್**
**ನಿನ್ನವರು ವೊಳರೆ ಪೇಳ ತಿಮ್ಮಪ್ಪಯ್ಯ॥**

ಅಡಿಟಿಪ್ಪಣಿಯಲ್ಲಿ ಅವರು ಹೀಗೆ ವಿವರಿಸಿದ್ದಾರೆ. ಹುಡುಗಂ–ಸಂಸ್ಕೃತ ರೂಪವಿದು—ಕುರಿಮರಿಯಂತಿರುವ ಅಜ್ಞನೆಂಬರ್ಥದಲ್ಲಿ. ಲಾಕ್ಷಣಿಕ - ಹುಡುಃ; ಹುಡುಕಃ, (ಸ್ವಾರ್ಥೇ ಕ ಪ್ರತ್ಯಯಃ) ಹಕಾರಕ್ಕೆ ಪಕಾರವಿಲ್ಲ. ಹಾಲ-ಹಾಲು ಇತಿವತ್ 'ವ,ಮ; ಹ,ಪ,— ಭೇದದಿಂ ಅರಿದಲ್ತೆ ಕನ್ನಡಂ'. ಪ್ರಯೋಗ: 'ಜಂಬುಕೋ ಹುಡುಯುದ್ಧೇನ ವಯಂಚಾಷಾಢಭೂತಿನಾ' ಎಂದಿದು ದುರ್ಗಸಿಂಹನ ಪಂಚತಂತ್ರದ ಆಷಾಢಭೂತಿಯ ಕಥೆಯ ಪ್ರಸ್ತಾವನಾ ಶ್ಲೋಕವಾಗಿದೆ.

ಜಾಲ್ಸೂರು ದ.ಕ.–ತೆಕ್ಕುಂಜ ದಾಮೋದರಭಟ್ಟ

ನಿಮ್ಮ ನವಂಬರ್ ಸಂಚಿಕೆಯಲ್ಲಿ ಭಗವದ್ಗೀತಾ ೯-೩೨ರ ಅರ್ಥವನ್ನು ಕುರಿತು ಪಾ. ವೆಂ. ಅವರ ಸ್ಪಷ್ಟೀಕರಣ ಸಮರ್ಪಕವಲ್ಲ. ಬನ್ನಂಜೆಯವರ ಅನುವಾದ ಸಂದರ್ಭಕ್ಕೂ ಶಾಸ್ತ್ರಕ್ಕೂ ವಿರುದ್ಧವಾಗಿದ್ದರೆ ಅದು ಪ್ರಮಾಣವಾಗಲಾರದು.

ವ್ಯಾಕರಣ ದೃಷ್ಟಿಯಿಂದ ನೋಡಿದರೂ ಸ್ತ್ರೀ ವೈಶ್ಯ ಶೂದ್ರರೆಲ್ಲರೂ ಪಾಪಯೋನಿಗಳೆಂದು ಅರ್ಥ ಮಾಡಿದರೆ "ಯೇಽಪಿಸ್ಯುಃ" ಎಂಬ ಪದಗಳು ವ್ಯರ್ಥವಾಗುತ್ತವೆ. ಅವಕ್ಕೆ ಮಾಡಬಹುದಾದ ಅರ್ಥಗಳು ಎರಡೇ: (೧) ಸ್ತ್ರೀ ವೈಶ್ಯ ಶೂದ್ರರೆಲ್ಲರೂ ಪಾಪಿಗಳಲ್ಲ. ಅವರಲ್ಲಿ "ಯಾರು ಪಾಪಯೋನಿಗಳೋ ಅವರು"; (೨) ಸ್ತ್ರೀಯರು ವೈಶ್ಯರು ಶೂದ್ರರು ಮತ್ತು ಪಾಪಯೋನಿಗಳಲ್ಲಿ ಜನಿಸಿದವರು. ಇವೆರಡಕ್ಕೂ ಬನ್ನಂಜೆಯವರ ಅನುವಾದ ವಿರುದ್ಧವಾಗಿದೆ.

ಇಲ್ಲಿಯ ಸಂದರ್ಭ ಭಕ್ತಿಯ ಮಹಿಮೆಯನ್ನು ಹೇಳುವದು. ಗೀತೆಯ ಒಟ್ಟು ಸಂದರ್ಭ ಸ್ವಕರ್ಮದ ಮಹತ್ವವನ್ನು ಹೇಳುವದು. ಆದ್ದರಿಂದ ಸ್ವಕರ್ಮದಲ್ಲಿ ನಿರತರಾದವರು ಯಾವ ವರ್ಣದಲ್ಲಿದ್ದರೂ ಸಿದ್ಧಿಯನ್ನು ಪಡೆಯಲೇಬೇಕು. ಆದ್ದರಿಂದ ಯಾವ ವರ್ಣದವರಾಗಲಿ ಸ್ವಭಾವತಃ ಪಾಪಯೋನಿಗಳೆಂದು ಹೇಳಲಾಗುವುದಿಲ್ಲ. "ದೈತೇಯಾ ಯಕ್ಷರಕ್ಷಾಂಸಿ ಸ್ತ್ರೀಯಃ ಶೂದ್ರಾಃ ವ್ರಜೌಕಸಃ ಖಗಾಃ ಮೃಗಾಃ ಪಾಪಜೀವಾಃ ಸಂತಿಹ್ಯಚ್ಯುತತಾಂಗತಾಃ" ಎಂಬ ಭಾಗವತ ವಚನದಲ್ಲಿ "ಪಾಪಜೀವಾಃ" ಹೇಗೋ ಹಾಗೇ ಪ್ರಸ್ತುತ ಶ್ಲೋಕದಲ್ಲಿ "ಪಾಪಯೋನಯಃ". ಸ್ವತಃ ಶ್ರೀಮನ್ಮಧ್ವಾಚಾರ್ಯರೇ ಸರ್ವಶಾಸ್ತ್ರಾರ್ಥ ನಿರ್ಣಯವೆಂದ ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ (ಅ. ೨೨-೯೭) "ಸರ್ವೈರ್ವರ್ಣೈಃ ವಿಷ್ಣುರೇವಾಭಿಪೂಜ್ಯಃ ತದ್ಭಕ್ತಿರೇವಾಖಿಲಾನಾಂಚ ಧರ್ಮೋ, ಯಥಾ ಯೋಗ್ಯಂ ಜ್ಞಾನಮಸ್ಯಾಪಿ ಪೂಜಾ" ಎಂದಿರುವುದರಿಂದ ವರ್ಣಮಾತ್ರದಿಂದಲೇ ಯಾರನ್ನೂ ಪಾಪಯೋನಯಃ ಎನ್ನಲಾಗದು.

ಬೆಂಗಳೂರು –ಪಿ. ವಿ. ಜೋಶಿ

('ಸಹಚಿಂತನ'ದ ಮಿತಿಯೊಳಗೆ ಬಗೆಹರಿಯು ಬಹುದಾದ ವಾದ ಇದಲ್ಲ. ಶ್ರೀ ಪಿ. ವಿ. ಜೋಶಿಯವರಂಥ ಮಾನ್ಯ ವಿದ್ವಾಂಸರೊಡನೆ ಹುರುಡುವ ಇಚ್ಛೆಯೂ ನನಗಿಲ್ಲ. ಆದರೆ ಪ್ರಸ್ತುತ ಶ್ಲೋಕದ ಮುಂದಿನ (೯–೩೩) ಶ್ಲೋಕದಲ್ಲಿಯೇ "ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾ ಭಕ್ತಾ ರಾಜರ್ಷಯಸ್ತಥಾ" ಎನ್ನುವಲ್ಲಿ ಕೆಳಗಿನ ಎರಡು ವರ್ಣಗಳಿಗಿಂತ ಭಿನ್ನರಾದ ಬ್ರಾಹ್ಮಣ ಮತ್ತು ರಾಜರ್ಷಿಗಳನ್ನು "ಪುಣ್ಯಾಃ" ಎಂದಿರುವಾಗ ಹಿಂದಿನ ಶ್ಲೋಕದಲ್ಲಿ ಬರುವ ಎರಡು ವರ್ಣಗಳನ್ನು "ಪಾಪಃ" ಎನ್ನುವ ವ್ಯಂಜನೆಯಿಂದ ಹೇಗೆ ಪಾರು ಮಾಡುವುದೋ ತಿಳಿಯುವುದಿಲ್ಲ. ಪಾಪ ಮಾಡಿ ಕೆಳಗಿನ ವರ್ಣ ಗಳಲ್ಲಿ ಮತ್ತು ಸ್ತ್ರೀಯರಾಗಿ ಹುಟ್ಟುತ್ತಾರೆ; ಹರಿ ಭಕ್ತಿಯಿಂದ ಅವರೂ ಪಾಪಮುಕ್ತರಾಗಿ ಪರಗತಿಯನ್ನು ಹೊಂದುತ್ತಾರೆ – ಎಂಬುದು ಅನಿವಾರ್ಯವಾಗುತ್ತದೆಂದೇ ನನಗೆ ತೋರು ತ್ತದೆ. –ಪಾವೆಂ.)

### ಮುದ್ರಾರಾಕ್ಷಸ

ನವೆಂಬರ್ 'ಕಸ್ತೂರಿ'ಯಲ್ಲಿ ಶ್ರೀ ಪದ್ಯಾಣ ಪರಮೇಶ್ವರ ಭಟ್ ಇವರ 'ಪ್ರೀತಿಗೆ ಬಲಿ' ಯಲ್ಲಿ ಓರ್ವ ವೃದ್ಧ ಕೊಟ್ಟ 'ಹಳಸಿದ ರೊಟ್ಟಿ' ತಿಂದು ಭಗವಾನ್ ಬುದ್ಧನಿಗೆ 'ಆಮ ಶಂಕೆ' ರೋಗ ಕಾರಣವಾಗಿ ಮರಣ ಬಂದಿತು ಎಂದಿದೆ (ಮುದುಕನ ಪ್ರೀತಿಗೆ ಮಹಾತ್ಮನ ಜೀವ ಬಲಿಯಾಯಿತು).

ಆದರೆ ಮಾಂಸ (ಹಂದಿ ಮಾಂಸ) ತಿಂದು 'ಆಮಶಂಕೆ' ಉಂಟಾಗಿ ಬುದ್ಧ ಮರಣ ಹೊಂದಿದ ಎಂದು ಸ್ಪಷ್ಟವಾಗಿ ಓದಿದ ನೆನಪು.
ಪುಣೆ–೪ –ಪ್ರಮೋದ ನಾಡಗೌಡಾ

ನವೆಂಬರ್ ತಿಂಗಳ 'ಕಸ್ತೂರಿ'ಯಲ್ಲಿ ನನ್ನ ಕಿರುಲೇಖನ 'ಪ್ರೀತಿಗೆ ಬಲಿ' ಯನ್ನು ಪ್ರಕಟಿ ಸುವ ಕೃಪೆದೋರಿದ್ದಕ್ಕಾಗಿ ನನ್ನ ತುಂಬು ಹೃದಯದ ಕೃತಜ್ಞತೆಗಳು. ಲೇಖನದ ಶೀರ್ಷಿಕೆ ಯನ್ನು ಮುದ್ರಾರಾಕ್ಷಸ ವಿರೂಪಗೊಳಿಸಿದ್ದು ಸ್ವಲ್ಪ ಬೇಸರವುಂಟುಮಾಡಿತು.
ಉಡುಪಿ –ಪದ್ಯಾಣ ಪರಮೇಶ್ವರ ಭಟ್

ನವೆಂಬರ್ ೮೬ರ ಸಂಚಿಕೆಯಲ್ಲಿ ೫ನೇ ಪುಟ ದಲ್ಲಿ ದೊಡ್ಡ ಅಕ್ಷರದ ತಲೆ ಬರಹ 'ಪ್ರಿತೀಗೆ ಬಲಿ' ಯಾಗಿ ಈ ರಕ್ಕಸ ಸರಾಗವಾಗಿ ಅಲ್ಲಲ್ಲಿ ದಾಂಧಲೆ ಮಾಡುತ್ತಾ, ೬೪ನೇ ಪುಟದ 'ಹೊಸ ಬಗೆಯ ಪಾಸ್‌ಪೋರ್ಟ್ ಮಾದರಿ'ಯಲ್ಲಿ ಆಶ್ಚರ್ಯಕರ ವಾಗಿ ಹೀಗೆ ನುಸುಳಿದ್ದಾನೆ! ಕೊಡ ಮಾಡಿದ ದಿನಾಂಕ ೧೩-೨-೮೫, ಅವಧಿ ಮುಗಿಯುವ ದಿನಾಂಕ ೧೩-೨-೧೯೮೦. ಆಹಾ! ೫ ವರ್ಷಗಳ ಮೊದಲೇ ಮುಗಿದ ಅವಧಿಗಾಗಿ ನೀಡಲಾಗುವ ಪಾಸ್‌ಪೋರ್ಟ್ ಹೊಸ ಮಾದರಿಯದ್ದೆ ಆಗಿರುವುದು ಸತ್ಯ!

ವ್ಯಂಗಚಿತ್ರಕಾರನ ತಪ್ಪು ಎಣಿಕೆಯೂ ಮುದ್ರಾರಾಕ್ಷಸನ ಇನ್ನೊಂದು ಅವತಾರ! ೨೧ನೇ ಪುಟದಲ್ಲಿ ಅಂಚೆ ಪೆಟ್ಟಿಗೆ ಮೇಲೆ "NEXT DELIVERY" ಎಂದು ಬರೆ ದಿದೆ! ಯಾವ ಯಾವ ಊರಿನಲ್ಲೂ ಯಾವ ಅಂಚೆ ಪೆಟ್ಟಿಗೆ ಮೇಲೂ ಈ ಶಬ್ದಗಳು ಕಾಣಿಸಿಗ ಲಾರವು. ಅದು ಈ ರೀತಿ ಇರಬೇಕಿತ್ತು. NEXT CLEARANCE. ಆದರೆ DELIVERY ಶಬ್ದ ಲೋಪವಾದರೆ ವ್ಯಂಗ್ಯ ಚಿತ್ರ ಅರ್ಥಪೂರ್ಣವಾಗದು! ಇಂಥವುಗಳನ್ನು ಪೂರ್ವಭಾವಿಯಾಗಿ ದೀರ್ಘವಾಗಿ ಚಿಂತಿಸಿ ಪ್ರಕ ಟಿಸಿದರೆ 'ಕಸ್ತೂರಿ'ಯ 'ಮಟ್ಟ' ಇಳಿಯದೆ ಇನ್ನೂ ಏರಬಹುದೇನೊ!
ಕುಳಾಯಿ ದ. ಕ. -ಎಸ್. ಪದ್ಮನಾಭ

### ಸಪ್ತಸೂತ್ರಗಳು

ನವೆಂಬರ್ 'ಕಸ್ತೂರಿ'ಯಲ್ಲಿ ಪ್ರಕಟಗೊಂಡ ಡಾ. ಹಾವನೂರರ—'ಮನಃಶಾಂತಿಯ ಮರ್ಮ (ಸಪ್ತ) ಸೂತ್ರಗಳು' ನನಗೆ ಹಿಡಿಸಿದವು. ಲೇಖ ಕರು ಮಂಗಳೂರಲ್ಲಿದ್ದಾಗ ತಮ್ಮ 'ಕರ್ತವ್ಯದತ್ತ ಪೂರ್ಣಗಮನ'ದ ಮೂಲಕ ನನ್ನಂಥವರ ಗಮನ ಸೆಳೆದಿದ್ದರು. ಇನ್ನುಳಿದ ಸೂತ್ರಗಳೂ ಅನುಭವ ದಿಂದ ಪಕ್ವಗೊಂಡವುಗಳೇ! ಹಾಗೆಯೇ 'ಮಾದಕ ಮದ್ದಿನ ಮಾಟ' ಚಿಂತೆ-ಚಿಂತನೆಗಳಿಗೆ ಪ್ರೇರಣೆ ನೀಡಿದೆ.
ಸುರತ್ಕಲ್ಲು (ದ. ಕ.) –ಸೀ. ಹೊಸಬೆಟ್ಟು.

ಚಂದಮಾಮ

ವರ್ಷ : ೩೧ ಡಿಸೆಂಬರ್, ೧೯೮೬ ಸಂಚಿಕೆ : ೪

# ಕ್ರೋಧ ಮತ್ತು ಅಹಂಕಾರ

**ಪ. ರಾಮಕೃಷ್ಣ ಶಾಸ್ತ್ರಿ**

ಮಹಾಭಾರತದ ಯುದ್ಧ ಮುಗಿದ ಮೇಲೆ ಶ್ರೀಕೃಷ್ಣ ಮರುಭೂಮಿಯಲ್ಲಿ ನೆಲೆಸಿದ್ದ ಉತ್ತಂಕ ಮುನಿಯ ಆಶ್ರಮಕ್ಕೆ ಹೋದ. ಅವನನ್ನು ಕಾಣುತ್ತಲೆ ಉತ್ತಂಕ ಕೋಪದಿಂದ "ಶ್ರೀಕೃಷ್ಣಾ, ಕೌರವ ಪಾಂಡವರ ನಡುವೆ ನೀನಿದ್ದರೂ ಭೀಕರ ಯುದ್ಧದಂಥ ಅನರ್ಥವನ್ನು ತಡೆಯಲು ನಿನ್ನಿಂದಾಗಲಿಲ್ಲವೆ? ನಿನ್ನನ್ನೀಗ ಶಪಿಸುತ್ತೇನೆ," ಎಂದು ಭುಸುಗುಟ್ಟಿದ.

ಆಗ ಶ್ರೀಕೃಷ್ಣ ಮುಗುಳ್ನಕ್ಕು, "ಮುನಿಗಳೇ, ನಿಮ್ಮಲ್ಲಿರುವ ಎಳ್ಳಿನಷ್ಟು ತಪೋಬಲ ನನ್ನ–

ನ್ನೇನೂ ಮಾಡಲಾರದು. ಆದರೂ ನನ್ನಲ್ಲಿ ನೀವಿರಿಸಿದ ನಿಷ್ಠೆಗಾಗಿ ನಾನು ಮೆಚ್ಚಿ ನಿಮಗೊಂದು ವರ ಕೊಡಲು ನಿಶ್ಚಯಿಸಿದ್ದೇನೆ. ಏನು ಬೇಕು ಕೋರಿಕೊಳ್ಳಿ" ಎಂದ.

ಉತ್ತಂಕ ಲಜ್ಜೆಯಿಂದ ತಲೆ ತಗ್ಗಿಸಿ, "ಸ್ವಾಮಿ, ನಾನಿರುವುದು ಮರಭೂಮಿ. ಬಯಸಿದಾಗ ನನಗಿಲ್ಲಿ ನೀರು ಸಿಕ್ಕಿದರೆ ತಪಸ್ಸಿಗೆ ತುಂಬ ಸಹಾಯವಾಗುತ್ತದೆ," ಎಂದು ಹೇಳಿದ.

"ಇಲ್ಲಿ ಬಯಸಿದಾಗ ನಿಮಗೆ ನೀರು ಸಿಕ್ಕಲಿ," ಎಂದು ವರವಿತ್ತ ಶ್ರೀಕೃಷ್ಣ.

ಕೆಲವು ಕಾಲ ಕಳೆಯಿತು. ಮರುಭೂಮಿಯಲ್ಲಿ ಪಯಣ ಹೊರಟಿದ್ದ ಉತ್ತಂಕನಿಗೆ ತಾಳಲಾಗದ ಬಾಯಾರಿಕೆಯಾಯಿತು. ಅವನು ನೀರಿಗಾಗಿ ಶ್ರೀಕೃಷ್ಣನನ್ನು ನೆನೆದ. ಅಗ ಒಬ್ಬ ಅಸ್ಪೃಶ್ಯನು ಮಡಕೆಯಲ್ಲಿ ನೀರು ತುಂಬಿಕೊಂಡು ಅವನೆದುರಿಗೆ ಬಂದು, "ಮುನಿವರ್ಯಾ, ಈ ಜಲವನ್ನು ಪಾನ ಮಾಡಿ ತಮ್ಮ ದಾಹವನ್ನು ಪರಿಹರಿಸಿಕೊಳ್ಳಿ." ಎಂದ ವಿನೀತನಾಗಿ.

ಉತ್ತಂಕನ ಅಹಂಕಾರ ಹೆಡೆಯೆತ್ತಿತು. "ಛೀ ಚಾಂಡಾಲ, ತೊಲಗಾಚೆ. ಶ್ರೀಕೃಷ್ಣನನ್ನು ಕ್ರೋಧದಿಂದ ಮೆಚ್ಚಿಸಿ ವರ ಪಡೆದ ಉತ್ತಂಕ ನೀನು ಮುಟ್ಟಿದ ನೀರು ಕುಡಿಯುತ್ತಾನೆಯೇ? ಬೇಗ ಇಲ್ಲಿಂದ ಹೋಗು," ಎಂದು ನೀರನ್ನು ತಿರಸ್ಕರಿಸಿದ. ಶ್ರೀಕೃಷ್ಣ ತನಗಿಂಥ ಘಾತ ಮಾಡಬಹುದೇ? ಎಂದೂ ಯೋಚಿಸಿದ.

ಆಗ ಅಸ್ಪೃಶ್ಯ ಮಾಯವಾಗಿ, ಶ್ರೀಕೃಷ್ಣ ಮುಗುಳ್ನಗುತ್ತಾ ಕಾಣಿಸಿಕೊಂಡ.

"ಹುಚ್ಚು ಮುನಿಯೇ, ಮೇಲುಜಾತಿಯವ ಎಂಬ ಅಹಂಕಾರದಿಂದ ನೀನು ಅಮರತ್ವವನ್ನು ಕಳೆದುಕೊಂಡೆ. ಅಸ್ಪೃಶ್ಯನ ರೂಪದಲ್ಲಿ ಬಂದವ ದೇವೇಂದ್ರ. ಅವನ ಕೈ ಮಡಕೆಯೊಳಗೆ ಇದ್ದುದು ಅಮೃತ! ಆದರೆ ತಾನೇ ಪವಿತ್ರ ಎಂಬ ಒಣ ಜಂಭ ನಿನಗೆ ಮುಳುವಾಯಿತು. ಕ್ರೋಧದಿಂದ ನನ್ನನ್ನು ನೀನು ಗೆದ್ದೆ. ಅಹಂಕಾರದಿಂದ ಕಳೆದುಕೊಂಡೆ" ಎಂದ ಶ್ರೀಕೃಷ್ಣ ಉತ್ತಂಕನಿಗೆ.

ಆದರೂ, ಮುನಿಗೆ ತಾನಿತ್ತ ವರ ಹುಸಿಯಾಗಬಾರದೆಂದು ಶ್ರೀಕೃಷ್ಣ ಅವನು ಬಯಸಿದಾಗ ಮೇಘಗಳು ಮಳೆಗರೆಯಲಿ ಎಂದೂ ಆ ಮೇಘಗಳು 'ಉತ್ತಂಕ ಮೇಘ'ವೆಂಬ ಹೆಸರು ಪಡೆಯಲೆಂದೂ ಹರಸಿದ. 



ಶ್ರೀ ಶ್ರೀನಿವಾಸದಾಸರು ಶ್ರೀ ಪುರಂದರದಾಸರ ಪದವಾದ "ನೀನ್ಯಾಕೋ ನಿನ್ನ ಹಂಗ್ಯಾಕೊ ರಂಗ" ಎಂಬ ಕೀರ್ತನೆಯನ್ನು ಚನ್ನಾಗಿ ಹಾಡಿ ಜನರಲ್ಲಿ ಭಕ್ತಿಯನ್ನು ಜಾಗ್ರತಿಗೊಳಿಸಿದರು. ಕೀರ್ತನೆ ಮುಗಿದ ನಂತರ ನಾನು ಮತ್ತು ಶೀನು ಮನೆಗೆ ಬರುತ್ತಿರುವಾಗ, ಶೀನು "ರಾಜಣ್ಣ" ಅವರೆ ದಾಸರು 'ನೀನ್ಯಾಕೋ' ಪದವನ್ನು ಎಲ್ಲ ಅರ್ಥವಾಗುವಂತೆ ಚನ್ನಾಗಿ ಹಾಡಿದರು. ಆದರೆ ಆ ಪದದಲ್ಲಿ "ಕರೀಮು–ಕರಿಗೆ–ಸಿಕ್ಕು ಮೊರೆ ಇಡುತ್ತಿರುವಾಗ" ಅಂತಾ ಹಾಡಿದರಲ್ಲ ಈ ಕರೀಮುಸಾಬ ಆ ಆನೆಯ ಕೈಯ್ಯಲ್ಲಿ ಯಾವಾಗ್ಗ ಸಿಕ್ಕು ಹಾಕಿಕೊಂಡಿದ್ದ ಸಂದರ್ಭ ಯಾವುದು? ಅಂತಾ ತನ್ನ ಪಾಂಡಿತ್ಯ ಪೂರ್ಣ ಸಂದೇಹ ವ್ಯಕ್ತಪಡಿಸಿದ. ಆದರೆ ದಾಸರ ಪದ ಇದ್ದುದು "ಕರಿ–ಮಕರಿಗೆ (ಮೊಸಳೆಗೆ) ಸಿಕ್ಕು" ಬಂದಿದೆ ಎಂದು ಶೀನುಗೆ ತಿಳಿಸುವಷ್ಟೊತ್ತಿಗೆ ನಾನು ಸುಸ್ತಾದೆ.

–ಧ್ರುವರಾಜ ಜೋಶಿ

# ಭಾರತ-
# ಒಂದು ಅದಮ್ಯ ಚೇತನ

ಇದು ಭಾರತ ಹಸುರ ಜಡೆ ಹೆಣೆದ ಜಡ್ಡು ಗಟ್ಟಿದ ಆಲ
ತುಳಿತ ಹೊಡೆತಕೆ ಸಿಕ್ಕಿಯೂ ನಲುಗದು ಎದುರಾಳಿಯೆ ಇದ್ದರೂ ಕಾಲ
ಶತ ಶತಮಾನ ಪ್ರಹಾರಕ್ಕೂ ಜಗ್ಗದ ವಜ್ರ ಕಠಿಣ ದೇಹವೀ ಕಾಂಡ
ಚಿಗುರ ಸಣ್ಣ ಟೊಂಗೆಯೂ ಬಲಿತು ಕಟರವಾಗಿಹ ಕಾಂಡ
ಕೆಂಧೂಳನೆಬ್ಬಿಸುತಿಹ ಬುಸುಗುಟ್ಟುವ ಹಗೆಯು ಕಾವಿನ ಪಿತ್ತ
ಬುಡದಲಿ ಇಹುದು ನಳನಳಿಸುತಿಹ ವಿಷಸರ್ಪಗಳ ಹುತ್ತ
ತಮ್ಮಲೇ ತರಿದಾಡುವ ಕಟುಕ ಕಾಡು ಮೃಗಗಳ ಕಾದಾಟ
ಗೊರಸಲಿ ಒದೆಯುತ ದೀನ ಮಿಕವ ತೊತ್ತಳದುಳಿಯುವನೋಟ
ಬಡಗೆದ್ದಲೂ ಬಿಡದೆ ಸಿಕ್ಕ ಜಡ ಬೇರಿನ ಬುಡವನೆ ಜಗಿಯುವ ಆಟ
ಸಾಗುತಲಿದೆ ಹೀಗೆಯೇ ಜೀವನದ ಹೊಸಕಾಟ ಮಿಡುಕಾಟ
ಜೀವರಸ ಮೇಲೇರುತಲಿದೆ ಎತ್ತರ ಅತಿ ಎತ್ತರಕೂ ಪಸರಿಸಿವೆ
ಮೇಲೆ ಕಂಪಿಸಿಹ ಒಂದೊಂದು ಕಿರು ಟೊಂಗೆಯು ಬಳಿಯೂ ಉಸುರಿದೆ
ಕೊನರಿಡಿಸಲು ನಗಿಸಲು ಹವಣಿಕೆ ನಡೆಸುತ ಮಾಡಿದೆ ಜತನ
ನೇಸರ ಆಶಾರಶ್ಮಿಯನೋಲೈಸುತ ನೀಡಿದೆ ಹಾರ್ದಿಕ ಆಮಂತ್ರಣ
ರೆಂಬೆ ಕೊಂಬೆಗಳ ತೋರಿಸಿ ಕೂಗಿಕರೆಯುತಿದೆ ಪಕ್ಷಿಸಂಕುಲವ
ನಿಜ ತನ್ಮಯು ರಾಗದೆ ಹಾಡಲು ಕಾಲನ ಕಠೋರ ಸತ್ಸಂದ ಸಂಭವ
ಜರ್ಝರಿತವಾಗದೆ ನಿಂತಿಹುದು ಅಚಲಿತವಾಗಿ ಅದಮ್ಯ ಶಕ್ತಿಯು ತೇರು
ಅನೂಹ್ಯ ನಮ್ಮ ಭಾರತವು ಧರ್ಮಸಹಿಷ್ಣುತೆ ಶಾಂತಿ ಸಹನೆ ಕೀರ್ತಿಯ ಮೇರು

ಮೂಲ ಗುಜರಾತಿ: ಉಮಾಶಂಕರ ಜೋಶಿ
ಕನ್ನಡಕ್ಕೆ ಛಾಯಾನುವಾದ: ಎಚ್. ಶೇಷಾದ್ರಿ

# ಲಾಸ್ ಆಗಬಾರದ 'ಕೈ' -ಕೈಲಾಸಂ

**"ಕರ್ನಾಟಕ ಪ್ರಹಸನ ಪಿತಾಮಹ, ರುಂಡಮುಂಡೋತ್ಪನ್ನನಾದ ಚಂಡಪ್ರಚಂಡ ಗುಂಡೂರಾಯ" ಇತಿ ಬಿರುದಾಂಕಿತ ಕೈಲಾಸಂ ಜನ್ಮಶತಾಬ್ದಿಯನ್ನು ಆಗಲೆ ಆಚರಿಸಿದ್ದೇವೆ. ಗುರಿ ತಪ್ಪಿದ ದೋಣಿ ಗಾಳಿ ಬಿಟ್ಟತ್ತ ತೇಲುವಂತೆ ಎತ್ತೆತ್ತಲೋ ನಡೆದಿರುವ ಇಂದಿನ ವಿದ್ಯಾರ್ಥಿ ವೃಂದವನ್ನು ಕಣ್ಣೆದುರಿರಿಸಿಕೊಂಡು ಲೇಖಕರು ಕೈಲಾಸಂ ಸಾಹಿತ್ಯವನ್ನು ಅಭ್ಯಸಿಸಿದ್ದಾರೆ. ಇದು ಅವರ ಅಧ್ಯಯನದ ಫಲ.**

## ಖಜಾನೆ ಕೃಷ್ಣಮೂರ್ತಿ

ಕೃತಿ ರಚನೆ ಮಾಡುತ್ತ ಹೋಗುತ್ತಿರುವ ವ್ಯಕ್ತಿಯು ಬದುಕಿರುವವರೆಗೆ ಅವನ ಕೃತಿಗಳ ಸಂಖ್ಯೆ ಬೆಳೆಯುತ್ತಲೇ ಹೋಗುತ್ತಿರುತ್ತದೆ. ಅವನನ್ನು ಕುರಿತು ಬರೆಯುವ ಅಥವಾ ಮಾತಾಡುವ ವ್ಯಕ್ತಿಗಳಿಗೆ ಹೊಸ ಹೊಸ ಸಂಗತಿಗಳೂ ಆಯಾಮಗಳೂ ದೊರೆಯುತ್ತಲೇ ಹೋಗುತ್ತವೆ. ಆದರೆ ಅವನು ಕಣ್ಮುಚ್ಚಿದನೆಂದರೆ ಅವನ ಕೃತಿ ರಚನೆಗೆ ಕೊನೆ ಬರುತ್ತದೆ. ಆಗ ಅವನ ಕುರಿತು ಆಡುವ ಮಾತು, ಬರೆವ ವಿಷಯಗಳು ಹಾಡಿದ್ದೇ ಹಾಡುವಂತಾಗಿ, ನಿಂತ ನೀರಾಗಿ, ಕ್ಲೀಷೆಯಾಗಿ ಕೊನೆಗೊಮ್ಮೆ ಅದಕ್ಕೆ ಮುಕ್ತಾಯ ಬರುತ್ತದೆ. ಅದೇ ಹಾಡನ್ನು ಬೇರೆ ಬೇರೆ ರಾಗ-ತಾಳಗಳಲ್ಲಿ ಹಾಡಿ ತೋರಿಸಹೋದರೂ ಅದು – ಕೈಲಾಸಂರವರ ಮಾತಿನಲ್ಲಿಯೇ ಹೇಳೋದಾದರೆ – ಕೆ. ಬಿ. ದಾಸ್ ಅಂಡ್ ಕೋ (ಕಿಸುಬಾಯಿದಾಸ್ & Co.) ಆಗಿಬಿಡುತ್ತದೆ. ಈಗ ನನಗೆ ಬಂದಿರೋ ಕಷ್ಟವೂ ಅದೇನೇ!

*

ನನಗೆ ಕೈಲಾಸಂ–ಪ್ರಿಯನಾಗಲು ಕಾರಣಗಳು ಎರಡು, ಮೊದಲನೆಯದು ಅವರ ಹಾಸ್ಯಪ್ರವೃತ್ತಿ. ಎರಡನೆಯದು ಯಾವ ನದಿಯ ನೀರನ್ನು ನಾನು ಕುಡಿದು, ಈಜಿ, ಯಾವ ಮಳಲಲ್ಲಿ ಓಡಿ, ಆಡಿ ಬೆಳೆದನೋ ಅದೇ ತುಂಗಾನದಿ ನೀರು ಅವರನ್ನು ಉತ್ತೇಜಿಸಿ ಅವರ ಮೊದಲ ನಾಟಕ 'ಟೊಳ್ಳುಗಟ್ಟಿ'ಯನ್ನು ಶಿವಮೊಗ್ಗೆಯಲ್ಲಿ ಬರೆಯಿಸಿತು.

*

ಕೈಲಾಸಂ ಜನಿಸಿದ್ದು ೨೯-೭-೧೮೮೪ ರಂದು – ಬೆಂಗಳೂರು 'ತಾರಾಮಂಡಲ ಪೇಟೆ' ಯಲ್ಲಿ. ನಿಜ ನಾಮಧೇಯ ತ್ಯಾಗರಾಜ ಪರಮಶಿವ ಕೈಲಾಸಂ. ತಂದೆ ಹೈಕೋರ್ಟಿನ ಚೀಫ್ ಜಸ್ಟಿಸ್ ಶ್ರೀ ಪರಮಶಿವಯ್ಯರ್, ತಾಯಿ ಶ್ರೀಮತಿ ಕಮಲಮ್ಮ. ಬಾಲ್ಯ, ವಿದ್ಯಾಭ್ಯಾಸಗಳು ಬೆಂಗಳೂರು, ಮೈಸೂರು, ಹಾಸನ, ಮದರಾಸುಗಳಲ್ಲಿ. ಉಚ್ಚ ಶಿಕ್ಷಣ ಲಂಡನ್ನಿನಲ್ಲಿ! ಅಲ್ಲಿ ಆರು ವರ್ಷ ಕಾಲ ವಾಸ. ಅಲ್ಲಿನ ರಾಯಲ್ ಕಾಲೇಜ್ ಆಫ್ ಸೈನ್ಸ್‌ನಲ್ಲಿ ಭೂಗರ್ಭಶಾಸ್ತ್ರಾಧ್ಯಯನದಲ್ಲಿ ಪ್ರೌಢ ಪ್ರಶಸ್ತಿ; ಅಲ್ಲದೆ



ಕೈಲಾಸಂರವರ ಒಂದು ಅಪರೂಪ ಚಿತ್ರ- ಅವರ ಇಂಗ್ಲಿಷ್ ಹಸ್ತಾಂಕಿತದೊಂದಿಗೆ. ಇದನ್ನು ಡಾ. ಎಂ. ಶಿವರಾಮು (ರಾ.ಶಿ.) ಬರೆದ 'Kailasam and I' ಪುಸ್ತಕದಿಂದ ಕೃತಜ್ಞತಾಪೂರ್ವಕ ಎತ್ತಿಕೊಂಡಿದ್ದೇವೆ.

ಏಳು ಫಸ್ಟ್‌ಕ್ಲಾಸ್‌ಗಳನ್ನು ಪಡೆದವರೆಂದು ಟಿ. ಪಿ. ಸ. ಕೈ. ಬರೆಯುತ್ತಾರೆ.

ಆಚಾರ್ಯ ಶಂಕರರು ನಾಲ್ಕನೆಯ ವಯಸ್ಸಿಗೇ ಚತುರ್ವೇದಗಳನ್ನೂ ಬಾಯಲ್ಲಿ ಹೇಳುತ್ತಿದ್ದರಂತೆ. ಕೈಲಾಸಂ ಏಳು ವಯಸ್ಸಿಗೇನೇ ಸ್ಪಷ್ಟವಾಗಿ ಕನ್ನಡ, ತಮಿಳು, ತೆಲುಗು, ಉರ್ದು, ಸಂಸ್ಕೃತ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ, ಕಾಗುಣಿತ ಕೂಡ ತಪ್ಪಿಲ್ಲದಂತೆ ಸಿರರ್ಗಳವಾಗಿ ಮಾತಾಡಬಲ್ಲವರಾಗಿದ್ದರು. ಅವರು ಹೊರಗೆ ಹೇಗೇ ಇದ್ದರೂ ಅವರ ಅಂತರಂಗದ ಕಳಿತ ಸಂಸ್ಕೃತಿಗೆ ಕಾರಣ ಅವರ ತಾಯಿ ಕಮಲಮ್ಮ! ಎಲ್ಲ ತಾಯಿಯರ ಹಿರಿಮೆಯನ್ನು ಕೈಲಾಸಂ ಕಾಣುವಂತಾದ್ದು, ತಮ್ಮ ತಾಯಮೇಲಿನ ಅಪೂರ್ವ ಭಕ್ತಿಯಿಂದ! ಅದ್ದರಿಂದಲೇ ಅಂತಹ ತಾಯಿ ಅವರಿಗೆ 'ಮಾತೃದೇವೋಭವ!'

ತಂದೆ ಪರಮಶಿವಯ್ಯರ್ ಶ್ರೇಷ್ಠ ಕಾಯಿದೆ ಪಂಡಿತರಲ್ಲದೆ ದರ್ಶನ, ಸಾಹಿತ್ಯ-ಪುರಾಣ, ರಾಜಕಾರಣ ಎಲ್ಲದರಲ್ಲೂ ಪಾಂಡಿತ್ಯ ಪಡೆದವರು. ಮುಂದೆ – ಹಗಲನ್ನೇ ರಾತ್ರಿ, ರಾತ್ರಿಯನ್ನೇ ಹಗಲು – ಮಾಡಿಕೊಂಡು ಸ್ವಚ್ಛಂದ ಜೀವಿಯಾಗಿ ಬದುಕಿದ ಕೈಲಾಸಂ, ತಮ್ಮ ಐವತ್ತನೆಯ ವಯಸ್ಸಿನಲ್ಲೂ ತಂದೆ ಎಂದರೆ ಗಡಗಡ ನಡುಗುತ್ತಿದ್ದರಂತೆ. ಅಂತಹ 'ಪಿತೃದೇವೋಭವ' ಅವರು.

ಕೈಲಾಸಂ ಒಂದು ಬಹುಮುಖ ಪ್ರತಿಭೆಯ ವಜ್ರ. ಈ ವಜ್ರಕ್ಕೆ ಸಾಣೆಯಿಟ್ಟ ಇನ್ನೊಂದು ಮಹಾ ವಜ್ರ ಅವರ ದೊಡ್ಡಪ್ಪ; ಮದ್ರಾಸ್ ಹೈಕೋರ್ಟಿನಲ್ಲಿ ನ್ಯಾಯಾಧೀಶರಾಗಿದ್ದ ಜಸ್ಟೀಸ್ ಸದಾಶಿವಯ್ಯರ್;

ಇಂತಹ ಸಂಸ್ಕಾರಪೂರಿತವಾದ ಅವರ ಕುಟುಂಬದ ಸದಸ್ಯರುಗಳು ಕೈಲಾಸಂ ಮೇಲೆ ಅಳಿಸಲಾರದ ಪ್ರಭಾವ ಬೀರಿದವರಾಗಿದ್ದರು. ಅದಕ್ಕೋಸ್ಕರವೇ ಮುಂದೆ ಅವರು ರಚಿಸಿದ ಒಂದು ನಾಟಕದಲ್ಲಿ "ಮಕ್ಕಳಿಸ್ಕೂಲ್ ಮನೇಲಲ್ವೆ?" ಎಂಬ ಮಾತನ್ನು ಹೇಳಿಸಿರುವುದಲ್ಲದೆ ಆ ನಾಟಕಕ್ಕೆ ಅದೇ ಹೆಸರನ್ನು ಪರ್ಯಾಯವಾಗಿ ಇರಿಸಿದ್ದು!

ಮನೆಯ ಈ ಸ್ಕೂಲಿಗೆ ಭದ್ರ ಬುನಾದಿ ಬಿದ್ದರೇನೇ ಮುಂದೆ ಕಟ್ಟುವ ಬಿಲ್ಡಿಂಗ್ ಪಕ್ಕಾ! ಇಲ್ದೇ ಹೋದರೆ ಮಕ್ಕಳ ಭವಿಷ್ಯವೇ 'ಎಕ್ಕಾ'!

*

ಕೆಲವು ಕಾಲ ಅವರು ಮೈಸೂರು ಮಹಾರಾಜಾ ಹೈಸ್ಕೂಲು ವಿದ್ಯಾರ್ಥಿಯಾಗಿ ಅಲ್ಲಿನ ಹಾಸ್ಟೆಲ್ಲಿದ್ದರು, ಮುಂದೊಂದು ಕಾಲದಲ್ಲಿ ಇಂಗ್ಲೆಂಡಿಗೆ ಹೋಗಿ ಶಿಕ್ಷಣ ಪಡೆದು ಮೈಸೂರು ವಿಶ್ವವಿದ್ಯಾಲಯದ ವೈಸ್ ಛಾನ್ಸಲರಾದ ಶ್ರೀ ಎನ್. ಎಸ್. ಸುಬ್ಬರಾಯರು ಆಗ ಕೈಲಾಸಂಗೆ ಹಾಸ್ಟೆಲ್ ಮೇಟ್!

ಸುಬ್ಬರಾಯರ ಮೈ ಮನಸ್ಸು, ಮೆದಳು ಕಾರ್ಯ ಎಲ್ಲ ಚೊಕ್ಕ; ಸಂಪ್ರದಾಯಬದ್ಧ: ಕ್ಲುಪ್ತ! ಕೈಲಾಸಂ ಇದಕ್ಕೆ ತದ್ವಿರುದ್ಧ!

ಸುಬ್ಬರಾಯರು ಶುಭ್ರ ಹಾಸಿನ ಮಂಚದ ಮೇಲೆ ಪವಡಿಸಬೇಕು. ಆದರೆ ಕೈಲಾಸಂ ಅಲ್ಲಿನ ಮೂಲೆಯೊಂದರಲ್ಲಿ ಕೊಳಕು ಜಮಖಾನದ ತುಂಡಿನ ಮೇಲೆ, ತಮ್ಮ ಕೋಟಿನ ಕೈಗಳಲ್ಲಿ ಕಾಲು ತೂರಿಸಿ ಸೊಂಟದ ವರೆಗೆ ಬಿಗಿ ಬರುವ ವರೆಗೆ ಎಳೆದುಕೊಂಡು ಗಾಳಿ ಹೋದ ಫುಟ್‌ಬಾಲ್ ಒಂದನ್ನು ತಲೆಗೆ ದಿಂಬಾಗಿರಿಸಿ ಮುದುರಿ ಮಲಗಿರಬೇಕು.

"ಲೋ! ಕೈ ಏನೋ ಇದು ನಿನ್ನವಸ್ಥೆ! ಕಾಲಾದರೂ ಚಾಚಿ ಮಲಕ್ಕೊಬಾರದೇನೋ!" ಎಂದು ಸುಬ್ಬರಾಯರು ಗೋಗರೆದರೆ,

"ಹೋಗೋ ನನ್ ಕೈಲಾಗಲ್ಲ. ಹೊರಗೋಗೋದಾದರೆ ನೀನೇ ಒಂದ್ ಸ್ವಲ್ಪ ನನ್ ಕಾಲು ಚಾಚಿ ಹೋಗ್ಬಿಡಮ್ಮಾ" ಎಂದು ಕೈಲಾಸಂ ಮುಲುಗಿ ಮಲಗೇ ಇರುತ್ತಿದ್ದರಂತೆ.

ಸುಬ್ಬರಾಯರು ಕಾಲಕಾಲಕ್ಕೆ ಶಾಲೆಯ ಪಾಠ ಪ್ರವಚನಗಳನ್ನು ಗಟ್ಟಿಯಾಗಿ ಓದುತ್ತಿದ್ದರೆ, ಕೈಲಾಸಂ ತಮ್ಮಷ್ಟಕ್ಕೆ ತಾವು ಅಲ್ಲೇ ನಿದ್ರೆ ಅರೆ ನಿದ್ರೆ ಮಾಡುತ್ತಿರಬೇಕು.

"ಲೇ ಕೈ! ಏಳಲ್ವೇನೋ... ಓದಲ್ವೇನೋ" ಎಂದು ತಿವಿದು ಅಲುಗಾಡಿಸಿ ಸುಬ್ಬರಾಯರು ಎಚ್ಚರಿಸಿದರೆ "ನೀನೇ, ಗಟ್ಟಿಯಾಗಿ ಓದಿಬಿಡಪ್ಪ ಸುಬ್ಬು! ನಂಗೆ ಕೇಳಸತ್ತೆ... ಅಷ್ಟೇ ಸಾಕು." ಎಂದು ಕೈ ಉತ್ತರ.

ಅದು Vನೇ ತರಗತಿ. ವಾರ್ಷಿಕ ಪರೀಕ್ಷೆ ಫಲಿತಾಂಶ ಬಂದಾಗ ಗಟ್ಟಿಯಾಗಿ ಕಾಲ ಕಾಲಕ್ಕೆ ಓದಿದ ಸುಬ್ಬರಾಯರು II ಕ್ಲಾಸು. ಅವರು ಓದಿದ್ದನ್ನು ಕೇಳಿ ತಲೆಚ್ಚಿಟ್ಟರ್ ಮಾಡಿಕೊಂಡ ಕೈಲಾಸಂ I ಕ್ಲಾಸು! ಅವರ ಪಾಂಡಿತ್ಯಕ್ಕೆ ಅವರ ಗುರುಗಳೂ ತಲೆದೂಗಬೇಕು!

ಅವರ ದ್ವಿತೀಯ ಭಾಷೆ ಸಂಸ್ಕೃತ.

ಕ್ಲಾಸಲ್ಲಿ ಒಮ್ಮೆ ಅವರಿಗೆ ಮೂತ್ರಶಂಕೆಯಾಯಿತು. ಎದ್ದು ನಿಂತು, ಅದರ ಚಿಹ್ನೆ-ಕಿರುಬೆರಳನ್ನು ಮೇಲಕ್ಕೆತ್ತಿ ಹಿಡಿದು ಗುರುಗಳಿಗೆ ತೋರಿಸಿ "ಮೂತ್ರ ವಿಸರ್ಜನಾರ್ಥಾಯ ಬಹಿರ್ದೇಶಂ ಗಚ್ಛಾಮಿ" ಎಂದು ಸಂಸ್ಕೃತದಲ್ಲೇ ಪ್ರಾರ್ಥಿಸಿದರಂತೆ.

"ಅಯ್ಯೋ ಮುಂಡೇದೇ! ಸಂಸ್ಕೃತದಂತಹ ದೇವಭಾಷೆಯನ್ನು ಆ ಅಪವಿತ್ರ ಕೆಲಸಕ್ಕೆ ದುರುಪಯೋಗ ಮಾಡಿ ಮೈಲಿಗೆ ಮಾಡ್ತಿದೀಯಲ್ಲೊ!" ಎಂದು ಗುರುಗಳು ತರಾಟೆಗೆ ತೆಗೆದುಕೊಂಡರೆ,

"ಗುರುವರ್ಯಾ! ದೇವರು ನಮ್ಮನ್ನು ಸೃಷ್ಟಿಸಿದಾಗ ನಮಗೆ ಅಂಗಾಂಗಗಳನ್ನೂ ಪಂಚೇಂದ್ರಿಯಗಳನ್ನೂ ಕೊಟ್ಟ. ತತ್ತದಂಗಗಳೂ ತತ್ತದಿಂದ್ರಿಯಗಳೂ ತತ್ತತ್ಕಾಲದಲ್ಲಿ ತತ್ತತ್ತಮ್ಮ ಕೆಲಸಗಳನ್ನೂ ತತ್ತತ್ತಮಗೇ ಮಾಡಿಕೊಳ್ಳುತ್ತಾ ಹೋಗತ್ವೆ. ಇವಕ್ಕೆ ಇಂಗ್ಲಿಷಲ್ಲಿ 'ಕಾಲ್ಸ್ ಆಫ್ ನೇಚರ್' ಅಂತಾರೆ. ಭಾಷೆ ಯಾವುದೇ ಆದರೂ ಆಗೋ ಕೆಲಸ ಆಗ್ತಲೇ ಇರುತ್ವೆ. ನಮ್ ತಾಯಿ ಹೇಳ್ತಾರೆ. ಹೊಸ ಭಾಷೆ ಕಲಿಬೇಕಾದರೆ ಆ ಭಾಷೇಲೇ ಮಾತಾಡ್ತ ಹೋಗಬೇಕು– ಅಂತ" ಎಂದು ಗುರುಗಳಿಗೆ ಉತ್ತರಿಸಿದಂತಹ ಮಹಾಪ್ರತಿಭಾವಂತ 'ಕೈ'!

ಅವರ ಗುರುವೃಂದದಲ್ಲಿ E.S.V. ಎಂಬ ಚರಿತ್ರೆಯ ಮೇಷ್ಟ್ರಿದ್ದರಂತೆ. ನಡೆದಾಡುವಾಗ ಆತ ಧಸ್...ಧಸ್ ಎಂಬ ಭೂಕಂಪವಾಗುವಂತಹ ಶಬ್ದಗಳನ್ನು ಮಾಡಿಸುತ್ತಿದ್ದರಂತೆ. ಇಸವಿಗಳನ್ನೂ ಘಟನೆಗಳನ್ನೂ ನೆನಪಿಟ್ಟುಕೊಳ್ಳುವುದರಲ್ಲಿ ತುಂಬ ಗಟ್ಟಿಗರಾಗಿದ್ದರಂತಾತ! E.S.V. ಅವರನ್ನು ಅದೇ ಕಾರಣಕ್ಕಾಗಿ ಕೈಲಾಸಂ 'ಇಸವಿ' ಮೇಷ್ಟ್ರು ಎಂದು ಕರೆಯುತ್ತಿದ್ದರಂತೆ.

ಇನ್ನೊಬ್ಬ ಗುರುಗಳು ತುಂಬ ಮಡಿವಂತರು. ಮೈಲಿಗೆಯ ಭಯದಿಂದ ಅವರು ನಡೆಯುವಾಗ ಹೆಜ್ಜೆ ಹೆಜ್ಜೆಗೂ ತಮ್ಮ ಕೈ ಚೊಂಬಿನಲ್ಲಿದ್ದ ನೀರನ್ನು ಮೊಗೆ ಮೊಗೆದು ನೆಲದ ಮೇಲೆ ಸಿಂಪಡಿಸುತ್ತ ನಡೆಯುತ್ತಿದ್ದರಂತೆ. ಅದನ್ನು ಕಂಡ ಕೈಲಾಸಂ ತಮ್ಮ ಸ್ನೇಹಿತರಿಗೆ ಅದನ್ನು ತೋರಿಸುತ್ತಾ– "ನೋಡಿದಿರೇನೊ! ನಮ್ಮ ಗುರುಗಳಿಗೆ ಭೂಮ್ ತಾಯಿಮೇಲೆಷ್ಟು ಪ್ರೀತಿ, ಭಕ್ತಿ, ಗೌರವ! ತಾವು ಕಾಲಿಟ್ಟು ನಡೆದರೆ ಆಕೆಗೆ ಎಲ್ಲಿ ಮೈಲಿಗೆ ಆಗುತ್ತೊ ಅಂತ ಹೆಜ್ ಹೆಜ್ಜೆಗೂ ನೀರ್ ಹಾಕ್ಕೊಂಡು ಹೋಗ್ತಿದಾರೆ" ಎಂದು ಅಣಕವಾಡಿದ್ದನ್ನು ಬರೆಯುತ್ತಾ ಶ್ರೀ ಬಿ. ಎಸ್. ರಾಮರಾಯರು "ಅದು ಲೇವಡಿಯಲ್ಲ! ಅದೊಂದು ಆರೋಗ್ಯಕರವಾದ ಹಾಸ್ಯ"– ಎಂದು ಅಭಿಪ್ರಾಯ ಪಟ್ಟಿದ್ದಾರೆ. ಕೈಲಾಸಂದು ಕ್ಯಾತೆ ಬುದ್ಧಿಯಲ್ಲ! ಚಿಕಿತ್ಸಕ ಮನೋಭಾವ. ಇಂತಹ ಲೇವಡಿಗೆ ಪಕ್ಕಾದ ವ್ಯಕ್ತಿ— ನಂತರ ತನಗೆ ತಾನೇ ಕನ್ನಡಿ ಹಿಡಿದು ನೋಡಿಕೊಂಡು ತನ್ನ ಅಂಕುಡೊಂಕುಗಳನ್ನು ತಿದ್ದಿಕೊಂಡು ಸಜ್ಜನನಾಗಿ ಜೀವಿಸಲು ಪ್ರಯತ್ನ ಪಡುವುದಕ್ಕಾಗಿ ಇದೊಂದು ಮಾರ್ಗಸೂಚಿ ಅಷ್ಟೆ— ಎಂಬವರ ವ್ಯಾಖ್ಯಾನ.

ಅದಲ್ಲವಾದರೆ 'ಕೈ'ಗೆ ವರ್ಷದ ಕೊನೆಯಲ್ಲಿ ಯಾವ ಪರೀಕ್ಷೆಯಲ್ಲೂ ಬಿಡದೆ I ಕ್ಲಾಸ್ ಪಡೆಯುವುದಾಗುತ್ತಿತ್ತೆ?

'ರಜತ ಜಿಹ್ವೆಯ ಶಾಸ್ತ್ರಿ" (Silver tongued ಶಾಸ್ತ್ರಿ) ಎಂದು ಖ್ಯಾತನಾಮರಾಗಿದ್ದ ರೈಟ್ ಆನರಬಲ್ ಶ್ರೀ ಶ್ರೀನಿವಾಸಶಾಸ್ತ್ರಿಗಳು ಮದರಾಸಿನ ಹಿಂದೂ ಹೈಸ್ಕೂಲ್ ಹೆಡ್ ಮಾಸ್ಟರು ಮತ್ತು ಕೈಲಾಸಂಗೆ ಅವರು ಇಂಗ್ಲಿಷ್ ಮೇಷ್ಟ್ರು (೧೯೦೧–೨ರಲ್ಲಿ). ಅವರ ಇಂಗ್ಲಿಷ್ ಭಾಷೆ, ಉಚ್ಚಾರಣೆ, ಪರಿಳಿತಗಳೆಲ್ಲ ಅಸಮಾನವಾದವು. ಕೈಲಾಸಂ ಅವರನ್ನು ತದ್ವತ್ ಅನುಕರಿಸುತ್ತಿದ್ದರು. ಅವರು ಕೈಲಾಸಂನ್ನು "ಪಾಪಾ" ಎಂದು ಕರೆಯುತ್ತಿದ್ದರು (ಮನೆಯಲ್ಲಿ ಕೈಲಾಸಂನ್ನು ಪಾಪಣ್ಣ ಅಂತ್ಲೇ ಕರೀತಿದ್ದದ್ದು). ಅವರು ಇವರನ್ನು 'ಪಾಪಾ' ಎಂದು ಕೂಗಿದರೆ ಸಾಕು. 'ಕೈ' ಅವರಿಗೆ ಸಾಷ್ಟಾಂಗ ನಮಸ್ಕಾರ ಮಾಡಬೇಕು. "You are going to be my best pupil" ಎಂದು ಗುರು ಶಿಷ್ಯನನ್ನು

ಆಶೀರ್ವದಿಸಬೇಕು. ಈ ಶಿಷ್ಯನಿಗೆ ಆ ಗುರುವೂ "The Best Master!"

ಈಗಂತೂ ಬಹುಜನರಿಗೆ "ವಿದ್ಯಾರ್ಥಿ" ಎಂಬ ಶಬ್ದವನ್ನು ಕನ್ನಡದಲ್ಲಿ ತಪ್ಪಿಲ್ಲದೆ ಬರೆಯಲೂ ಬಾರದು. ಬೆಂಗಳೂರಿನ ಎಷ್ಟು ಶಾಲಾ ಕಾಲೇಜುಗಳ ಬೋರ್ಡುಗಳಲ್ಲಿ "ವಿಧ್ಯಾಲಯ"ಗಳು ಬೇಕು ನಿಮಗೆ? 'ವಿಧ್ಯಾಗಣಪತಿ', 'ವಿಧ್ಯಾರ್ತಿ ಸಂಗಗಳು', ಅವುಗಳ 'ಆವ್ಹಾನ'ಗಳು, ಕೊನೆಯಲ್ಲಿ 'ವಂಧನಾರ್ಪಣೆಗಳು', 'ಕೃತಘ್ನತೆಗಳು' ಸಾಕಪ್ಪ ಸಾಕು ಈ ತಪ್ಪುಗಳನ್ನು ತಿದ್ದುವವರಿಲ್ಲ! ಇದ್ದರೂ ಬೇಕಿಲ್ಲ!!

ಇಂತಹ ಜನ ಕೈಲಾಸಂ ಬರೆದ 'ಪರ್ಪಸ್' ಎಂಬ ಏಕಲವ್ಯನ ಕಥಾನಕವ ನಾಟಕವನ್ನು ಓದುವ ಮನಸ್ಸು ಮಾಡಬೇಕು. ದುರದೃಷ್ಟವಶಾತ್ ಅದು ಇಂಗ್ಲಿಷ್‌ನಲ್ಲಿದೆ. ಮೂಲದಲ್ಲೇ ಓದಿದರೆ ಚೆನ್ನು. ಅದು ಕಷ್ಟವಾದರೆ ಅದನ್ನು ಕನ್ನಡಕ್ಕೆ ಅನುವಾದಿಸಿರುವ ದಿ. ಜಿ. ಪಿ. ರಾಜರತ್ನಂರವರ ಅದೇ ಕಥಾನಕದ ಕೃತಿಯಿದೆ. ಅದನ್ನಾದರೂ ಓದಿ ಕ್ರಮವಾದ ತಪ್ಪಿಲ್ಲದ ವಿದ್ಯೆ ಕಲಿಯುವುದನ್ನು ಮನನ ಮಾಡಬೇಕು.

೧೯೬೨ ರಲ್ಲಿ ನಮ್ಮ ರಾಜ್ಯದ ವಿದ್ಯಾ ಇಲಾಖೆಯವರು, ಶಾಲಾ ಅಧ್ಯಾಪಕರುಗಳಿಗೆಂದು ನಾಟಕ ಕಲಾ ತರಬೇತಿ ಶಿಬಿರವೊಂದನ್ನೇರ್ಪಡಿಸುವ ವ್ಯವಸ್ಥೆಯನ್ನು ಜಾರಿಗೆ ತಂದರು. ದಿ. ಡಾ. ಶ್ರೀರಂಗರು ಅದರ ಪ್ರಧಾನ ಆಚಾರ್ಯರು. ಶೇಷಾದ್ರಿ ರಸ್ತೆಯಲ್ಲಿನ ಹೆಬ್ಬಾರ್ ಶ್ರೀ ವೈಷ್ಣವ ಸಭಾ ಆವರಣದಲ್ಲಿದ್ದ ನಾಟ್ಯ ಸಂಘ ಥಿಯೇಟರ್ ಸೆಂಟರ್‌ನವರು ಅದಕ್ಕೆ ಸಹಕಾರಿಗಳಾಗಿ, ಗಾಂಧೀನಗರದಲ್ಲಿನ ದೇವಾಂಗ ಸಂಘ ಕಟ್ಟಡದ ೨ನೇ ಮಹಡಿ ಹಾಗೂ ಆರ್ಯ ವಿದ್ಯಾ ಶಾಲಾ ಕಟ್ಟಡದ ಒಳ ಅಂಗಣದಲ್ಲಿ ತಾಲೀಮು ಆರಂಭಿಸಿದರು. ಶ್ರೀಗಳಾದ ಪ್ರೊ. ಬಿ. ಚಂದ್ರಶೇಖರ್, ಎ. ರಾಮರಾವ್, ಎಂ. ಎಸ್. ನಾಗರಾಜ್ ಇವರುಗಳಲ್ಲದೆ ಶ್ರೀ ಜಿ. ವಿ. ಶಿವಾನಂದ್, ಮಹಾದೇವ್, ಎ. ಎಲ್. ಶ್ರೀನಿವಾಸ್ ಮೊದಲಾದ ಮಹನೀಯರೆಲ್ಲ ಗುರುವೃಂದಕ್ಕೆ ಸೇರಿದವರು. ತರಬೇತಿ ಹೊಂದಲು ಬಂದ ಮೊದಲ ತಂಡದಲ್ಲೇ ನಾನೂ ಇದ್ದದ್ದು.

ಈ ತಂಡಕ್ಕೆ ನಾನಾ ವಿಷಯಗಳ ಮೇಲೆ ತಿಳುವಳಿಕೆ ನೀಡಲು ಕಲೆಯ ಒಂದೊಂದು ಕ್ಷೇತ್ರದಲ್ಲೂ ಅಪಾರ ಅನುಭವ ಪಡೆದ ಮಹನೀಯರುಗಳನ್ನು ಕರೆಯಿಸಿ, ಪ್ರತಿ ದಿನ ಭಾಷಣಗಳು. ಈಗಿನ ಖ್ಯಾತ ಸಿನಿಮಾ ನಟ ಉತ್ಪಲ ದತ್, ಎಂ. ಎಸ್. ಸತ್ಯು. ಪೂಣೆಯ ಪ್ರಭಾತ್ ಸಂಸ್ಥೆಯ ಶ್ರೀ ನಾರಾಯಣ ಕಾಳೆ, ದಿ. ಅ. ನ. ಕೃ., ದಿ. ಗುಬ್ಬಿ ವೀರಣ್ಣ, ಜಯಮ್ಮ, ಪರ್ವತವಾಣಿ, ಮೊದಲಾದವರೆಲ್ಲ ಬಂದಿದ್ದರಲ್ಲದೆ ದಿ. ಬೇಂದ್ರೆ ಕೂಡ ಬಂದು ಹೋದ ನೆನಪಿದೆ. ಈ ಕಾರ್ಯಕ್ರಮಗಳಲ್ಲೆಲ್ಲ ಈ ಮಹನೀಯರು ೨–೩ ಗಂಟೆಗಳ ಕಾಲ ಕಲೆಯ ರಸದೌತಣವನ್ನು ಅಭ್ಯರ್ಥಿಗಳಿಗೆ ನೀಡಿದ್ದರು. ಆದರೆ ಅದರಲ್ಲಿ ಒಂದು ದಿನ ಶ್ರೀ ಬಿ. ಎಸ್. ನಾರಾಯಣ (ಛಾಯಾ ಬಳಗದ ಶ್ರೀ ಬಿ. ಎಸ್. ವೆಂಕಟರಾಮ್‌ರವರ ಸಹೋದರ) ಮೂರು ಗಂಟೆಗಳಿಗೂ ಹೆಚ್ಚಿನ ಕಾಲ ನೀಡಿದ...ಕೈಲಾಸಂ ನಾಟಕ 'ಪರ್ಪಸ್' ಕೇಳು ಕೇಳುವಂತಾದ್ದು ನನ್ನ ಪೂರ್ವಾರ್ಜಿತ ಪುಣ್ಯ! ಊರಿಗೆ ಹಿಂದಿರುಗಿದ ನಂತರ ಅದೆಷ್ಟು ಕಡೆ ನಾನು ಅದನ್ನು ವಾಚಿಸಿದರೂ ನನಗೆ ತೃಪ್ತಿ ಇರಲಿಲ್ಲ. ಅದನ್ನು ಕುರಿತು ಬರೆಯದಿದ್ದರೆ ಈ ಲೇಖನವೇ ವ್ಯರ್ಥ!

ಕೈಲಾಸಂ ಇಂಗ್ಲಂಡಿನಲ್ಲಿದ್ದಾಗ, ಅವರ ದೇಹ ಅಲ್ಲಿದ್ದರೂ ಅವರ ಹೃದಯ ಭಾರತದಲ್ಲೇ ಮಿಡಿಯುತ್ತಿತ್ತು. ಅವರ ಬಾಯಿ ತಿಪ್ಪೆರಾರಿ, ಕಾನ್‌ಸ್ಟಾಂಟಿನೋಪಲ್ ಹಾಡುತ್ತಿದ್ದರೂ ಅವರ ಮನಸ್ಸಿನ ತುಂಬ ನಮ್ಮ ಪುರಾತನ ಸಂಸ್ಕೃತಿಯ ಆಕರಗಳಾದ ರಾಮಾಯಣ, ಮಹಾಭಾರತದ ಆಖ್ಯಾಯಿಕೆಗಳೇ! ಅವರಿಗೆ ಈ 'ಪರ್ಪಸ್' ಬರೆಯಲು ಪ್ರೇರಣೆಯಾದದ್ದೇ ಲಂಡನ್ನಿನಲ್ಲಿ!

'ಯೂಜೀ ಸ್ಯಾಂಡೊ' ಎಂಬ ದೈತ್ಯದೇಹಿ ಜಿಮ್ನಿಸ್ಟ್, ೧೯೦೫–೦೬ ಸುಮಾರಿನಲ್ಲಿ ಮದರಾಸಿಗೆ ಬಂದಿದ್ದನಂತೆ; ಅವನ ಅಂಗಸಾಧನೆಯ ಪ್ರದರ್ಶನಕ್ಕೆ ಕೈಲಾಸಂ ಹೋಗಿದ್ದರು. ಆಗ ಅವರು ಕ್ಷೀಣದೇಹಿಯಾಗಿದ್ದರು. ಸ್ಯಾಂಡೊನ್ನ ನೋಡಿದ ಕೂಡಲೇ 'ಅವನ ಹಾಗೆ ಆಗಬೇಕು' ಎಂಬ ಹಂಬಲ ಅವರಿಗುಂಟಾಯಿತು.

ಆದರೆ ಅವನನ್ನು ಅವರು ಪುನಃ ಸಂಧಿಸಿದ್ದು,

ಐದು ವರ್ಷಗಳ ನಂತರ (೧೯೧೧ ರಲ್ಲಿ) ಬಂದನಲ್ಲ ಸ್ಯಾಂಡೋ! ಅವನೋ ಒಬ್ಬ ಜರ್ಮನಿಯಲ್ಲಿ ಜನಿಸಿದ ಯಹೂದಿ- ಕೋನಿಗ್ಸ್‌ಬರ್ಗಿನಲ್ಲಿ ಹುಟ್ಟಿದವನು. ಅವನ ಇಂಗ್ಲಿಷ್ ಶೈಲಿಯೋ ವಿಚಿತ್ರ! ಅವನೊಮ್ಮೆ ಕೇಳಿದ ಕೈಲಾಸಂ ಅವನನ್ನೇ ಅನುಕರಿಸಿ ಮಾತಾಡಲಾರಂಭಿಸಿ ಇವನೂ ಒಬ್ಬ 'ಜ್ಯೂ' ಇರಬೇಕು ಎಂಬ ಭ್ರಮೆ ಅವನಿಗೆ ಬರುವಂತೆ ಮಾಡಿದರು. ಅವನನ್ನು ಸಂಪ್ರೀತಗೊಳಿಸಿ ಅವನ ಜಿಮ್ನೇಷಿಯಂ ಸೇರಿಕೊಂಡರು. ಅವರ ಆಸಕ್ತಿ ಅಭ್ಯಾಸಗಳನ್ನು ಪ್ರವೃತ್ತಿ ಕ್ರಮಗಳನ್ನೂ ಗುರುತಿಸಿದ ಗುರುವು ಅಂಗ ಸಾಧನೆಯ ಸರ್ವ ಸಹಸ್ಯಗಳನ್ನೂ ಮಲ್ಲವಿದ್ಯೆಯ ಸರ್ವ ತಂತ್ರಗಳನ್ನೂ ಉಪದೇಶಿಸಿ ಕೈಲಾಸಂ ದೈತ್ಯ ದೇಹಿಯಾಗುವಂತೆ, ಸುಪುಷ್ಟ ಮಾಂಸ ಖಂಡಗಳನ್ನು ಪಡೆಯುವಂತೆ ಮಾಡಿದ! ಇದಕ್ಕೆ ಸಾಕ್ಷಿಯಾಗಿ ಒಂದು ಲೋಫರ್ ಹೆಡ್‌ಗೇರ್ ಹಾಕಿಕೊಂಡು ಬಾಯ ಎಡ ಕೊನೆಯಲ್ಲಿ ಮುಕ್ಕಾಲು ಉರಿದ ಸಿಗರೇಟ್ ತಗುಲಿಸಿಕೊಂಡು ಬಲ ತೋಳಿನ ಪರಟು ಏರಿಸಿ ಅಲ್ಲಿನ ಬೈಸೆಪ್ಸ್ ಬಿಗಿದು ತೋರಿಸುತ್ತ "ಮಾತು ನೋಡಿ ಮಾತಾಡೋ ಮುರಗೈ!" ಎನ್ನುತ್ತಿರುವ-ಪೋಲಿ ಕಟ್ಟೆ ವೇಷದಲ್ಲಿರುವ 'ಕೈಲಾಸಂ' ಚಿತ್ರವೊಂದನ್ನು ನೋಡಿದ್ದೇನೆ. ಎಂತಹ ದೈತ್ಯ ಬೈಸೆಪ್ಸ್ ಅದು!

ಬೈಸೆಪ್ಸ್ ಮಾಂಸಖಂಡಗಳನ್ನು ಬಿಗಿ ಮಾಡಿ ಮ್ಯೂಜಿಕ್ಕಿಗನುಗುಣವಾಗಿ ಅವುಗಳನ್ನು ಕುಣಿಸುವ ಒಂದು ಕ್ರಿಯೆ ಸ್ಯಾಂಡೋನ ಅದ್ಭುತ ಸಾಧನೆಗಳಲ್ಲೊಂದು. ಅದರ ಮೇಲೆ ಅವನು ೨॥"× ೧॥"× ೬ ಅಳತೆಯ ಗ್ರಾನೈಟ್ ಶಿಲೆಯೊಂದನ್ನು ಎತ್ತಿ ಇರಿಸಿಕೊಂಡು ಕುಣಿಸುತ್ತಿದ್ದ. ಅದನ್ನು ಕೂಡ ಕೈಲಾಸಂ ಕಲಿತರು. ಮೊದಲ ಬಾರಿ ಆ ಕಲ್ಲು ಚಪ್ಪಡಿಯನ್ನು ೧೨ ನಿಮಿಷಗಳ ಕಾಲ ಬೈಸೆಪ್ಸ್ ಮೇಲಿರಿಸಿಕೊಂಡು ಕೈಲಾಸಂ ಅದನ್ನೇ ಮಾಡಿ ತೋರಿಸಿದಾಗ ಅವರಿಗೇ ಆಶ್ಚರ್ಯ! ಇದು ಸಾಧ್ಯವಾದದ್ದು ಹೇಗೆ? ಎಂದು ಶಿಷ್ಯ ಗುರುವನ್ನು ಕೇಳಿದಾಗ ಏಕಾಗ್ರ ಚಿತ್ತ ಎಂದು ಗುರು ಉತ್ತರವಿತ್ತನಂತೆ! ವಿದ್ಯಾರ್ಥಿಗೆ ಬೇಕಾಗಿರುವ ಮೊತ್ತಮೊದಲಿನ ಅಗತ್ಯ ಅದೇ!

ಆಗ ಕೈಲಾಸಂಗೆ ಎನ್ನಿಸಿತು. ಇಂತಹ ಬೀರ್ ಬಲ್ಲ (Beer-boozer), ಗೋಮಾಂಸ ಭಕ್ಷಕ, ಸಿಗರೇಟು ಸೇದುವ ಈ ಸ್ಯಾಂಡೋ, ಅದೇ ಮಟ್ಟದ ಬೀರ್ ಹೀರುವ ಸಿಗರೇಟ್ ಸೇದುವ ತನಗೆ ಇಷ್ಟು ಮಟ್ಟಿಗೆ ಏಕಾಗ್ರಚಿತ್ತ ಮತ್ತು ತೋಳ ಮಾಂಸ ಖಂಡಗಳ ಪರಿಪೂರ್ಣ ನಿಯಂತ್ರಣವನ್ನು ಬೋಧಿಸಬಲ್ಲವನಾಗಿದ್ದರೆ, ಗುರುವಿನ ಮಣ್ಣಿನ ಮೂರ್ತಿ ಮಾಡಿ, ಅರ್ಚಿಸಿ, ಆರಾಧಿಸಿ, ಅಭ್ಯಸಿಸಿ, ವಿದ್ಯಾರ್ಜನೆ ಮಾಡಿದ ಆ ಬೇಡರ ಹುಡುಗ that bold bad bare barbarian boy—ಏಕಲವ್ಯನಿಗೆ ಗುರು ದ್ರೋಣರು ಇನ್ನೇನನ್ನು ತಾನೆ ಯಾಕೆ ಬೋಧಿಸಿರಬಾರದು! ಈ ಚಿಂತನೆಯ ಫಲವೇ 'ಪರ್ಪಸ್!' ಅದಕ್ಕಾಗಿಯೇ ಅದರ ಮೊದಲ ದೃಶ್ಯದಲ್ಲೇ ಗ್ಲಾಡಿಯೇಟರ್ ಕಣದ ದೃಶ್ಯ.

ವಿದ್ಯಾಭಾಸಕ್ಕಿರಬೇಕಾದ ವಾತಾವರಣ, ಸಮಾನಸ್ಕರು ಪರಸ್ಪರರನ್ನು ಗೌರವಿಸುವ ರೀತಿ, ಗುರು ಜನರು ಶಿಷ್ಯರನ್ನು ನಡೆಯಿಸಿಕೊಂಬ ರೀತಿ, ಗುರು ಶಿಷ್ಯರ ನಡುವಣ ನೈಜ ಬಾಂಧವ್ಯ-ಇವುಗಳನ್ನು ನೋಡಬೇಕು ಪರ್ಪಸ್‌ನಲ್ಲಿ.

ಮಹದೋದ್ದೇಶವಿರಿಸಿಕೊಂಡು ಧನುರ್ವಿದ್ಯೆಯನ್ನು ಕಲಿಯುವ ಪಣ ತೊಟ್ಟು ಬಂದ (ವಿದ್ಯಾ + ಅರ್ಥಿ) ಏಕಲವ್ಯ ಗುರುವನ್ನರಸಿ ಬಂದ ರೀತಿ, ಅವರೊಂದಿಗೆ ನಡೆದುಕೊಂಡ ವಿಧಾನ. ಮರೆಯಲ್ಲೇ ನಿಂತಿದ್ದು, ಆ ಗುರುವು ಕುರು ವಂಶದ ಅರಸುಗುವರರಿಗೆ ಬೋಧಿಸುತ್ತಿದ್ದ ಸೂತ್ರ ವಿಧಾನಗಳನ್ನು ಹೇಗೆ ಮನನ ಮಾಡಿಕೊಂಡ; ಗುರುವು ತನ್ನನ್ನು ಶಿಷ್ಯನನ್ನಾಗಿ ಅಂಗೀಕರಿಸುವುದರಲ್ಲಿದ್ದ ಅಸಹಾಯಕತೆಯನ್ನು ವ್ಯಕ್ತಪಡಿಸಿ ನಿರಾಕರಿಸಿದರೂ ಬೇಸರಗೊಳ್ಳದೆ ಹಿಂದಿರುಗಿ ಗುರುವಿನ ಮಣ್ಣಿನ ಮೂರ್ತಿ ಮಾಡಿ ಅದರ ಮುಂದೆ ಅಭ್ಯಸಿಸಿ, ಅರ್ಜುನನನ್ನು ಮೀರಿಸಿದ ಬಿಲ್ಗಾರನಾದದ್ದು ಹೇಗೆ ಇವನ್ನೆಲ್ಲ ಇಂದಿನ ವಿದ್ಯಾರ್ಥಿಗಳೂ ಅವರ ಪಾಲಕ ಪೋಷಕರೂ ಗುರುಗಳೂ ಕಣ್ ತೆರೆದು ನೋಡಬೇಕು!

ಕುರುಕುಲ ಪಿತಾಮಹ ತಾತಾಜಿ ಭೀಷ್ಮ

ಮೊದಲ ದೃಶ್ಯದಲ್ಲೇ ಶಸ್ತ್ರಾಭ್ಯಾಸ ಮಾಡುತ್ತಿರುವ ತನ್ನ ಸಂತತಿಯ ಧಾರ್ತರಾಷ್ಟ್ರರನ್ನೂ ಪಾಂಡವರನ್ನೂ ನೋಡಬರುವ ದೃಶ್ಯ ಹೀಗಿದೆ.

ಸ್ಥಾನದಿಂದಲೂ ವಯೋಮಾನದಿಂದಲೂ ಭೀಷ್ಮ ಹಿರಿಯ. ಅವನು ಆ ರಾಷ್ಟ್ರದ ಅನ್ನದಾತ. ಆದ್ದರಿಂದ ಆಚಾರ್ಯ ದ್ರೋಣನೇ ಮುಂದಾಗಿ ಎದ್ದು ಬಂದು ಎದುರ್ಗೊಂಡು ಅಭಿವಂದಿಸಬೇಕು.

ಬೇಕೆ?

ದ್ರೋಣನೇನು ಸರ್ವಸಾಮಾನ್ಯನಲ್ಲ. ಅವನು ಗುರು. ಗುರುವೇ ಬ್ರಹ್ಮ; ಗುರುವೇ ವಿಷ್ಣು; ಗುರುವೇ ಮಹೇಶ್ವರ-ಅವನೇ ಸಾಕ್ಷಾತ್ ಪರಬ್ರಹ್ಮ. He is God (Governor, Ordainer, Destroyer-GOD) himself in flesh and blood. ಅವನಿಗಿಂತ ಹಿರಿಯರಿಲ್ಲ ಆದ್ದರಿಂದ ಭೀಷ್ಮನೇ ಈ ಗುರುವಿಗೆ ತಲೆಬಾಗಿ ಅಭಿವಂದಿಸಬೇಕು!

ಒಬ್ಬ ಶಿಕ್ಷಕ, ಇನ್ನೊಬ್ಬ ರಕ್ಷಕ! ಹೇಗೆ ಮಾಡಲಿ? ಯಾರಿಂದ ಯಾರಿಗೆ ಮೊದಲು ನಮಸ್ಕಾರ ಮಾಡಿಸಲಿ?— ಎಂದು 'ಕೈ'ಗೆ ಚಿಂತೆ ಬೆನ್ನು ಹತ್ತಿತು. ಇಂತಹ ಸಮಸ್ಯೆಗಳು ಎದುರಾದರೆ ಅವರಿಗೆ ಭೂತ ಹೊಕ್ಕಂತೆ! ಒಂದು ತಿಂಗಳು ಚಿಂತಿಸಿದರೂ ದಾರಿ ಕಾಣದಾಯಿತು.

If at first you don't succeed, starve, pray and try again ಅವರ ಕ್ರಮ! ಅವರು ದುಡಿದ್ದು ಹಾಗೇನೇ! ಈ ಚಿಂತನೆಯಲ್ಲಿ ನವಂಬರ್ ಕಳೆದು ಡಿಸೆಂಬರ್ ಬಂತು!

ಅಂದಿನ ದಿನಗಳ ವಿಕ್ಟೋರಿಯಾ ಆಸ್ಪತ್ರೆಯ ಸೀನಿಯರ್ ಸರ್ಜನ್ ಡಾ. ಮಯಿಲ ವಾಗನಂ ರವರು ಒಂದು ರಾತ್ರಿ 'ಕೈ'ಯನ್ನು ಭೋಜನಕ್ಕೆ ಕರೆದಿದ್ದರು. ಅದನ್ನು ಮುಗಿಸಿ ಅವರು ಮನೆಗೆ ಬಂದರೆ, ಮೈನ್‌ಗೇಟ್ ಮುಂದೆಯೇ ಅವರಿಗೆ ಒಂದು ದೃಶ್ಯ ಚಲನಚಿತ್ರದಂತೆ ನಡೆದು ಭೀಷ್ಮ-ದ್ರೋಣರ ಸಾಕ್ಷಾತ್ಕಾರವಾಯಿತು. ಇಬ್ಬರೂ ಏಕಕಾಲದಲ್ಲಿ ವಿರುದ್ಧ ದಿಕ್ಕುಗಳಿಂದ ರಂಗ ಪ್ರವೇಶ ಮಾಡಿದರು. "Prostrations Acharya!" ಎನ್ನುತ್ತಾ ಬಲತೋಳೆತ್ತಿ ಅಭಿವಾದಿಸುತ್ತ ಭೀಷ್ಮ ಪ್ರವೇಶಿಸಿದರೆ "Greetings Gangeya!" ಎನ್ನುತ್ತ ದ್ರೋಣ ಅದೇ ರೀತಿಯಲ್ಲಿ ಬಂದು ಎದುರುಗೊಳ್ಳಬರಬೇಕೆ!

Eureca! ಆರ್ಕಿಮಿಡೀಸನಿಗೂ ಅಷ್ಟು ಸಂತೋಷವಾಗಿತ್ತೋ. ಇಲ್ಲವೋ! Flash ಆಗಿ ಬಿಟ್ಟಿತು ಕೈಲಾಸಂಗೆ!

ಮನೆಯೊಳಕ್ಕೆ ಹೋಗದೆ ಪಕ್ಕದಲ್ಲಿದ್ದ ಕುದುರೆ ಲಾಯಕ್ಕೆ ಹೋಗಿ ಒಂದೇ ಸಮನೆ ಬರೆಯಲಾರಂಭ! ಅವರ ಏಕಲವ್ಯ ಹುಟ್ಟಿದ್ದು ಕುದುರೆ ಲಾಯದಲ್ಲಿ; ಕೊಟ್ಟಿಗೆಯಲ್ಲಿ ಕ್ರಿಸ್ತ ಹುಟ್ಟಿದ ಹಾಗೆ!

ನಾನು ವಿದ್ಯಾರ್ಥಿಯಾಗಿದ್ದ ಕಾಲದಲ್ಲಿ ಹುಡುಗರು, ಎದುರಿಂದ ಎಲ್ಲಾದರೂ ಮೇಷ್ಟ್ರು ಬರ್ತಿದ್ದು ಕಾಣಿಸಿದರೆ ಸಾಕು, ದಿಕ್ಕೆಟ್ಟು ಎಡವಿ ಓಡಿ ಎಲ್ಲಾದರೂ ಅವಿತುಕೊಂಡುಬಿಡುತ್ತಿದ್ದೆವು. (ನಮ್ಮ ಕನ್ನಡ ಮೇಷ್ಟ್ರು ಪಂಡಿತ ಭರ್ಮೇಗೌಡರೊಬ್ಬರೇ ಸಾಕು!) ನಮಗಷ್ಟು ಭಯ ಮಿಶ್ರಿತ ಭಕ್ತಿ..

ಈಗಿನವರಿಗೆ-ಸದ್ಯ ಹುಡುಗರ ನಮಸ್ಕಾರ ಬೇಡ. 'ಅಯ್ಯೋ, ನಮ್ಮ ಸ್ಟೂಡೆಂಟ್ ಬರ್ತಿದಾರಲ್ಲ-ಇನ್ನೇನ್ ಗತಿ...'ಎನ್ನುತ್ತ ಮೇಷ್ಟ್ರುಗಳೆ ಓಡಿ ಹೋಗಿ ಎಲ್ಲಾದರೂ ಅವಿತಿಟ್ಟುಕೊಂಬ ಕಾಲ ಬಂತಲ್ಲ! ಇದೇನು ಬಂದ ಕಾಲ ಗುಣವೊ? ನಿಂದ ನೆಲದ ಗುಣವೋ?

ತರಗತಿಗಳಿಗೆ ಬರುವಾಗ ಅಥವಾ ಹೋಗುವಾಗ ಅಧ್ಯಾಪಕರ ಅನುಮತಿಯನ್ನು ಕೇಳುವಷ್ಟು ಸೌಜನ್ಯ ಕೂಡ ತೋರದ ಇಂದಿನ ವಿದ್ಯಾರ್ಥಿಗಳೆಲ್ಲಿ, ಏಕಲವ್ಯನೆಲ್ಲಿ! ತರಗತಿಯಲ್ಲೇ ಕುಳ್ಳಿರದೆ, ಪುಸ್ತಕಗಳನ್ನೇ ತಾರದೆ ಕಾರಿಡಾರುಗಳಲ್ಲಿ ಗಟ್ಟಿಯಾಗಿ ಕೂಗುತ್ತ ಕಿರುಚುತ್ತ ಸೀಟಿ ಹಾಕುತ್ತ ಮೆರೆವ ಗುರು ಪೀಡಕನಲ್ಲ ಆ ಏಕಲವ್ಯ. ಸಿಟಿಯಲ್ಲಿ ಬೆಳೆದ ನಾಗರಿಕರ ಮನೆ ಹುಡುಗನಲ್ಲ. ಅವನು! ಕಾಡಲ್ಲಿ ಬೆಳೆದ ಬೇಡರ ಹುಡುಗ! ಇಲ್ಲಿಟರೇಟೂ!!! ಆದರೂ ಅವನದೆಂತಹ ಸಂಸ್ಕಾರ ಸಂಸ್ಕೃತಿಗಳು!

ಗುರು ದ್ರೋಣರು ಅರ್ಜುನನಿಗೆ ಕ್ಲಾಸ್ ತೆಗೆದುಕೊಂಡಿದ್ದಾರೆ. ಅವನಿಗೆಂದೇ ಸ್ಪೆಷಲ್ ಕ್ಲಾಸ್ ಅದು. ಅವರೇನೋ ರಹಸ್ಯಗಳನ್ನು ಬೋಧಿಸುತ್ತಿದ್ದಾರೆ. ಅವರನ್ನು disturb

ನಿಷೇಧವು. ಅದಕ್ಕಾಗಿಯೇ ಮರೆಯಲ್ಲಿ ನಿಂತು, ದೂರದಿಂದಲೇ ಕಿವಿ ನಿಮಿರಿಸಿ–ಅವರು ಅವನಿಗೆ ಬೋಧಿಸುತ್ತಿದ್ದ ಬಿಲ್ಗಾರಿಕೆಯ ಶಿಕ್ಷಣ ಕುರಿತು ಐದು ಮೂಲ ಮಹಾಸೂತ್ರಗಳನ್ನು ಕೇಳುತ್ತ ಮನನ ಮಾಡಿಕೊಳ್ಳುತ್ತಾ, ಒಂದೊಂದಾಗಿ ಬೆರಳು ಮಡಿಸಿ tick off ಮಾಡುತ್ತಾ: A perfect mastery of the ground-work of archery; A power to CON-CEN-TRATE; A deep and fervent love to one's Guru; His whole-hearted willingness to teach, and lastly ASSI DUOUS-PRACTICE ಎಂಬೀ ಪಂಚ ಮಹಾಮಂತ್ರಗಳನ್ನೂ ಮತ್ತೆ ಮತ್ತೆ ಹೇಳಿಕೊಂಡು ಗಟ್ಟಿಮಾಡಿಕೊಂಡ ಬಹದ್ದೂರ ಅವನು! ಬಿಲ್ಗಾರಿಕೆಯಲ್ಲಿ ಅರ್ಜುನನನ್ನೂ ಮೀಗೆ ಮೀರಿಸಿದ "ವಾರೆ ಮೇರೆ ಷೇರ್" ಅವನು! ತಾವು ವಿದ್ಯಾರ್ಥಿಯಾಗಿದ್ದಾಗ ಹೇಗಿದ್ದರೋ ಹಾಗೇನೇ ಏಕಲವ್ಯನನ್ನು ವಿನಯದ ಮೂರ್ತಿಯಾಗಿ ಕಡೆದಿದ್ದಾರೆ ಕೈಲಾಸಂ!

ಅಂತಹ ಶಿಷ್ಯನಿಗೆ ಪ್ರತ್ಯಕ್ಷವಾಗಿ ತಾನು ಏನನ್ನೂ ಬೋಧಿಸದಿದ್ದರೂ ಆ ಗುರುವು ಅವನನ್ನು ಬೇಡಿದ ಗುರುದಕ್ಷಿಣೆ ಎಂತಹುದು! ಮರು ಮಾತಿಲ್ಲದೆ ಅದನ್ನು ಸಲ್ಲಿಸಿದ ಆ ಶಿಷ್ಯನ ಗುರುಭಕ್ತಿ ಎಂತಹುದು! ಇದರ ಪರಿಪೂರ್ಣ ಚಿತ್ರಣವೇ ಕೈಲಾಸಂ ಬರೆದ "PURPOSB."

ಅದನ್ನು ಬರೆಯಲಿಕ್ಕೂ ಅವರಿಗೊಂದು ಪರ್ಪಸ್ ಇತ್ತು. ಅದರಲ್ಲಿ ಬರುವ ಪ್ರತಿಯೊಂದು ಪಾತ್ರಕ್ಕೂ ಒಂದೊಂದು ಪರ್ಪಸ್ ಇತ್ತು–ಜೀವಿತದಲ್ಲಿ. ಅದಕ್ಕಾಗಿಯೇ ನಾಟಕದ ಹೆಸರೇ ಪರ್ಪಸ್!

ಇಂತಹ 'ಪರ್ಪಸ್' ರಚಿಸಲು ಮೂಲವಾದ ಆ ಕಲ್ಲು ಚಪ್ಪಡಿ ಸ್ಯಾಂಡೋ ಸ್ಟುಡಿಯೋ ಪಕ್ಕದಲ್ಲಿದೆ – ಅದರಂತೆಯೇ ಮಾದರಿಯನ್ನು ಅಮೃತಶಿಲೆಯಲ್ಲಿ ಮಾಡಿಸಿ ಕೈಲಾಸಂ ಅಲ್ಲಿಂದ ತಾಯಮ್ಮನಿಗೆ ತಂದರು – ಏಕಲವ್ಯ ಮಾಡಿರಿಸಿದ ಗುರುವಿನ ಮಣ್ಣಿನ ಪ್ರತಿಮೆಯ ಪ್ರತೀಕದಂತೆ!

'ಶಿಷ್ಯಾದಿಚ್ಛೇತ್ ಪರಾಜಯಂ' ಎಂದು ನಮ್ಮಲ್ಲೊಂದು ಮಾತಿದೆ. ವಿದ್ಯೆಯಲ್ಲಿ ಶಿಷ್ಯನು ತನ್ನನ್ನು ಸೋಲಿಸುವ ಮಟ್ಟಕ್ಕೆ ಬಂದಾಗ ಮಾತ್ರ ಗುರುವಿಗೆ ಆ ವಿದ್ಯೆಯನ್ನವನಿಗೆ ಕಲಿಸಿದ್ದು ಸಾರ್ಥಕ. ಆದರಿಂದಲೇ ಗುರುವಿಗೆ ಸಂತೋಷವಾಗಬೇಕಂತೆ. ಈ ಮಾತು ಕೈಲಾಸಂ ವಿಷಯದಲ್ಲಿ ನಿಜವಾಯಿತು.

ಅವರ ಗುರುಗಳಾಗಿದ್ದ ರೈಟ್ ಆನರಬಲ್ ಶ್ರೀನಿವಾಸಶಾಸ್ತ್ರಿಗಳು ಹೇಳಿದ್ದಂತೆ 'Kai' became his best pupil. ಅದರಂತೆ ಪ್ರೊಫೆಸರ್ ಶ್ರೀ ಸಿ. ಆರ್. ರೆಡ್ಡಿಯವರು, ಆಗಲೇ ಹೇಳಿದ್ದಂತೆ—"You will be one to give this world, the Original Mahabharath." 'Purpose' ನಾಟಕ



"ಏಟ್ಸ್‌ನ ಕಾಯಿಲೆ ಇರುವವರನ್ನು ಕರೆತರಲು ನನಗೆ ಮಾತ್ರ ಹೇಳ ಬೇಡಿ, ನನಗೆ ಭಯವಾಗುತ್ತೆ…"

ವನ್ನು ಅವರಿಂದಲೇ ಓದಿಸಿ ಕೇಳಿದ್ದ ಶ್ರೀ ರೆಡ್ಡಿಯವರು ಅದರಂತೆ 'ಕರ್ಣ'ನನ್ನೂ ಬರಿ ಎಂದು ಪ್ರಚೋದಿಸಿದರಂತೆ. ಅವರಾಜ್ಞೆ-ಯಂತೆ ಕೈಲಾಸಂರವರು ಇಂಗ್ಲಿಷಿನಲ್ಲಿ 'Brahmin's Curse' ಅಂತ ಮಹಾಭಾರತದ ಕರ್ಣನನ್ನು ಕುರಿತ ನಾಟಕ ಬರೆದರು.

ಅವರ ಸರ್ವತೋಮುಖ ಪ್ರತಿಭೆಗೆ ಮತ್ತೊಂದು ದೃಷ್ಟಾಂತ: ಅವರ ವಿದ್ಯಾರ್ಥಿದೆಸೆ ಮುಗಿದು, ವಿದೇಶದಲ್ಲಿ ಶಿಕ್ಷಣವೂ ಆಗಿ ಎಷ್ಟೋ ವರ್ಷಗಳ ನಂತರ ಬೆಂಗಳೂರಲ್ಲಿ ಅವರಿಗೆ ಮತ್ತೊಮ್ಮೆ ತಮ್ಮ ಇಂಗ್ಲಿಷ್ ಮೇಷ್ಟ್ರು ಶ್ರೀನಿವಾಸಶಾಸ್ತ್ರಿಗಳನ್ನು ಒಂದು ಅಪೂರ್ವ ಸಂದರ್ಭದಲ್ಲಿ ಭೇಟಿಯಾಗುವ ಅವಕಾಶ ಒದಗಿತು. ಶ್ರೀ ಶಾಸ್ತ್ರಿಗಳು ರಾಜಾತಿಥಿಯಾಗಿ ಬ್ರಿಟಿಷ್ ವಸಾಹತುಗಳನ್ನೆಲ್ಲ ಸಂದರ್ಶಿಸಿ ಸಂಚರಿಸಿ ಬಂದಿದ್ದರು. ಬೆಂಗಳೂರಿನ ಅಮೆ-ಚೂರ್ ಡ್ರಮ್ಯಾಟಿಕ್ ಅಸೋಶಿಯೇಷನ್ನಿನ ಕಾರ್ಯದರ್ಶಿಗಳಾಗಿದ್ದ ಶ್ರೀ ಪಿ. ಕೋದಂಡ ರಾಯರು ಇಲ್ಲಿನ ವೈ. ಎಂ. ಸಿ. ಎ. ಗ್ರೌಂಡ್ಸನಲ್ಲಿ ಒಂದು ಸತ್ಕಾರ — ಅಭಿನಂದನಾಸಮಾರಂಭ ಏರ್ಪಡಿಸಿದ್ದರು. ಗುರುಗಳನ್ನು ನೋಡಲು, ಅವರ ಭಾಷಣ ಕೇಳಲು, ಕೈಲಾಸಂ ಕೂಡ ಹೋಗಿದ್ದರು.

ಗ್ರೌಂಡ್ಸನಲ್ಲಿ ತುಂಬ ಜನ ನಿಶ್ಶಬ್ದವಾಗಿ ಶಾಸ್ತ್ರಿಗಳ ಭಾಷಣ ಕೇಳುತ್ತಿದ್ದಾರೆ. ಲೌಡ್ ಸ್ಪೀಕರ್‌ಗಳು ಆಗಿನ್ನೂ ಬೆಳಕಿಗೆ ಬಂದಿರಲಿಲ್ಲ. ಜನಗಳ ಸೈಲೆನ್ಸೇ ಅಪ್ಲಿಫಯರು! ಗಾಳಿ ಬೀಸುವ ದಿಕ್ಕು ಬದಲಾದಾಗ ಮಾತ್ರ ಕೆಲವು ಮಾತುಗಳು ಕೇಳದೇ ಹೋಗುತ್ತಿದ್ದುವು. ಎಲ್ಲರೂ ಭಾಷಣಕಾರರ ಕಡೆ ಮುಖ ತಿರುಗಿಸಿ ಕೊಂಡು ಕುಳಿತಿದ್ದರೆ 'ಕೈ' ಮಾತ್ರ ದೂರದಲ್ಲಿನ ದೊಡ್ಡ ಮರದ ಕಾಂಡ ಒಂದಕ್ಕೆ ಕಿವಿ ಇರಿಸಿ ನಿಂತಿದ್ದರಂತೆ. ಹೈಸ್ಕೂಲಲ್ಲಿ ಓದಿದ್ದ Laws of Reflection ಈಗ ಅವರ ನೆರವಿಗೆ ಬಂದಿತ್ತು. ಗುರುವಿನ ವಾಣಿ ಗಾಳಿಯಲ್ಲಿ ತೇಲಿ ಬಂದು ಮರದ ಕಾಂಡಕ್ಕೆ ಅಪ್ಪಳಿಸಿ ಪ್ರತಿಫಲಿ-ಸುವ ಬಿಂದುವಿಗೆ ಸರಿಯಾಗಿ ನಿಮಿರಿ ನಿಂತಿತ್ತು ಅವರ ಕಿವಿ. (Angle of incidence is equal to the angle of reflection!)

ಕೇಳಬೇಕು, ಕಲಿಯಬೇಕು ಎಂಬ ಮನೋ-ನಿಶ್ಚಯವಿದ್ದಲ್ಲಿ, ಪ್ರಕೃತಿ ನಿಯಮದ ಎಂತೆಂತಹ Laws ಗಳನ್ನು Loss ಆಗದಂತೆ ಕರಗತ ಮಾಡಿಕೊಳ್ಳಬಲ್ಲ ಶಕ್ತಿ ಯಾರಿಗಾದರೂ ಬಂದೀತು. ಉಳಿದವರಿಗೆಷ್ಟು ಕೇಳಿಸಿತೋ! ಕೈಲಾಸಂ ಮಾತ್ರ ಕೊನೆಯುಕ್ತಿ—ಮೇಷ್ಟು ಹೇಳಿದ ಪ್ರತಿ ಶಬ್ದವನ್ನೂ ತಿರುಗಿ ಹೇಳಬಲ್ಲರಾಗಿದ್ದರು.

ಭಾಷಣ ಮುಗಿಯಿತು. ಶಿಷ್ಯ ಓಡಿಹೋಗಿ ಗುರುವಿಗೆ ನಮಸ್ಕರಿಸಿದ. "So, Papa you are here! ಎಪ್ಪಡಿ ಇರಂದದಿ?" (ಭಾಷಣ ಹೇಗಿತ್ತು) ಎಂದು ಕೇಳಿದರು ತಮಿಳಿನಲ್ಲಿ, ಗುರುಗಳು.

ಆದಕ್ಕೆ ಈ ಶಿಷ್ಯ "ಮಾತೂ ಆಡಿರಬೇಕು; ಮೀನಿಂಗೂ ಇರಬಾರದು ಅನ್ನೋದಕ್ಕೆ ನಿಮ್ಮ ಭಾಷಣ ಸಾಕ್ಷಿಯಾಗಿತ್ತು" ಅಂದುಬಿಡೋದೆ!

"So you have not lost that caustic tongue of yours?" ಎಂದು ಗುರು ವಿಷಾದದಿಂದ ನುಡಿದರೆ "And you have not lost that silver tongue of yours Sir!" ಎಂದು ಶಿಷ್ಯನ ಮೆಚ್ಚಿಗೆ! ಅಂತಹ ಗುರು, ಅಂತಹ ಶಿಷ್ಯ ಈಗೆಲ್ಲಿ ದೊರೆತಾರು!

*

ಹಾಸ್ಯ ಅವರು ಅನುಸರಿಸಿದ Right Royal Road. ಅವರ ಕೈಲಿ ಅದು Quick ಮತ್ತು ಅಷ್ಟೇ ಷೂರ್ ಆಗಿ ಗುರಿ ಮುಟ್ಟುತ್ತಿದ್ದ ಒಂದು ಆಯುಧ. ಅವರಾಡುವ ಮಾತು, ಮಾಡುವ ಜೋಕುಗಳಿಂದ ಅವರ ಕೃತಿ ಕಾರ್ಯ ಗಳಲ್ಲೆಲ್ಲ ನಗೆಯೋ ನಗೆ! ಅಪಾರ ಕರುಣೆಯೇ ಆ ನಗೆಯು ಮೂಲ! ಅಸಹನೆ ಜಿಗುಪ್ಸೆ ತಾತ್ಸಾರ ಕ್ರೌರ್ಯಗಳಲ್ಲ! ಅವರ ಹಾಸ್ಯದ ಚಾಟಿ ಮೃದು ವಾದ ರೇಷ್ಮೆಯದು, ನೂಲಿನದಲ್ಲ!

ಬೆನ್ನ ಹಿಂದೆ ನಿಂತು ವ್ಯಕ್ತಿ ಹಾಸ್ಯಾಸ್ಪದ ವಾಗುವಂತೆ ಮಾಡಿ, ಅವನನ್ನು ಕುಣಿಸುತ್ತಿರುವ ಭೂತಗಳನ್ನು ಎಳೆತಂದು ಅವನಿಗೇ ತೋರಿಸ ಬೇಕೆಂಬುದು ಈ ನಗೆಯ ಉದ್ದೇಶ. ಈ ಭೂತ

ನಗರನಾಯಕನಾಗ ವ್ಯಕ್ತಿ ಪೆಪರಿ ಮುಖರ್ಜಿ ಹೋಗ ದಿರಲೆಂದೇ ಈ ನಗೆಯ ಮುಖವಾಡ!

ಅವರು ಬಳಸುತ್ತಿದ್ದ ಭಾಷೆ ಈಗ ನಾವೆಲ್ಲ ಆಡುವ ಕನ್ನಡಾಂಗ್ಲ: ಇಂಗ್ಲಿಷ್ ಬೆರೆತ ಕನ್ನಡ. ಸಮಾಜಕ್ಕೆ ಕನ್ನಡಿ ಹಿಡಿದು ತೋರಿಸುವ ಕೆಲಸಕ್ಕೆ ಅದು ತಕ್ಕುದಾದ ಭಾಷೆ! 'ಕೈ' ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಭಾಷೆಗೂ ರಿಕಾರ್ಡರ್ ಹಿಡಿದು ಟೇಪ್ ರಿಕಾರ್ಡ್ ಮಾಡಿದವರು!

ಅವರ ಅಂತಹ ಕೃತಿಗಳನ್ನೋದಿದ ಒಬ್ಬ ದೊಡ್ಡ ಮನುಷ್ಯ: "ಪನ್ ಮಿಸ್ಟರ್ ಕೈ! ನಿಮ್ಮ ಡ್ರಾಮಾಸ್‌ನಲ್ಲಿ ಎವೆರಿ ಕನಡಾ ವರ್ಡಿಗೂ ಹಾಫ್ - ಎ-ಡಜನ್ ಇಂಗ್ಲಿಷ್ ವರ್ಡ್ಸ್ ಜೋಡ್ಸಿದೀರಲ್ಲ! ಹೇಗರ್ಥ ಆಗ್‌ಬೇಕು ರೀಡರ್ಸ್‌ಗೆ?" ಎಂದು ಪ್ರಶ್ನೆ ಮಾಡುವ ಮೂರ್ಖ ತನ ಮಾಡಿದ್ದ.

*

ಕೆ. ವಿ. ಅಯ್ಯರ್‌ರವರ ವ್ಯಾಯಾಮ ಶಾಲೆಯಲ್ಲಿ ಅಂದಿನ ಭೇಟಿ ಮುಗಿಸಿ ಮನೆಗೆ ಹೋಗುವ ಮುನ್ನ "ನೀನು ನೋಟೀಸ್ ಮಾಡ್ ಬೇಕು. ಈ ನಿನ್ನ ಶಿಷ್ಯರು ಎಕ್ಸರ್‌ಸೈಸ್ ಮಾಡ್ಸೋವಾಗ ಮುಖ ಎಷ್ಟೆಷ್ಟು ವಕ್ರ ಮಾಡ್ತಾರೆ ಅಂತ. ಅವರ ಮೈ ಮನೋ ಮಾರುತೀ ಹಾಗೆ ಆಗಬೇಕು, ಮುಖಾನೂ ಮಾರುತಿ ಆದರೆ!" ಎಂದು ಗುರುವಿನ ಕರ್ತವ್ಯವನ್ನೂ ಶಿಷ್ಯರಿಗೆ ಎಚ್ಚರಿಕೆಯನ್ನೂ ಒಂದೇ ಚಾವಟೀಲಿ ಹೊಡೆದು ಹೇಳಿ ಬಾಗಿಲು ದಾಟಿ ಹೋದವರು ಕೈಲಾಸಂ!

*

ಆರೋಗ್ಯ ವರ್ಧನೆಗೆ – ರೋಗ ನಿರೋಧನೆಗೆ ವೈದ್ಯರು ಹೇಳುವ ಒಂದು ನುಡಿಗಟ್ಟಿದೆ. An apple a day keeps the doctor away ಅಂತ. ಕಬ್ಬಿಣದ ಅಂಶಗಳಿರುವ ಸೇಬನ್ನು ದಿನಕ್ಕೊಂದರಂತೆ ತಿನ್ನುತ್ತ ಬಂದರೆ ರಕ್ತ ಪುಷ್ಟಿಯಾಗಿ ಮನುಷ್ಯ ನಿರೋಗಿಯಾಗುತ್ತಾನೆ. ವೈದ್ಯರ ಅವಶ್ಯಕತೆ ಅವನಿಗೆ ಬೀಳುವುದಿಲ್ಲ. ಅದಕ್ಕೆ ಕೈಲಾಸಂ "Yes! an onion a day keeps the whole world away" ಎಂದು ಹಾಸ್ಯದ ಮರುಚಾವಟಿ ಏಟು ಕೊಟ್ಟಿದ್ದಾರೆ.

*

ಮನೆಗೆ ಕಾಲಕ್ಕೆ ಸರಿಯಾಗಿ ಬಾರದ ಗಂಡನ್ನ ಹೆಂಡತಿ ಪೆಗ್ಗತ್ ಮೇಲೆ ಮುದ್ದಿಟ್ರೆ ಅದು ಕೈಲಾಸಂಗೆ after all ಅಫೆಕ್ಷನ್ ಅಲ್ಲ, before all ಇನ್‌ಸ್ಪೆಕ್ಷನ್ನು!

*

ಓದದೆ, ಬರೆಯದೆ ಬರೀ ಆಟ ಆಡಿ ಕಾಲ ಕಳೆದ ವಿದ್ಯಾರ್ಥಿಗಳನ್ನು ಲೇವಡಿ ಮಾಡಲು ಅವರು 'ಪೋಲಿ ಕಿಟ್ಟೀ'ಲಿ ನಮ್ ಕಿಟ್ಟಿ ಫುಟ್‌ಬಾಲ್‌ನಲ್ಲಿ ಸೆಂಟರ್ ಫಾರ್ವರ್ಡು! ಸ್ಟಡೀಸ್‌ನಲ್ಲಿ ಫುಲ್‌ಬ್ಯಾಕು! ಎಂದು ಫುಟ್‌ಬಾಲ್ ಆಟದ ಈಡಿಯಂನಲ್ಲೇ ಕಿಕ್ ಒರಿಸುತ್ತಿದ್ದರು. ✡



ಬೆಕ್ಕು ದೇವರನ್ನು ಪ್ರಾರ್ಥಿಸಿತು, "ಹೇ ಪ್ರಭು! ನಾನು ಇದುವರೆಗೂ ನಿನ್ನಲ್ಲಿ ಏನನ್ನೂ ಬೇಡಲಿಲ್ಲ. ಈಗ ನಾನು ಹಸಿವಿನಿಂದಾಗಿ ಕಂಗಾಲಾಗಿದ್ದೇನೆ. ದಯವಿಟ್ಟು, ಒಂದು ಸಾರಿ...ಇಲಿಗಳ ಮಳೆಗರಿ!..." ಎಂದು.

ಬೆಕ್ಕಿನ ಪ್ರಾರ್ಥನೆ ಸಮಯೋಚಿತವಾಗಿತ್ತು. ದೇವರು ಅದರೆಡೆಗೆ ಪ್ರೀತಿಯಿಂದ ನೋಡಿದ: ಕಡೆಗೆ ನಕ್ಕು ಹೇಳಿದ: "ಬೆಕ್ಕೇ, ಸ್ವಲ್ಪ ನಿನ್ನ ಹಿಂದಕ್ಕೆ ತಿರುಗಿ ನೋಡು. ಅಲ್ಲಿ ನಿಂತಿರುವ ನಾಯಿ ದಿನ ನಿತ್ಯ ಈ ದೇವರು ಇದುವರೆಗೂ ಬೆಕ್ಕುಗಳನ್ನು ನನ್ನೆದುರಿಗೆ ಯಾಕೆ ಹಾಕಲಿಲ್ಲವೆಂದು ನನ್ನನ್ನು ನಿಂದಿಸುತ್ತಿರುತ್ತದೆ."

-ಬಿ. ಎನ್. ಶ್ರೀನಾಥ

ಡಾ. ಎಚ್. ಮಹಾದೇವಪ್ಪ

# ರಕ್ತ ಕೊರತೆಯ ನಿವಾರಣೆ ಹೇಗೆ?

"ಡಾಕ್ಟ್ರೇ, ಯಾಕೋ ನಮ್ಮ ಹುಡುಗ ದಿನೇ ದಿನೇ ಒಣಗಿಕೊಂಡು ಹೋಗ್ತಾ ಇದ್ದಾನೆ. ಯಾವುದಾದರೂ ಒಂದು ಟಾನಿಕ್ಕು ಬರೆದು ಕೊಡಿ."

"ಸಾರ್, ನನಗೇಕೋ ತುಂಬ ಸುಸ್ತು. ಮೈ ಕೈ ನೋವು. ತುಂಬಾ ಆಯಾಸ ಆಗ್ತಾ ಇದೆ. ನನಗೆ ಏನೂ ಇಷ್ಟೊಂದು ತೊಂದರೆಯಾಗ್ತಾ ಇರಲಿಲ್ಲ. ಯಾಕೋ ರಕ್ತ ಭಾಳ ಕಡಿಮೆ ಆಗಿದೆ ಅನ್ನಿಸುತ್ತೆ."

"ಡಾಕ್ಟ್ರೆ, ಈಗ ಪ್ರತಿ ತಿಂಗಳು ಹೆಚ್ಚು ರಕ್ತ ಹೋಗ್ತಿದೆ. ರಕ್ತ ಹೋಗೋದನ್ನು ನೋಡಿದರೆ, ಈಗ ನನಗೆ ತುಂಬಾ ಹೆದರಿಕೆ ಆಗ್ತಿದೆ. ಒಳಗಡೆ ಗಡ್ಡೆ, ಏನಾದರೂ ಇರಬಹುದೇ?"

ಈ ರೀತಿ ರೋಗಿಗಳು ರಕ್ತ ಕಡಿಮೆ ಇರುವ ಕಾರಣಕ್ಕಾಗಿ, ಆಸ್ಪತ್ರೆಗೆ ಬರುವುದು ಸಾಮಾನ್ಯ. ಸ್ವಲ್ಪ ಸುಸ್ತಾದರೆ ಸಾಕು, ತಮ್ಮಲ್ಲಿ ರಕ್ತ ತುಂಬ ಕಡಿಮೆ ಇದೆ ಎಂದು ಕೊಂಡು ಟಾನಿಕ್ಕಿಗಾಗಿ ಡಾಕ್ಟರ ಹತ್ತಿರ ಬರುತ್ತಾರೆ.

ರಕ್ತ ಕೊರತೆ ಎಂದರೇನು? ವೈಜ್ಞಾನಿಕವಾಗಿ ಹೇಳಬೇಕೆಂದರೆ ರಕ್ತದಲ್ಲಿನ ಹೀಮೋ-ಗ್ಲೋಬಿನ್ನು ೧೦೦ ಗ್ರಾಂ.ಗೆ ೧೬ ಗ್ರಾಂನಷ್ಟು ಸಾಮಾನ್ಯವಾಗಿ ಇರುತ್ತದೆ. ರಕ್ತ ಕೊರತೆ ಇರುವವರಲ್ಲಿ ಮಾತ್ರ ಈ ಹೀಮೋಗ್ಲೋಬಿನ್ನಿನ ಅಂಶವು ಕಡಿಮೆ ಇರುತ್ತದೆ. ಹೀಗೆ ರಕ್ತದಲ್ಲಿ ಹೀಮೋಗ್ಲೋಬಿನ್ನಿನ ಅಂಶವು ಕಡಿಮೆಯಾದಾಗ ಆಮ್ಲಜನಕವನ್ನು ಕೊಂಡೊಯ್ಯುವ ಶಕ್ತಿಯೂ ಕಡಿಮೆಯಾಗುತ್ತದೆ. ಆಗ ವ್ಯಕ್ತಿಗೆ ಉಸಿರಾಡಲು, ಹೆಚ್ಚು ನಡೆದಾಡಲು, ವ್ಯಾಯಾಮ ಮಾಡಲು ಕಷ್ಟವೆನಿಸುತ್ತದೆ. ಸುಸ್ತು, ಆಯಾಸ, ದಣಿವು ಉಂಟಾಗುತ್ತದೆ. ಈ ರೀತಿಯ ಸ್ಥಿತಿಯನ್ನು ಆದಷ್ಟು ಬೇಗನೇ ಸುಧಾರಿಸುವುದು

[illegible] ಹಾಗೆ ಸುಧಾರಣವಿದ್ದಲ್ಲಿ ವ್ಯಕ್ತಿಯು ಆರೋಗ್ಯವು ಹದಗೆಟ್ಟು ಅನಂತರ ಹೃದಯದ ಮೇಲೆ, ಶ್ವಾಸಕೋಶದ ಮೇಲೆ, ಕೊನೆಗೆ ಮೂತ್ರಪಿಂಡ ಹಾಗೂ ಮಿದುಳಿನ ಮೇಲೂ ಪರಿಣಾಮವನ್ನು ಉಂಟುಮಾಡುತ್ತದೆ. ಆದ್ದರಿಂದ ರಕ್ತವನ್ನು ಆದಷ್ಟು ಸಾಮಾನ್ಯ ಮಟ್ಟಕ್ಕೆ ಅಭಿವೃದ್ಧಿಗೊಳಿಸುವುದು ಅವಶ್ಯ.

ರಕ್ತದ ಅಭಿವೃದ್ಧಿಗೆ ಟಾನಿಕ್ಕುಗಳು ಅವಶ್ಯಕವೆ? ಖಂಡಿತ ಅಲ್ಲ. ರಕ್ತದ ಕೊರತೆಗೆ ಅನೇಕ ಕಾರಣಗಳಿವೆ. ಯಾವ ಕಾರಣದಿಂದ ರೋಗಿಯಲ್ಲಿ ರಕ್ತ ಕೊರತೆ ಉಂಟಾಗಿದೆಯೋ ಆ ಕಾರಣವನ್ನು ನಿವಾರಿಸಿದರೆ ಸಾಕು, ರಕ್ತ ಅಭಿವೃದ್ಧಿಯಾಗುತ್ತಿದೆ. ಮುಖ್ಯವಾಗಿ ಕಬ್ಬಿಣದ ಅಂಶದ ಕೊರತೆಯಿಂದ ಉಂಟಾದದ್ದು. ಸಾಮಾನ್ಯವಾಗಿ . ವಯಸ್ಕರಲ್ಲಿ ಈ ವಿಧದ ರಕ್ತದ ಕೊರತೆಯು ಕಂಡುಬಂದಲ್ಲಿ ಅದು ರಕ್ತಸ್ರಾವದಿಂದ ಉಂಟಾಗಿರಬಹುದು. ಸ್ತ್ರೀಯರಲ್ಲಿ ಪ್ರತಿ ತಿಂಗಳು ಗರ್ಭಕೋಶದಿಂದ ಹೊರಗೆ ಹೋಗುವ ಋತುಸ್ರಾವವು ಹೆಚ್ಚಾದ ಕಾರಣದಿಂದ ಇರಬಹುದು. ಇಲ್ಲವೇ ಸಣ್ಣ ಕರುಳು ಅಥವಾ ದೊಡ್ಡ ಕರುಳಿನಿಂದ ರಕ್ತಸ್ರಾವವಾಗಿ ರಕ್ತವು ನಷ್ಟವಾಗಿರಬಹುದು. ಅಥವಾ ಜಠರದಲ್ಲಿ ಹುಣ್ಣಾಗಿ ರಕ್ತವು ನಷ್ಟವಾಗಿ ರಕ್ತದ ಕೊರತೆಯಾಗಬಹುದು. ಸಾಮಾನ್ಯವಾಗಿ ಜಠರ ಅಥವಾ ಕರುಳಿನಿಂದ ರಕ್ತಸ್ರಾವವಾಗಿ ರಕ್ತ ಕೊರತೆಯುಂಟಾಗಲು ತುಂಬ ಕಾಲ ಬೇಕಾಗುತ್ತದೆ. ಇನ್ನು ಕೆಲವು ವ್ಯಕ್ತಿಗಳಲ್ಲಿ ಹೆಚ್ಚು ರಕ್ತ ದಾನ ಮಾಡುವುದರಿಂದ ರಕ್ತ ಕೊರತೆ ಉಂಟಾಗಬಹುದು. ಕೆಳ ವರ್ಗದ ಅನೇಕರು ಹಣದಾಸೆಗಾಗಿ ರಕ್ತವನ್ನು ತಿಂಗಳಿಗೆ ಎರಡು ಮೂರು ಸಲ ಮಾರುತ್ತಾರೆ. ಬಂದ ಹಣವನ್ನು ಕುಡಿತಕ್ಕೋ [illegible] ಕೆಟ್ಟ ಹವ್ಯಾಸಗಳಿಗೋ ವೆಚ್ಚ ಮಾಡುತ್ತಾರೆ. ಸರಿಯಾದ ಆಹಾರವನ್ನು ತೆಗೆದುಕೊಳ್ಳದೆ ಮತ್ತೆ ಕೆಲವು ದಿವಸಗಳಲ್ಲಿಯೇ ರಕ್ತವನ್ನು ಕೊಡಲು ಹೋಗುವರು. ರಕ್ತ ಕೊರತೆಯ

ಕೇಂದ್ರಕ್ಕೆ ಹೋಗುತ್ತಾರೆ. ಕೊನೆಗೆ ಇವರು ರಕ್ತ ಕೊರತೆಯ ಕಾಯಿಲೆಗೆ ಗುರಿಯಾಗುತ್ತಾರೆ.

ಭಾರತ ದೇಶದಲ್ಲಿ ಕಬ್ಬಿಣದ ಅಂಶದಿಂದ ಉಂಟಾಗುವ ರಕ್ತ ಕೊರತೆಗೆ ಇನ್ನೊಂದು ಮುಖ್ಯ ಕಾರಣ, ಸರಿಯಾದ ಆಹಾರವನ್ನು ತೆಗೆದುಕೊಳ್ಳದೆ ಇರುವುದು. ಸಾಮಾನ್ಯವಾಗಿ ಭಾರತದಲ್ಲಿ ಮನುಷ್ಯನ ಆದಾಯದ ಸುಮಾರು ಶೇಕಡಾ ಮೂವತ್ತರಷ್ಟು ಆಹಾರಕ್ಕೆ ವೆಚ್ಚ ಮಾಡಿದರೂ ದೇಹಕ್ಕೆ ಬೇಕಾಗುವ ಪೌಷ್ಟಿಕ ಆಹಾರವನ್ನು ತೆಗೆದುಕೊಳ್ಳಲು ಅನೇಕರಿಗೆ ಸಾಧ್ಯವಾಗುತ್ತಿಲ್ಲ. ಇಲ್ಲವೆ ಬರುವ ಆದಾಯದ ಹೆಚ್ಚು ಭಾಗವನ್ನು ಕುಡಿತಕ್ಕೆ ಉಪಯೋಗಿಸಿದಾಗ ಅದರಿಂದಲೂ ಪೌಷ್ಟಿಕ ಆಹಾರವನ್ನು ತೆಗೆದುಕೊಳ್ಳಲು ಸಾಧ್ಯವಾಗದೆ ರಕ್ತ ಕೊರತೆಯುಂಟಾಗುತ್ತದೆ. ಪ್ರತಿ ವಯಸ್ಕನಿಗೆ ಸುಮಾರು ೫೦ ಗ್ರಾಂ. ಪ್ರೋಟೀನು; ೨೦ ಗ್ರಾಂ. ಕೊಬ್ಬು ಹಾಗೂ ೧೫೦ ಗ್ರಾಂ. ಪಿಷ್ಟವುಳ್ಳ ಆಹಾರವು ಅತ್ಯಗತ್ಯ. ಇದರ ಜೊತೆಗೆ ರಕ್ತವನ್ನುಂಟುಮಾಡುವ ಅನೇಕ ಜೀವಸತ್ತ್ವಗಳನ್ನೂ ತೆಗೆದುಕೊಳ್ಳಬೇಕು.

ಸಾಮಾನ್ಯವಾದ ಪೌಷ್ಟಿಕ ಆಹಾರದಲ್ಲಿ ಕಬ್ಬಿಣದ ಅಂಶವು ಸುಮಾರು ಹತ್ತರಿಂದ ಹದಿನೈದು ಮಿಲಿಗ್ರಾಂನಷ್ಟಿರುತ್ತದೆ. ಒಂದು ಮಿಲಿಗ್ರಾಂಗಿಂತ ಕಡಿಮೆಯು ಕಬ್ಬಿಣದಂಶವು ಶರೀರದಿಂದ ಹೊರಗೆ ಹೋಗುತ್ತದೆ. ರಕ್ತ ಕೊರತೆಯುಂಟಾಗಲು ಇನ್ನೊಂದು ಮುಖ್ಯ ಕಾರಣ ಹೆಚ್ಚು ಪಿಷ್ಟವನ್ನು ತೆಗೆದುಕೊಳ್ಳುವುದು.

ರೋಗಿಗೆ ತುಂಬ ದಣಿವು, ಆಯಾಸ, ಉಬ್ಬಸ ಉಂಟಾಗಬಹುದು. ಮೊದಲು ಮೂರು ನಾಲ್ಕು ಮೈಲುಗಳಷ್ಟು ದೂರ ಒಂದೇ ಸಮನೆ ಓಡಬಹುದಾದ ವ್ಯಕ್ತಿ ಕೇವಲ ನಾಲ್ಕು ಫರ್ಲಾಂಗುಗಳ ದೂರ ನಡೆಯುವಷ್ಟರಲ್ಲಿ ಸುಸ್ತಾಗಿ ತೇಗಬಹುದು. ಇಡೀ ದೊಡ್ಡ ಮನೆಯ ಅಡಿಗೆಯ ಮನೆಯ ಕೆಲಸವನ್ನೆಲ್ಲ ಮಾಡಿಯೂ ಹೊಲ, ಗದ್ದೆಯಲ್ಲಿ ಹೋಗಿ ದುಡಿಯುತ್ತಿದ್ದ ಹೆಂಗ

ಹಿಗೆ ಅಲಗೆ ಮಾಡಲು ಸಹ ಸಾಧ್ಯವಾಗದೆ ಹೋಗಬಹುದು. ಎದೆ ಡವ ಡವ ಎಂದು ಬಡಿದುಕೊಳ್ಳಲು ಶುರುವಾಗಬಹುದು. ಅಥವಾ ಎದೆಯಲ್ಲಿ ನೋವು ಕಾಣಿಸಿಕೊಳ್ಳಬಹುದು. ಹೃದಯದ ಬಡಿತ ಹೆಚ್ಚಾಗಬಹುದು. ಚರ್ಮವು ಬಿಳಿಚಿಕೊಳ್ಳಬಹುದು. ಕೂದಲು ತುಂಬ ನಯವಾಗಬಹುದು. ಉಗುರಿನಲ್ಲಿಯೂ ಈ ತರದ ಬದಲಾವಣೆಗಳು ಕಾಣಿಸಿಕೊಳ್ಳಬಹುದು. ಅಂದರೆ ನಾಲಿಗೆಯಲ್ಲಿರುವ ಮುಖ್ಯ ವಿಲ್ಲೈಗಳು ಮಾಯವಾಗಿ ನಾಲಿಗೆಯು ತುಂಬ ನುಣಪಾದಂತೆ ಕಾಣಿಸುತ್ತದೆ. ಕೆಲವು ರೋಗಿಗಳಲ್ಲಿ ರಕ್ತ ಕೊರತೆಯು ನುಂಗಲು ಕಷ್ಟವನ್ನುಂಟುಮಾಡುತ್ತದೆ. ಬಾಯಿಯ ಸುತ್ತಲೂ ಅನೇಕ ಹುಣ್ಣುಗಳು ಕಾಣಿಸಿಕೊಳ್ಳಬಹುದು.

ಈ ರಕ್ತ ಕೊರತೆಗೆ ಸರಿಯಾದ ಪರಿಹಾರವನ್ನು ಮಾಡದಿದ್ದಲ್ಲಿ ಹಿಮೋಗ್ಲೋಬಿನ್ನಿನ ಪ್ರಮಾಣವು ೧೬ ಮಿಲಿಗ್ರಾಂನಿಂದ ಮೂರು ಮಿಲಿಗ್ರಾಂ ನಷ್ಟಕ್ಕೆ ಇಳಿಯಬಹುದು. ಆಗ ರೋಗಿಯನ್ನು ಮನೆಯಲ್ಲಿಯೇ ಗುಣ ಪಡಿಸಲು ಅಸಾಧ್ಯವಾಗುತ್ತದೆ. ಸಾಮಾನ್ಯವಾಗಿ ಕೆಂಪು ರಕ್ತದ ಕಣಗಳು ಕಡಿಮೆ ಗಾತ್ರ ಮತ್ತು ಕಡಿಮೆ ಬಣ್ಣವನ್ನು ಹೊಂದಿರುತ್ತವೆ. ಆಗ ರಕ್ತದಲ್ಲಿ ಪೂರ್ತಿಯಾಗಿ ಬೆಳೆಯದೆ ಇದ್ದ ರಕ್ತ ಕಣಗಳು ಕಾಣಿಸಿಕೊಳ್ಳಬಹುದು. ರಕ್ತದಲ್ಲಿನ ಕಬ್ಬಿಣದ ಅಂಶವು ಮೂವತ್ತು ಮೈಕ್ರೊಗ್ರಾಂಗಿಂತಲೂ ಕಡಿಮೆಯಾಗಬಹುದು.

ಈ ಕಾಯಿಲೆಯಲ್ಲಿ ಮೂಳೆಗಳ ತಿರುಳಿನಲ್ಲಿ ಹೀಮೋಸಿಡೆರಿನ್ನಿನ ಅಂಶವು ಪೂರ್ತಿ ಮಾಯವಾಗುತ್ತದೆ. ಕಬ್ಬಿಣದ ಅಂಶದಿಂದ ಉಂಟಾದ ರಕ್ತ ಕೊರತೆಯಲ್ಲಿ ಮಾತ್ರ ಈ ಸ್ಥಿತಿಯು ಕಂಡುಬರುತ್ತದೆ.

ಸಾಮಾನ್ಯವಾಗಿ ರೋಗಿಯು ತೋರಿಸಲು ಹೋದಾಗ ವೈದ್ಯರು "ಓ ಇದು ರಕ್ತ ಕೊರತೆ ಮಾತ್ರ. ರಕ್ತನಿಮ್ಮ ದೇಹದಲ್ಲಿ ಕಡಿಮೆ ಇದೆ ಅಷ್ಟೆ. ನಾನು ಮಾತ್ರೆ ಬರೆದು ಕೊಡ್ತೀನಿ. ತಗೊಳ್ಳಿ. ಎಲ್ಲಾ ಸರಿ ಹೋಗುತ್ತದೆ" ಎಂದರೆ ಮಾತ್ರ ರೋಗಿಯ ಮನಸ್ಸಿಗೆ ನೆಮ್ಮದಿ.

ಸಾಮಾನ್ಯವಾಗಿ ಕಂಡುಬರುವ ರಕ್ತಕೊರತೆಯು ಅಲ್ಪ ಪ್ರಮಾಣದಲ್ಲಿದ್ದರೆ, ಹೆಚ್ಚು ಚಿಂತಿಸಬೇಕಾದ ಅಗತ್ಯವಿಲ್ಲ. ಆದರೆ ರಕ್ತ ಕೊರತೆಯು ತೀವ್ರವಾಗಿದ್ದು, ಹೆಚ್ಚಿನ ಕಾಲ ಅದಕ್ಕೆ ಚಿಕಿತ್ಸೆ ತೆಗೆದುಕೊಳ್ಳದೆ ಇದ್ದಲ್ಲಿ ಅನೇಕ ಸಮಸ್ಯೆಗಳು ಎದುರಾಗಬಹುದು. ಕೆಲವು ಹೆಂಗಸರಲ್ಲಿ ಪ್ಲಮ್ಮರ್— ವಿನ್‌ಸನ್‌ನ ಕಾಯಿಲೆಯು ಬರಬಹುದು. ಈ ಕಾಯಿಲೆಯಲ್ಲಿ ಆಹಾರವನ್ನು ನುಂಗಲೂ ತೊಂದರೆಯಾಗಬಹುದು. ಉಗುರು

### ರಕ್ತ ಕೊರತೆಯ ಮುಖ್ಯ ಲಕ್ಷಣಗಳು

* ಮುಖ ಬಿಳಿಚಿಕೊಂಡಿರುವುದು, ಆಯಾಸ.
* ಕೆಲಸ ಮಾಡಲು ಉತ್ಸಾಹವಿಲ್ಲದಿರುವುದು.
* ದಣಿವು, ಎದೆಯಲ್ಲಿ ಡವ ಡವನೆ ಹೊಡೆದುಕೊಳ್ಳುವುದು.
* ಹೃದಯದ ಬಡಿತ ಹೆಚ್ಚಾಗಬಹುದು.
* ವಿಚಿತ್ರವಾದ ಬಯಕೆಗಳು ಉಂಟಾಗಬಹುದು— ಮಣ್ಣು ತಿನ್ನುವುದು, ಅಕ್ಕಿ ತಿನ್ನುವುದು, ಕಲ್ಲಿನ ಚೂರುಗಳನ್ನು ಅಗೆದು ತಿನ್ನುವುದು (ಪುಡಿ ಮಾಡಿ ಪೌಡರನ್ನು ತಿನ್ನುವುದು, ಇತ್ಯಾದಿ).

ಗಳು ತುಂಬಾ ಸುಸ್ತಾಗಬಹುದು. ರಕ್ತದಲ್ಲಿನ ಹಿಮೋಗ್ಲೋಬಿನ್ನಿನ ಪ್ರಮಾಣವು ತುಂಬ ಕಡಿಮೆಯಾಗಿ ಸಾಮಾನ್ಯವಾದ ಕೆಲಸಗಳನ್ನು ಮಾಡಲೂ ಅಸಮರ್ಥನಾಗಬಹುದು. ಇನ್ನು ಕೆಲವು ಸಂದರ್ಭಗಳಲ್ಲಿ ರಕ್ತಕೊರತೆಯು ಕ್ಯಾನ್ಸರಿನಿಂದಲೂ ಉಂಟಾಗಬಹುದು. ಹೃದ್ರೋಗಿಗಳಲ್ಲಿ ತೀವ್ರ ಮಟ್ಟದ ರಕ್ತದ ಕೊರತೆಯು ಎದೆ ನೋವನ್ನುಂಟು ಮಾಡಬಹುದು ಅಥವಾ ಹೃದಯದ ದಿನ ನಿತ್ಯದ ಕಾರ್ಯಕ್ಕೆ ಧಕ್ಕೆಯನ್ನುಂಟು ಮಾಡಬಹುದು. ಆದ್ದರಿಂದ ತೀವ್ರ ಮಟ್ಟದ ರಕ್ತ ಕೊರತೆಯನ್ನು ಅಲಕ್ಷಿಸದೆ ಚಿಕಿತ್ಸೆ ಪಡೆಯಬೇಕು.

## ಪರಿಹಾರವೇನು?

"ಏನೂ ಯೋಚಿಸಿ ಮಾಡಬೇಡಮ್ಮ, ನಿನಗೆ ಸ್ವಲ್ಪ ರಕ್ತ ಕಡಿಮೆ ಇದೆ ಅಷ್ಟೆ. ನಾನು ಟಾನಿಕ್ಕುಗಳನ್ನು ಬರೆದು ಕೊಡ್ತೀನಿ. ತೆಗೆದುಕೊಳ್ಳಿ, ಎಲ್ಲಾ ಸರಿ ಹೋಗುತ್ತೆ"– ಅನೇಕ ವೈದ್ಯರುಗಳು ಕೊಡುವ ಈ ತರದ ಆಶ್ವಾಸನೆ ಸಾಮಾನ್ಯ. ಆದರೆ ಈ ರೀತಿ ಸಾವಿರಾರು ರೋಗಿಗಳು ತೆಗೆದುಕೊಳ್ಳುತ್ತಿರುವ ಟಾನಿಕ್ಕುಗಳು ಎಷ್ಟರ ಮಟ್ಟಿಗೆ ರಕ್ತವನ್ನು ಹೆಚ್ಚು ಮಾಡುತ್ತವೆ? ಅವುಗಳಿಂದ ರಕ್ತ ಕೊರತೆ ನೀಗುತ್ತದೆನ್ನುವ ಮಾತು ಸುಳ್ಳು.

ಸಾಮಾನ್ಯವಾಗಿ ಮಾರ್ಕೆಟಿನಲ್ಲಿ ಸಿಗುವ ಟಾನಿಕ್ಕುಗಳಲ್ಲಿ ಇರುವುದಾದರೂ ಏನು? ಮದ್ಯಸಾರದಲ್ಲಿ ಮಿಶ್ರಿತವಾದ ಅನೇಕ ಜೀವಸತ್ವಗಳು, ಕೆಲ ಪ್ರಮಾಣದಲ್ಲಿ ಕಬ್ಬಿಣದಂಶ, ಕ್ಯಾಲ್ಸಿಯಂ, ಇತ್ಯಾದಿ. ಆದರೆ ರಕ್ತ ಕೊರತೆಯನ್ನು ನಿವಾರಿಸಲು ಈ ಟಾನಿಕ್ಕುಗಳು ಅಷ್ಟೊಂದು ಅವಶ್ಯವೆ? ಇಲ್ಲ ಎಂದಾಗ ಯಾಕೆ ಅಷ್ಟೊಂದು ಪ್ರಮಾಣದಲ್ಲಿ ಟಾನಿಕ್ಕುಗಳನ್ನು, ವೈದ್ಯರು ರೋಗಿಗಳಿಗೆ ತೆಗೆದುಕೊಳ್ಳಲು ಹೇಳುತ್ತಾರೆ? ಟಾನಿಕ್ಕುಗಳಲ್ಲಿರುವ ಜೀವಸತ್ವಗಳನ್ನು ಕಬ್ಬಿಣದ ಅಂಶವನ್ನು, ಕ್ಯಾಲ್ಸಿಯಂನ್ನು ಮಾತ್ರೆಯ ರೂಪದಲ್ಲಿಯೇ ತೆಗೆದುಕೊಳ್ಳಬಹುದು. ಅಥವಾ ತುಂಬ ಕಡಿಮೆ ದರದಲ್ಲಿ ಎಂದರೆ ಉತ್ತಮವಾದ ಎಲ್ಲಾ ಆಹಾರದ ಅಂಶಗಳನ್ನು ಒಳಗೊಂಡ ಪೌಷ್ಟಿಕ ಆಹಾರವನ್ನು ತೆಗೆದುಕೊಳ್ಳಬಹುದು. ಆದರೆ ಅತಿ ಹೆಚ್ಚಿನ ಪ್ರಮಾಣದಲ್ಲಿ ಟಾನಿಕ್ಕುಗಳು ಮಾರಾಟವಾಗುವುದಕ್ಕೆ ಕಾರಣ ಮಾರಾಟಗಾರರ ಪ್ರಚಾರ ವೈಖರಿ. ಇದೆಲ್ಲಾ ಕೇವಲ ಹಣ ಗಳಿಕೆಯ ಮಾರ್ಗ. ರೋಗಿಗಳು ಈ ಟಾನಿಕ್ಕುಗಳಿಗೆ ಹಣ ಹಾಕುವ ಬದಲು ಸರಿಯಾದ ಆಹಾರದ ಅಂಶಗಳನ್ನು ಒಳಗೊಂಡ (ಹಾಲು, ತತ್ತಿ, ಮಾಂಸ, ತರಕಾರಿ, ಕಾಯಿಪಲ್ಲೆ, ಇತ್ಯಾದಿ) ಪೌಷ್ಟಿಕ ಆಹಾರವನ್ನು ತೆಗೆದುಕೊಳ್ಳಲು ಮುಂದಾಗುವುದವಶ್ಯ.

ಕಬ್ಬಿಣದಂಶದಿಂದ ಉಂಟಾದ ರಕ್ತ ಕೊರತೆಯನ್ನು ನಿವಾರಿಸಲು ಕಬ್ಬಿಣದಂಶವನ್ನು ಒಳಗೊಂಡ ಮಾತ್ರೆಯನ್ನು ದಿನ ನಿತ್ಯದ ಸರಿಯಾದ ಪ್ರಮಾಣದಲ್ಲಿ ಸೇವಿಸಿದರೆ ಸಾಕು. ಅತಿ ಹೆಚ್ಚಿನ ಟಾನಿಕ್ಕುಗಳ ಅವಶ್ಯಕತೆ ಇಲ್ಲ. ಅಷ್ಟೇಕೆ? ಸಾಧಾರಣವಾಗಿ ಕಂಡುಬರುವ ಅಲ್ಪ ಮಟ್ಟದ ರಕ್ತ ಕೊರತೆಯನ್ನು ನಿವಾರಿಸಲು ಇಂಜೆಕ್ಷನ್ ಕೂಡ ಕೊಡಬೇಕಾಗಿಲ್ಲ. ತೀವ್ರ ಮಟ್ಟದ ರಕ್ತ ಕೊರತೆಯಲ್ಲಿ ಮಾತ್ರ ಕಬ್ಬಿಣದಂಶವನ್ನು ಹೊಂದಿರುವ ಇಂಜೆಕ್ಷನ್ ಕೊಡಬೇಕಾಗಬಹುದು. ಅತಿ ತೀವ್ರ ಮಟ್ಟದ ರಕ್ತಕೊರತೆ ಇದ್ದಲ್ಲಿ ಮಾತ್ರ ರಕ್ತವನ್ನು ರಕ್ತನಾಳಗಳ ಮೂಲಕ ಕೊಡಬೇಕಾಗಬಹುದು. ✡



**ಯಾರು ಗಾಢವಾಗಿ ಪ್ರೀತಿಸುತ್ತಾರೋ ಅವರು ಮುದುಕರಾಗುವುದೇ ಇಲ್ಲ; ವಯಸ್ಸಾಗಿ ಅವರು ಸಾಯಬಹುದು. ಆದರೆ ಅವರ ಮನಸ್ಸು ಯೌವನಭರಿತವಾಗಿಯೇ ಇರುತ್ತದೆ.**

**— ಅರ್ಥರ್ ವಿಂಗ್ ಪಿನೆರೊ**






" ಪಾರ್ವತಿ "

ದಟ್ಟ ಕಾಡು. ಗೊಂಡಾರಣ್ಯ. ಮಧ್ಯಾಹ್ನದ ಬಿಸಿಲೂ ಒಳಗೆ ಪ್ರವೇಶಿಸುತ್ತಿಲ್ಲ. ಓಹ್! ಎಂಥ ತಂಪು. ಜುಳುಜುಳು ಹರಿಯುತ್ತಿದೆ ನದಿ. ಬಂಡೆಯಿಂದ ಬಂಡೆಗೆ ಕುಪ್ಪಳಿಸಿ ಬೆಳ್ನೊರೆ ಹಾರಿಸಿ ಕುಲುಕುಲು ನಲಿಯುತ್ತ ನಗುತ್ತ ಅಂಕುಡೊಂಕಾಗಿ ಮುಂದುವರಿಯುತ್ತಿದ್ದಾಳೆ, ಗಂಗಾ ಮಾತೆ. ತಣ್ಣನೆಯ ಗಾಳಿ ಬೀಸುತ್ತ ಮರಗಳನ್ನು ಉಯ್ಯಾಲೆಯಾಡಿಸುತ್ತಿದೆ. ಎಲ್ಲ ಪ್ರಾಣಿಗಳು, ಪಕ್ಷಿಗಳು, ಜಂತುಗಳು ನಿರ್ಭೀತಿಯಿಂದ ವಾಸಿಸುತ್ತಿವೆ. ಅಲ್ಲಿ ತಮಗಾಗಿ ತಮ್ಮ ವಾಸಕ್ಕಾಗಿ ಬಳುವಳಿ ಕೊಟ್ಟ ಆ ಪ್ರಕೃತಿಯ ಉದಾರದಾನಕ್ಕಾಗಿ ಪ್ರಾತಃ ಸಂಜೆ ತಮ್ಮದೇ ಆದ ಭಾಷೆಯಲ್ಲಿ ಭಕ್ತಿಯಿಂದ, ಶ್ರದ್ಧೆಯಿಂದ, ನಿಷ್ಠೆಯಿಂದ ಹಾಡುತ್ತಿವೆ, ಆ ದೇವಿಯನ್ನು ಹೊಗಳುತ್ತಿವೆ.

ಕೊಂಬೆಯಲ್ಲಿ ನೇತಾಡುವ ಮರ್ಕಟಗಳು. ಪೊಟರೆಯಲ್ಲಿ ವಾಸಿಸುವ ಪಕ್ಷಿಗಳು, ಹುತ್ತದೊಳಗೆ ಜೀವಿಸುವ ನಾಗ ಸಂಕುಲ ಪರಸ್ಪರ ಸ್ನೇಹದಿಂದ ಪ್ರೀತಿಯಿಂದ ಬಾಳುತ್ತಿವೆ.

ಸೂರ್ಯ ಎಂದಿನಂತೆಯೇ ತನ್ನ ಹೊಂಗಿರಣ ಬೀರಿದ. ಕೋಗಿಲೆ ಆ ಭಗವಾನನ ಸ್ವಾಗತ ಗೀತೆ ಹಾಡತೊಡಗಿತು. ಪುಟ್ಟಪುಟ್ಟ ಪಕ್ಕಿಗಳು ಆ ದೇವನನ್ನು ಸ್ವಾಗತಿಸಿ ಚಿಲಿಪಿಲಿಗುಟ್ಟುತ್ತಿದ್ದುವು. ಕಾಡುಕೋಳಿ ಮರದ ರೆಂಬೆಯ ಮೇಲೆ ರೆಕ್ಕೆ ಬಿಚ್ಚಿ ಫಡಫಡ ಕೊಡವಿ ಕೊರಳೆತ್ತಿ ಕೂಗುತ್ತಿತ್ತು. ಅಳಿಲು ತನ್ನ ಗೂಡಿನ ಮುಂದೆ ಚೀಂಗುಡುತ್ತಿತ್ತು. ಆಗ ಗಡವ ಕೋತಿಯೊಂದು ಭೀತಿಯಿಂದ ಭಯಂಕರವಾಗಿ ಕಿರುಚಿಕೊಂಡು ಅಪಾಯದ ಸೂಚನೆ ನೀಡಿತು. ತಾಯಿ ಕೋತಿ ತನ್ನ ಮರಿಗೆ ಮೊಲೆ ಊಡಿಸುವುದನ್ನು ಬಿಟ್ಟು ಭೀತಿ ತುಂಬಿದ ಕಣ್ಣುಗಳಿಂದ ಸುತ್ತಲೂ ನೋಡತೊಡಗಿತು. ದೂರದಿಂದ ವಿಚಿತ್ರ ರೀತಿಯ ಧ್ವನಿಗಳು ಕೇಳಿ ಬರುತ್ತಿದ್ದವು. ಎಂದೂ ಕೇಳದ ವಿಚಿತ್ರ ಸ್ವರಗಳು.

ನೂರಾರು ವರ್ಷಗಳಷ್ಟು ಹಳೆಯದಾದ ಮಹಾಮರವೊಂದರ ಮೇಲೆ ಕುಳಿತಿದ್ದ ಮುದಿ ಗೃಧ್ರವೊಂದು ಹೇಳಿತು, "ಮಕ್ಕಳೇ ನಮ್ಮ ನೆಮ್ಮದಿಗೆ ಭಂಗ ಬಂತು. ಇನ್ನು ನಮಗೆ ಇಲ್ಲಿ ಬದುಕಲು ದಾರಿಯಿಲ್ಲ."

ಗಂಟೆಯಂತೆ ಮೊಳಗಿತು ಆ ಧ್ವನಿ. ಆ ಹಿರಿಯನ ಸ್ವರ ಕೇಳಿ ಅರಣ್ಯದ ಪ್ರತಿ ಜೀವಿಯೂ ಭಯದಿಂದ ಬೆದರಿತು. ಅಲ್ಲಿ ಹರಿಯುತ್ತಿರುವ ನೀರಿನ ಸುಂದರ, ಸುಮಧುರ ಸಂಗೀತ ಇದ್ದಕ್ಕಿದ್ದಂತೆಯೇ ಪಾತಾಳದಲ್ಲಿ ಮುಳುಗಿ ಭೀತಿಯಿಂದ ರಕ್ಕಸ ಬಗರಿ ನಿಂತು ಸ್ಮಶಾನ ಮೌನವನ್ನುಂಟು ಮಾಡಿತು. ಕೀಚ್ ಕೀಚ್ ಎನ್ನುತ್ತ ಕೋತಿಗಳು ಮರದಿಂದ ಮರಕ್ಕೆ ಹಾರಿ ಎಲೆಗಳ ಮರೆಯಲ್ಲಿ ಅವಿತು ಮುಂದೇನು ಎಂದು ಪಿಳಿಪಿಳಿ ಕಣ್ಣು ಬಿಡುತ್ತ ಕುಳಿತವು.

ಪುಟ್ಟ ಹಕ್ಕಿಯೊಂದು ತನ್ನ ಅಜ್ಜನ ಸಮೀಪ ಹಾರಿ ಅದರ ಬೆನ್ನಿನ ಮೇಲೇ ಕುಳಿತು, "ಅಜ್ಜಾ, ಎಂಥ ಧ್ವನಿ! ಯಾರು ಅಜ್ಜ ಅದು?" ಎಂದು ಕೇಳಿತು.

ಹದ್ದಿನ ಕಣ್ಣು ತೀರ ಮಂಜು. ಶ್ರವಣ ಶಕ್ತಿಯೂ ಅಷ್ಟೆ. ಆದರೂ ಅನುಭವದಿಂದ ಆ ಧ್ವನಿಯ ಪರಿಚಯವಿದೆ. ಆ ಧ್ವನಿ ತಮ್ಮ ಈ ಪ್ರಕೃತಿಗೆ ಮಾರಕ ಎಂಬುದನ್ನು ಅರಿತಿದೆ. ಈ ಹಿಂದೆ ಅನೇಕ ಕಾಡುಗಳಲ್ಲಿ ವಾಸಿಸಿ ಈ ಧ್ವನಿ ಬಂದ ಕೆಲವೇ ದಿನಗಳಲ್ಲಿ ಆ ಕಾಡನ್ನು ಬಿಟ್ಟು ಓಡಿ ಬಂದ ದಿವಸಗಳ ನೆನಪಿದೆ. ಆ ಕಾಡು ನಾಡಾದುದೂ ತಿಳಿದಿದೆ: ಆಗ ಎಷ್ಟೋ ಸುಂದರ ಪಕ್ಕಿಗಳು ಮಾಂಸಕ್ಕಾಗಿ ಕೊಲ್ಲಲ್ಪಟ್ಟಿದ್ದವು. ಪುಟು ಪುಟು ನೆಗೆಯುವ ಮೊಲಗಳು ಪ್ರಾಣ ಬಿಟ್ಟಿದ್ದವು. ಒಂದು ಕ್ಷಣ ಮಾನವನ ಹಸಿವನ್ನು ಹಿಂಗಿಸಿದ್ದವು. ಸಂಗೀತದ ಹೊನಲನ್ನು ಹರಿಸುವ ಕೋಗಿಲೆಗಳು ಪಟ ಪಟ ಉರುಳಿದ್ದವು. ಈ ಹದ್ದು ಯಾರಿಗೂ ಬೇಕಿರಲಿಲ್ಲ. ಅದರ ಮಾಂಸ ರುಚಿಯಿಲ್ಲ. ಆದ್ದರಿಂದ ಈ ದಾರುಣ ಹೋಮವನ್ನು ನೋಡಲು ಇನ್ನೂ ಬದುಕಿ ಉಳಿದಿದೆ ಅದು.

"ಮಗೂ, ಅದರ ಧ್ವನಿ ಆದ್ರವಾಯಿತು, ಮನುಷ್ಯರು ಈ ಮೂಲೆಗೂ ದಾಳಿಯಿಟ್ಟಿದ್ದಾರೆ ಮಗೂ. ನೀನಿನ್ನು ಚಿಲಿಪಿಲಿ ಗುಟ್ಟಬಾರೆ. ಕೋಗಿಲೆಯ ರಾಗ ಕೇಳುವಂತಿಲ್ಲ. ಕೋತಿಗಳು ಮರದಿಂದ ಮರಕ್ಕೆ ಹಾರಲಾರವು. ನವಿಲಿನ್ನು ಗರಿಗೆದರಿ ಕುಣಿಯಲಾರದು. ಜಿಂಕೆಗಳು ಅರಳು ಗಂಗಳಿಂದ ಅತ್ತಿತ್ತ ಓಡಲಾರವು."

ಅದರ ಕಣ್ಣುಗಳು ನೀರಿನಿಂದ ತುಂಬಿದ್ದವು. ಮುಂದೆ ಅದು ಮಾತನಾಡಲು ಯತ್ನಿಸಿರಲಿಲ್ಲ. ತಾನು ವಾಸಿಸುತ್ತಿದ್ದ ಹೆಮ್ಮರ. ಸುತ್ತಲಿನ ಪರಿಸರ, ತನ್ನೊಂದಿಗೆ ವಾಸಿಸುತ್ತಿರುವ ಪ್ರಾಣಿ ಪಕ್ಷಿಗಳು ಎಲ್ಲವೂ ನಾಶವಾಗುತ್ತವೆ ಎಂಬುದರ ಅರಿವಾಗುತ್ತಲೇ, ಭೀತಿಯ ಕರಿಯ ತೆರೆ ಬಂದು ಕೋರೆದಾಡೆಗಳನ್ನು ತೋರಿಸಿ ವಿಕಟಾಟ್ಟಹಾಸದಿಂದ ನಕ್ಕಿತು. ಆ ಮುದಿ ಹದ್ದು ಸ್ತಂಭೀಭೂತವಾಗಿ ಕುಳಿತು ಬಿಟ್ಟಿತು.

ಪುಟ್ಟ ಹಕ್ಕಿ ಅದರ ಕಿವಿಯಲ್ಲಿ ಊದಿತು. "ಅಜ್ಜ ಅಜ್ಜ ಯಾಕೆ ನಡುಗುತ್ತೀ? ಅದೇಕೆ ಕಣ್ಣೀರು? ಅಜ್ಜ ಏನಾಯಿತು ನಿನಗೆ?"

ಆ ಮುದಿ ಹದ್ದು ಕೊಕ್ಕನ್ನು ಅಗಲವಾಗಿ ತೆರೆದು ಒಮ್ಮೆ ಮುಚ್ಚಿತು.

ಕಲರವ ಹತ್ತಿರ ಹತ್ತಿರವಾಗುತ್ತಿತ್ತು.. ಆ ಪುಟ್ಟ ಹಕ್ಕಿಗೆ ಅರ್ಥವಾಗದ ಧ್ವನಿ, ಅದು ಎಂದೂ ಕೇಳದ ವಿಕೃತ ಸ್ವರ. "ಅಜ್ಜ ಅಜ್ಜ ಅದೇನು?" ಅದು ಮತ್ತೆ ಕೇಳಿತು.

ಪ್ರಾಜ್ಞನಂತೆ ಆ ಗೃಧ್ರ ಹೇಳಿತು. "ಮಗೂ ಅದೇ ಮನುಷ್ಯರ ಸ್ವರ. ನೀನು ನೋಡುತ್ತಿದ್ದಂತೆಯೇ ಅವರು ಈ ಮರಗಳನ್ನು ಪೊದೆಗಳನ್ನು ನಾಶ ಮಾಡುತ್ತಾರೆ. ನಿರ್ಮಲವಾದ ನೀರು ಕಲ್ಮಶದಿಂದ ತುಂಬುತ್ತವೆ. ಬಂಡೆಗಳು ಸಿಡಿಯುತ್ತವೆ. ನಂತರ ಇದೇ ಜಾಗದಲ್ಲಿ ವಾಹನಗಳು ಓಡಾಡುತ್ತವೆ. ನಾವು ನೆಮ್ಮದಿಗಾಗಿ ನೆಲೆಯೂರಿದ ಜಾಗ ನಾಶವಾಗುತ್ತದೆ. ಪರಿಸರ ಮಲಿನವಾಗುತ್ತದೆ. ನಮಗಿನ್ನು ತಿನ್ನುವ ಹಣ್ಣುಗಳಿಲ್ಲ. ಮೊಲವಿನ್ನು ಹಿಂಗಾಲಲ್ಲಿ ನಿಂತು ಗರಿಕೆ ಹುಲ್ಲು ತಿನ್ನಲಾರದು. ಪಕ್ಷಿಗಳಿಗೆ ನಿರ್ಭೀತಿಯಿಂದ ಕುಳಿತು ಸ್ವಚ್ಛಂದವಾಗಿ ಹಾಡುವ ತಾಣವಿಲ್ಲ. ಓ. ಮಗೂ! ಎಲ್ಲೆಡೆಗಳಿಂದ ಅರಣ್ಯ ಭಯೋತ್ಪಾದಕರು ಮುತ್ತುತ್ತಿದ್ದಾರೆ. ಅವರ ಕೈಯಲ್ಲಿ ನೋಡು. ಕಾಡನ್ನು ನಾಶಮಾಡುವ ಅಸ್ತ್ರಗಳು."

ಪುಟ್ಟ ಹಕ್ಕಿ ತನ್ನ ಚಿಕ್ಕ ಕಣ್ಣುಗಳನ್ನು ಅಷ್ಟಗಲ ಮಾಡಿ ನೋಡಿತು. ದೈತ್ಯಾಕಾರದ ಮರಗಳ ಬುಡದಲ್ಲಿ ಆ ಮನುಷ್ಯರು ಏನನ್ನೋ ಹಿಡಿದು ನಿಂತಿದ್ದಾರೆ. ಅವರು ಒಬ್ಬಿಬ್ಬರಿಲ್ಲ. ನೂರು ಜನರಿದ್ದಾರೆ. ಮೇಲೆ ನೋಡುತ್ತಾರೆ. ಸುತ್ತಲೂ ವೀಕ್ಷಿಸುತ್ತಾರೆ. ಅವರ ಮುಖದಲ್ಲಿ ಕ್ರೂರ ನಗೆ ಮಿಂಚುತ್ತದೆ. ಮರದ ಎತ್ತರ ಗಾತ್ರ ನೋಡಿ ಆನಂದ ಪಡುತ್ತಾರೆ. ಅಷ್ಟರಲ್ಲಿ ಕೆಂಪು ಕಣ್ಣಿನ ಮನುಷ್ಯನೊಬ್ಬ ಆ ಹದ್ದು ಕುಳಿತ ಮರಕ್ಕೆ ಸುತ್ತು ಬರುತ್ತಾನೆ. ಅದನ್ನು ಚೆನ್ನಾಗಿ ಪರೀಕ್ಷಿಸಿ ಕೈ ಬೆರಳು ಮಡಚುತ್ತ ಬಿಡಿಸುತ್ತ ಲೆಕ್ಕ ಹಾಕುತ್ತಾನೆ,

ಸುತ್ತಲೂ ಗಜಿಬಿಜಿ, ಕೋಲಾಹಲ. ಸಣ್ಣ ಪುಟ್ಟ ಮರಗಳ ಬುಡಕ್ಕೆ ಕೊಡಲಿ ಏಟು, ಹಾಹಾ

[illegible] ಮರಗಳು [illegible]ತ್ತಿವೆ. ಎಷ್ಟು ಕಾಲದಿಂದ ಈ ರಮ್ಯ ಪ್ರಕೃತಿ ಇಲ್ಲಿದೆಯೋ? ಅಭಯಾರಣ್ಯವೆಂದು ನಂಬಿ ಎಷ್ಟು ಜೀವಿಗಳು ಬದುಕನ್ನು ಕಳೆಯುತ್ತಿವೆಯೋ? ಆ ಮುದಿ ಗೃಧ್ರ ತನಗೆ ಹಾರಲೂ ಆಗದೆ, ಇರಲೂ ಆಗದೆ ಇರುವ ಸ್ಥಿತಿಯಲ್ಲಿ ಹೇಳಿತು, "ಎಲ್ಲರೂ ಓಡಿರಿ ಭಯೋತ್ಪಾದಕರು ಸುತ್ತುವರದಿದ್ದಾರೆ. ಆದಷ್ಟು ಬೇಗ ತಪ್ಪಿಸಿಕೊಳ್ಳಿ. ದೂರ ಬಹುದೂರ ಓಡಿ ಹೋಗಿ."

ಪುಟ್ಟ ಹಕ್ಕಿ ಕೇಳಿತು, "ನೀನು ಬರುವುದಿಲ್ಲವೇ ಅಜ್ಜ?"

ನಿಸ್ಸಹಾಯಕವಾಗಿ ಆ ಮುದಿ ಪಕ್ಷಿ ನುಡಿಯಿತು: "ಎಲ್ಲಿಗೆ ಬರಲಿ ಮಗೂ, ನಾನು ಹೇಗೆ ಬರಲಿ?"

"ನಿನ್ನನ್ನು ಬಿಟ್ಟು ಹೋಗಲೇ ಅಜ್ಜ?" ಮುಗ್ಧವಾಗಿ ಕೇಳಿತು ಆ ಪುಟ್ಟ ಹಕ್ಕಿ.

ಗೃಧ್ರ ಮೌನವಾಗಿ ಆ ಪುಟ್ಟ ಹಕ್ಕಿಯನ್ನು ನೋಡಿತು. "ಅಯ್ಯೋ! ಕರುಣೆ ಯಾರ ಪಾಲಿಗೆ? ಬುದ್ಧಿಜೀವಿಗೋ ಬುದ್ಧಿಹೀನ ಪ್ರಾಣಿಗೋ! ಅದು ತನ್ನಲ್ಲೇ ಸಂಕಟ ಪಟ್ಟಿತು.

ಪ್ರಾಣಿಗಳು ಓಡಬಹುದು. ಆದರೆ ಈ ಸ್ಥಿರ ಜೀವಿ! ಈ ದೈತ್ಯ ಮರ! ಗಾಳಿ ಬೀಸಿತು. ಎಲೆ ಎಲೆಗಳೂ ಮಾತನಾಡಿಕೊಂಡವು: "ಇನ್ನು, ನಮ್ಮ ಆಯುಷ್ಯ ಮುಗಿಯಿತು. [illegible]ವಾಗಿ ಅಲ್ಲ, ಅಪಮೃತ್ಯುವಿನಲ್ಲಿ."

ಗೃಧ್ರಕ್ಕೆ ತಾನು ಕುಳಿತ ಮರದ ಬುಡಕ್ಕೆ ಕೊಡಲಿ ಏಟು ಬೀಳುವುದು ಕೇಳಿಸುತ್ತಿದೆ. ಆದರೆ ಅದು ಓಡಲಾರದು. ಕಾಗೆಗಳೋ, ಗೂಗೆಗಳೋ ತಂದಿತ್ತ ಕೊಳೆತ ಮಾಂಸವನ್ನು ತಿನ್ನುತ್ತ, [illegible] ಕುಳಿತಿದೆ ಅದು. ಉಳಿದ ಪ್ರಾಣಿಗಳು, ಪಕ್ಷಿಗಳು, [illegible]ಗಳು ಓಡುತ್ತಿವೆ. ತಾನು ಮಾತ್ರ [illegible]ವಾಗಿ ಕುಳಿತಿದೆ. ತನ್ನನ್ನು ಬಿಟ್ಟು ಆ ಪುಟ್ಟ ಹಕ್ಕಿಯೂ ಈಗ ಓಡುತ್ತಿದೆ. ತನಗೀಗ ಯಾರೂ ಇಲ್ಲ, ಎಲ್ಲರಿಗೂ ಪ್ರಾಣ ಭಯ!

ಸುತ್ತಮುತ್ತಲೂ ಕೊಡಲಿ ಏಟುಗಳು, ಗರಗಸದ ವಿಚಿತ್ರ ಧ್ವನಿ, ಕಾಡನ್ನೇ ನಡುಗಿಸುವ ಬಂದೂಕಿನ ಸಪ್ಪಳ, ಪ್ರಾಣಿಗಳ ಆರ್ತನಾದ! ಒಮ್ಮೆಲೆ ಕಿಲಕಿಲ ನಗು, ಹೆಗಲ ಮೇಲೆ ತಂದ ಜಿಂಕೆ, ಕಡವೆಗಳ ಹೆಣ. ಎಲ್ಲವೂ ತನಗಾಗಿ, ತನ್ನ ಸುಖಕ್ಕಾಗಿ ಎಂಬ ಠೇಂಕಾರದ ಧ್ವನಿ. ಆ ಮನುಷ್ಯರ ಕ್ರೂರತೆಯಲ್ಲಡಗಿದೆ.

ತನಗೆ ಆಶ್ರಯವಿತ್ತ ಮರದ ಮೇಲೆ ಕೊಡಲಿ ಏಟು ಬಿದ್ದು, ಅದು ವೇದನೆಯಿಂದ ನರಳುವುದನ್ನು ಕೇಳಿ ಆ ಬುದ್ಧಿಹೀನ ಹದ್ದಿಗೂ ಅಳು ಬಂತು, ಆದರೆ ಅಳಲಿಲ್ಲ: ಬದಲಾಗಿ ನಕ್ಕು ಬಿಟ್ಟಿತು. ಅದರ ಧ್ವನಿ ಮಾತ್ರ ನಭೋಮಂಡಲದಲ್ಲಿ ಸಿಡಿದ ಪುಟ್ಟ ಪಟಾಕಿ.

ಒಂದೇ ಒಂದು ದಿನದಲ್ಲಿ ಹಲವರ ಆಘಾತ ವಿಘಾತದಿಂದ ಎಷ್ಟೋ ನೂರು ವರ್ಷಗಳ ಹಿಂದಿನ ಆ ಮರ ಮಹಾ ಶಬ್ದದೊಂದಿಗೇ ದಿಂಡುರುಳಿ, ನಿಸ್ಸಹಾಯಕವಾಗಿ ನೆಲದ ಮೇಲೆ ಬಿದ್ದಿತು. ಅಲ್ಲಿಯವರೆಗೆ ಆ ಕಾಡಿನೊಳಗೆ [illegible] ಎಂಬುದನ್ನು ಕಂಡಿರದಿದ್ದ ರವಿ ಈಗ ಸಮಯ ಸಾಧಿಸಿ ತನ್ನ ಕಿರಣವನ್ನು ತೂರಿಸಿದ.

ಆ ಹಳೆಯ ಮರ ಬೀಳುವ ಗದ್ದಲದಲ್ಲಿ ತನ್ನ ಆಶ್ರಯದಲ್ಲಿದ್ದ ಆ ವೃದ್ಧ ಗೃಧ್ರರಾಜನನ್ನು ಅಪ್ಪಚ್ಚಿ ಮಾಡಿದುದನ್ನು ಸಾರಿತು, ಮೊದಲ ಸೂರ್ಯ ಕಿರಣ.

ಕೆಲವೇ ದಿನಗಳಲ್ಲಿ, ನಡು ಮಧ್ಯಾಹ್ನವೂ ಬಿಸಿಲು ಬೀಳದ ಆ ತಾಣ, ಬೆಳಗಾಗುವಾಗಲೇ ಸೂರ್ಯನ ಬಿಸಿಲು ಬಿದ್ದು ಕಾವೇರತೊಡಗಿತ್ತು.

✿

-೯೪-

## ಜಾದು, ಮ್ಯಾಜಿಕ್

ಜಾದೂ, ಜಾದೂಗಾರ ಸುಪರಿಚಿತ ಶಬ್ದಗಳು. ಜಾದೂ ಪಾರಸೀಕ ಭಾಷೆಯಿಂದ ಈಚೆಗೆ ತಾನೆ ಬಂದು ಸೇರಿದ ಶಬ್ದ. ಕೈಚಳಕ, ಚಾಯ್ಟಳಕಗಳಿಂದ ಪ್ರೇಕ್ಷಕರನ್ನು ಮಂಕು ಮಾಡಿ ಅದ್ಭುತ, ಅಲೌಕಿಕ ಎನಿಸುವ ಕೃತ್ಯಗಳನ್ನು ಮಾಡಿತೋರಿಸುವ ವಿದ್ಯೆ ಇದು. ಹಿಂದೆ ಜೋಯಿಸರು ಇದರಲ್ಲಿ ಎತ್ತಿದ ಕೈಯಾಗಿದ್ದರು. "ಚಪ್ಪಡಿ ವಿದ್ಯೆ" ಎಂದೂ ಅದನ್ನು ಕರೆಯುತ್ತಿದ್ದುದನ್ನು ಕೇಳಿದ್ದೇನೆ. ಇದೀಗ ಮೇಲ್ವರ್ಗದ ಜನರೂ ಅದನ್ನು ಕಲಿತು ಪ್ರದರ್ಶಿಸುತ್ತಾರೆ. ವೈಜ್ಞಾನಿಕ ಅಂಶಗಳೂ ಅದರಲ್ಲಿವೆ.

ಜಾದೂ ಈಗ ಒಂದು ವಿನೋದವಿದ್ಯೆಯಾಗಿದೆ. ಶಬ್ದ ನಮ್ಮ ನೆರೆ ದೇಶದಿಂದ ಬಂದದ್ದು. ಆದರೆ ಪ್ರಾಚೀನ ಭಾರತದಲ್ಲಿ ಈ ಪದದ ಒಂದು ರೂಪ ಭಯಪ್ರದ ಶಕ್ತಿಯನ್ನು ಸೂಚಿಸುವ ಪದವಾಗಿ ವೇದಕಾಲದುದ್ದಕ್ಕೂ ಪ್ರಚಲಿತವಾಗಿತ್ತು ಎಂದರೆ ಆಶ್ಚರ್ಯವಾದೀತು. ಪ್ರಾಚೀನ ಪಾರಸೀಕ ಭಾಷೆಗೆ ಅಕ್ಕನ ಸ್ಥಾನದಲ್ಲಿದ್ದ ವೇದ ಭಾಷೆಯಲ್ಲಿ ಇದು **ಯಾತು** ಆಗಿತ್ತು, ಮಾಟ, ಮಂತ್ರವಾದ, ಭೂತ, ಪಿಶಾಚಿ, ದುರ್ದೇವತೆ, ರಾಕ್ಷಸ ಇತ್ಯಾದಿಗಳೂ ಅವುಗಳ ಉಪದ್ರವಗಳೂ ಅವುಗಳನ್ನು ಕೈವಶಮಾಡಿಕೊಳ್ಳುವುದೂ **ಯಾತು**ವೆನಿಸಿತ್ತು. ಋಕ್, ಅಥರ್ವ, ಬ್ರಾಹ್ಮಣಗಳು, ಸೂತ್ರಗಳೇ ಮೊದಲಾದ ಸಾಹಿತ್ಯದ ತುಂಬೆಲ್ಲ **ಯಾತುಗಳದ್ದಾರ್ರೈ** ಇವೆ. **ಯಾತುಧಾನ** ಎಂದರೆ ಒಂದು ಪಿಶಾಚಿ, **ಯಾತುಜೂ** ಎಂದರೆ ಯಾತುಗಳಿಂದ ಪ್ರೇರಿತವಾದ ಪೀಡೆ, ಪಿಡುಗುಗಳು; **ಯಾತುಕೃತ್** ಎಂದರೆ ಮಾಟ ಮಾಡುವವನು.

ಈ ಅಲೌಕಿಕ ಯಾತುಗಳ ಭಯ ಹೆಚ್ಚಿತ್ತೆಂದರೆ ಅವುಗಳ ಪರಿಹಾರ, ನಾಶ ಪ್ರತೀಕಾರಕ್ಕಾಗಿ ಮಂತ್ರತಂತ್ರಗಳನ್ನು ಋಕ್, ಅಥರ್ವಾದಿಗಳಲ್ಲಿ ಕಾಣುತ್ತೇವೆ. **ಯಾತುಚಾತನ, ಯಾತುಭಂಜನ, ಯಾತುಕ್ಷಯಣ** ಮೊದಲಾದವು ಈ ಪ್ರತೀಕಾರೋಪಾಯ ಸೂಚಕಗಳಾಗಿದ್ದವು. ಅವುಗಳಲ್ಲಿ ಕೆಲವು ಮಂತ್ರಗಳು ಇಂದಿಗೂ ವೈದಿಕರ ನಿತ್ಯ ಪಠನೆಯಲ್ಲಿ ಉಳಿದುಕೊಂಡಿವೆ. ವಸಿಷ್ಠ ಋಷಿ ಮತ್ತು ಅವನ ವಂಶಸ್ಥರು ಈ ಯಾತುಚಾತನ (ಭೂತೋಚ್ಚಾಟನೆ ಎನ್ನಿ ಬೇಕಾದರೆ)ದಲ್ಲಿ ತಜ್ಞರಾಗಿದ್ದರು. ವಸಿಷ್ಠನ ಒಂದು ಮಂತ್ರವನ್ನು (ಪ್ರತಿಚಕ್ಷ್ವ ವಿಚಕ್ಷ್ವೇಂದ್ರಶ್ಚ ಸೋಮಜಾಗೃತಂ ಇತ್ಯಾದಿ) ನಿತ್ಯ ಸಂಧ್ಯಾವಂದನೆಯಲ್ಲಿ ಪಠಿಸಿ ಯಾತುಗಳನ್ನು ಹಿಡಿಸಿಂದ ನಾಶ ಮಾಡೆಂದು ಇಂದ್ರಾಸೋಮರನ್ನು ಪ್ರಾರ್ಥಿಸಲಾಗುತ್ತದೆ (ಋಗ್ವೇದ ೭ನೇ ಮಂಡಲ). ಅವನದೇ (ಋಕ್ ೭, ೧೦೪, ೨೨) ಇನ್ನೊಂದು ಮಂತ್ರವನ್ನು ರಾತ್ರಿಯಲ್ಲಿ ಮಲಗುವ ಮುಂಚೆ ಪಠಿಸುತ್ತಾರೆ. ಆ ಮಂತ್ರದಿಂದ ಯಾತುಗಳು ರಾತ್ರಿಯಲ್ಲಿ ಗೂಗೆ, ಹದ್ದು, ನಾಯಿ ಮೊದಲಾದ ರೂಪಗಳಲ್ಲಿ ಕಾಣಿಸಿಕೊಳ್ಳಬಹುದೆಂದು ಅರ್ಥವಾಗುತ್ತದೆ. ಪುರಾತನ ಭಾರತ ಇರಾನ ಎರಡೂ ಭಾಷೆಗಳಲ್ಲಿ ಒಂದೇ ಶಬ್ದ ಲೋಕೋತ್ತರ ಅನಿಷ್ಟ ಶಕ್ತಿಗಳನ್ನು ಸೂಚಿಸುತ್ತಿದ್ದುದು ಗಮನಾರ್ಹವಾಗಿದೆ.

ವೇದೋತ್ತರ ಕಾಲದಲ್ಲಿ ಈ ಶಬ್ದ ಯಾವ ಕಾರಣದಿಂದಲೋ ಮಾಯವಾಗಿ ಅದು ಪ್ರತಿನಿಧಿಸುವ ಅರ್ಥಗಳನ್ನು ರಾಕ್ಷಸ, ಭೂತ, ಪ್ರೇತ, ಪಿಶಾಚಿಗಳು ಸೂಚಿಸತೊಡಗಿದವು.

ಅನ್ಯರ ವಶೀಕರಣ ಮತ್ತು ಆ ಬಲದಿಂದ ಮಾಟ ಮಾಡುವುದಕ್ಕೆ ಅಭಿಚಾರ ಎಂದು ಹೆಸರು ಇತ್ತು. "ಅಭಿಚಾರ" ಅಥರ್ವವೇದದಲ್ಲೇ ಬಳಕೆಗೆ ಬಂದಿದೆ. ಅಥರ್ವಣವು ಆಧಾರಿತ ಅಭಿಚಾರಕಲ್ಪ ಎಂಬ ಮಾಟದ ಗ್ರಂಥವೇ ಇದೆ.

*

ಜಾದೂವಿನಂತೆಯೇ ಅದೇ ಅರ್ಥದಲ್ಲಿ **ಮ್ಯಾಜಿಕ್** ಎಂಬ ಇಂಗ್ಲೀಷ್ ಶಬ್ದ ಪ್ರಯೋಗವಾಗಿದೆ. ಮ್ಯಾಜಿಕ್ (Magic) ಕೂಡ ಇಂದು ಒಂದು ವಿನೋದ ವಿದ್ಯೆಯೇ ಆಗಿದೆ. ಹಿಂದೆ ಪಾಶ್ಚಾತ್ಯ ದೇಶಗಳಲ್ಲಿ ಅದು ನಮ್ಮ ಅಭಿಚಾರದಂತೆ ಅಲೌಕಿಕ ಶಕ್ತಿಯಿಂದ ಮಾಟ ಮಾಡುವುದಕ್ಕೇ ಸಲ್ಲುತ್ತಿತ್ತು. ಈ ತಂತ್ರಗಳನ್ನು ದುಷ್ಟ ಉದ್ದೇಶಗಳಿಗೆ ಬಳಸುವುದು black magic –ಕಪ್ಪು ಅಭಿಚಾರ, ಒಳ್ಳೆಯದಕ್ಕೆ ಉಪಯೋಗಿಸುವುದು white magic— ಬಿಳಿಯ ಅಭಿಚಾರ.

ಈ ಶಬ್ದ ಕೂಡ ತನ್ನದೇ ಇತಿಹಾಸ ಹೊಂದಿದೆ. ಅದು ಪ್ರಾಚೀನ ಪಾರಸೀಕ ಭಾಷೆಯ ಪದವಾದ **ಮಗಸ್**‌ನಿಂದ ಗ್ರೀಕ್, ಲ್ಯಾಟಿನ್ ಮೂಲಕ ೧೪ನೇ ಶತಮಾನದಲ್ಲಿ ಇಂಗ್ಲೀಷಿನಲ್ಲಿ ಸೇರಿತು. ಪ್ರಾಚೀನ ಇರಾನದಲ್ಲಿ (ನಮ್ಮವರು ಪಶ್ಚಿಮ ಇರಾಣವನ್ನು ಶಕದ್ವೀಪ ಎನ್ನುತ್ತಿದ್ದರು) **ಮಗ** ಎನ್ನುವ ಪುರೋಹಿತ ವರ್ಗವಿತ್ತು. ಸೂರ್ಯಾರಾಧಕರಾದ ಅವರು ಮಂತ್ರವಿದ್ಯೆ, ಭವಿಷ್ಯ ವಿದ್ಯೆಗಳ ಪ್ರವೀಣರೆಂದು ಪ್ರಸಿದ್ಧಿ ಇತ್ತು. ಈ ಮಗ ಪುರೋಹಿತರೇ ತಮ್ಮ ದಿವ್ಯದೃಷ್ಟಿಯಿಂದ ಕ್ರಿಸ್ತಾವತಾರದ ಭವಿಷ್ಯ ಹೇಳಿದ್ದರೆಂದು ಬೈಬಲ್ಲಿನ ಹೊಸ ಒಡಂಬಡಿಕೆ ಉಲ್ಲೇಖಿಸುತ್ತದೆ. ಅವರನ್ನು "ಪೂರ್ವ ದೇಶದ ಜ್ಞಾನಿಗಳು" ಎಂದು ಕರೆಯಲಾಗಿದೆ. ಮಗರ ವಿದ್ಯೆಯೇ ಮ್ಯಾಜಿಕ್. ಮ್ಯಾಜಿಕ್ಕಿನಲ್ಲಿ ಜ್ಯೋತಿಷ್ಯದ ಭಾಗ ಮರೆಯಾಗಿ ಅಭಿಚಾರ ವಿದ್ಯೆಯಷ್ಟೇ ಉಳಿಯಿತು.

ಈ **ಮಗ** ಬ್ರಾಹ್ಮಣರು ಭಾರತಕ್ಕೂ ಬಂದಿದ್ದರು. ಶಕದ್ವೀಪ ಬ್ರಾಹ್ಮಣರೆಂದು ಅವರನ್ನು ವರ್ಣಿಸಿದೆ. ಕ್ರಿ. ಶ. ೬ ನೇ ಶತಮಾನದ ಮಹಾ ಗಣಿತ ಶಾಸ್ತ್ರ-ಜ್ಯೋತಿಷಿ ವರಾಹಮಿಹಿರನು ಅವರ ಪ್ರಸ್ತಾಪ ಮಾಡಿದ್ದಾನೆ. ಭವಿಷ್ಯ ಪುರಾಣವೂ ಅವರ ಸುದ್ದಿ ಹೇಳುತ್ತದೆ. ನಮ್ಮಲ್ಲಿಯೂ ಮಗ ಶಬ್ದಕ್ಕೆ ಜಾದು_ಮಂತ್ರ ತಂತ್ರ ಮಾಡುವವನು ಎಂಬ ಅರ್ಥವಿದೆ. ಇವರೇ ಭಾರತಕ್ಕೆ ಬಾಬಿಲೋನಿಯನ್-ಗ್ರೀಕ್ ಖಗೋಲಶಾಸ್ತ್ರವನ್ನೂ, ಜ್ಯೋತಿಷ್ಯವನ್ನೂ ತಂದವರೆಂದು ಸುನೀತಿ ಚಟರ್ಜಿ ಹೇಳುತ್ತಾರೆ. ಬಹುಶಃ ವರಾಹಮಿಹಿರ ಮಗ ಬ್ರಾಹ್ಮಣನೇ. ಮಿಹಿರ = ಜರತುಷ್ಟ್ರ (ಪ್ರಾಚೀನ ಪಾರಸೀಕ) ಧರ್ಮದ ದೇವತೆ ಮಿತ್ರ ನಮ್ಮ ವೈದಿಕ ದೇವತೆ ಮಿತ್ರ = ಸೂರ್ಯ. ವರಾಹಮಿಹಿರನೂ ಸೂರ್ಯಾರಾಧಕ. ಭಾರತದಲ್ಲಿ ಕ್ರಿಸ್ತಪೂರ್ವದಿಂದ ಸೂರ್ಯಾರಾಧನೆ ತಲೆದೋರಿತು. ಸೂರ್ಯಾರಾಧನೆ ಜನಪ್ರಿಯವಾಗಲು ಮಗ ಬ್ರಾಹ್ಮಣರು ಕಾರಣವಾಗಿರಬಹುದು. ಸೂರ್ಯನ ಪೌರೋಹಿತ್ಯ ಅವರಿಗೆ ಮೀಸಲಿತ್ತು. ಕ್ರಿಸ್ತಶಕಾರಂಭದ ಉತ್ತರ ಭಾರತೀಯ ಸೂರ್ಯ ಮೂರ್ತಿಗಳಲ್ಲಿ ಬೇರೆ ಯಾವ ಭಾರತೀಯ ದೇವತಾ ಮೂರ್ತಿಗಳಲ್ಲಿಯೂ ಇಲ್ಲದ ವಿಶೇಷವೊಂದಿದೆ. ಅದೆಂದರೆ ಪಾದಕ್ಕೆ ಪಾಪಾಸುಗಳು. (ನಮ್ಮ ದೇವತೆಗಳೆಲ್ಲ ಬರಿಗಾಲು ಬಡವರು!) ಇದು ಸೂರ್ಯದೇವ ವಿದೇಶಗಳಿಂದ ಆಗಮಿಸಿದವನಿರಬೇಕೆಂಬ ಅನುಮಾನಕ್ಕೆ ಆಸ್ಪದ ಕೊಟ್ಟಿದೆ. ಅನಂತರ ಕಾಲದಲ್ಲಿ ಈ ಮಗ ಬ್ರಾಹ್ಮಣರು ದೇಶಿ ಬ್ರಾಹ್ಮಣರಲ್ಲಿ ಬೆರೆತುಹೋದರು. ಉತ್ತರ ಮಧ್ಯ ಭಾರತದ ವಿದ್ವತ್ (ಈಗ ರಾಜಕಾರಣದಲ್ಲಿಯೂ ಪ್ರತಿಷ್ಠಿತರು) ಬ್ರಾಹ್ಮಣ ಕುಲದವರಾದ ಮಿಶ್ರರು ಮಗ ಕುಲೀನರಿದ್ದರೂ ಇರಬಹುದು. ಕೃಷ್ಣದಾಸ ಮಿಶ್ರನೆಂಬುವನು ಮಗ ಬ್ರಾಹ್ಮಣರ ಕುಲ ಚರಿತ್ರೆ ಬರೆದಿದ್ದಾನೆ. —**ಶಾನೆಂ.**

# ಮೊಗಲರ ಕಾಲದಲ್ಲಿ ಕರ್ನಾಟಕದ ರಾಜ್ಯವ್ಯವಸ್ಥೆ

ಆದ್ಯ ರಾಮಾಚಾರ್ಯ

ಇಂದು ಭಾಷಾವಾರು ಪ್ರಾಂತಗಳನ್ನು ನಾವು ಅನುಭವಿಸುತ್ತಲಿದ್ದೇವೆ. ಆದರೆ ಮೊಗಲರ ಕಾಲದಲ್ಲಿ ಕರ್ನಾಟಕ ರಾಜ್ಯದ ವ್ಯಾಪ್ತಿ ಎಷ್ಟು? ರಾಜ್ಯದ ರಾಜಾದಾಯವು ಯಾವ ಪ್ರಮಾಣದಲ್ಲಿತ್ತು? ಅವರು ಮಾಡಿಕೊಂಡಿದ್ದ ವಿಭಾಗೀಯ ಪ್ರದೇಶಗಳಾವವು. ಇವೇ ಮೊದಲಾದ ವಿಷಯಗಳನ್ನು ತಿಳಿಸಿ ಕೊಡುವುದೇ ಈ ಲೇಖನದ ಉದ್ದೇಶ.

ಮೊಗಲರು ಇ. ಸ. ೧೬೫೩ರಲ್ಲಿ ನಮ್ಮ ನಾಡಿನಲ್ಲಿ ಕಾಲಿರಿಸಿದರು. ಔರಂಗಾಬಾದಿನಲ್ಲಿ ದಕ್ಷಿಣದ ಸುಬೇದಾರನೆಂದು ಔರಂಗಜೇಬನು ಕಾರ್ಯವನ್ನಾರಂಭಿಸಿದ: ವಿಜಾಪುರದ ಅಹಮ್ಮದ ಆದಿಲ್‌ಶಹನ ಮರಣಾ ನಂತರ ಅಂದರೆ ೧೬೫೭ರ ನಂತರ ಕಲ್ಯಾಣ ಹಾಗೂ ಬೀದರ, ೧೬೭೮ರಲ್ಲಿ ಕಲಬುರ್ಗಿ ಭಾಗಗಳನ್ನು ಔರಂಗಜೇಬನು ಸ್ವಾಧೀನ ಪಡಿಸಿಕೊಂಡ. ಮುಂದೆ ರಾಷ್ಟ್ರಕೂಟರ ರಾಜಧಾನಿಯಾಗಿದ್ದ ಮಳಖೇಡವು ೧೬೮೬ರಲ್ಲಿ ಮೊಗಲರಿಗೆ ಸೇರುವಂತಾಯಿತು. ಇದೇ ಕಾಲದಲ್ಲಿ ವಿಜಾಪುರದ ಆದಿಲ್‌ಶಾಹಿ ಮನೆತನವು ನಾಶವಾಗಿ ಹೋಯಿತು. ನಂತರ ಕೇವಲ ಒಂದೇ ವರುಷದಲ್ಲಿ ಧಾರವಾಡವು ಮೊಗಲರಿಗೆ ಸೇರುವಂತಾಯಿತು.

ವಿಜಾಪುರದ ಆದಿಲ್‌ಶಾಹಿ ಮನೆತನ ನಾಶವಾದ ನಂತರ ಒಂದು ರೀತಿಯಲ್ಲಿ ಸಮಗ್ರ ಕರ್ನಾಟಕದ ಮೇಲೆ ಮೊಗಲರ ಆಧಿಪತ್ಯವು ಸ್ಥಾಪನೆಯಾದಂತಾಯಿತು. ಅವರ ಅಧಿಕಾರವು ತಂಜಾವೂರು ಹಾಗೂ ತ್ರಿಚನಾಪಳ್ಳಿಯವರೆಗೆ ವ್ಯಾಪಿಸುವಂತಾಯಿತು. ಇ. ಸ. ೧೬೮೭ರಲ್ಲಿ ಗೋವಳಕೊಂಡ ರಾಜ್ಯವು ಹೇಳ ಹೆಸರಿಲ್ಲದಂತಾಯಿತು. ದಕ್ಷಿಣ ಭಾರತದಲ್ಲಿದ್ದ ಈ ಎರಡೂ ಶಾಹೀ ರಾಜ್ಯಗಳು ನಾಶವಾದ ನಂತರ ಔರಂಗಜೇಬನು ರಾಜ್ಯಾಡಳಿತದ ವ್ಯವಸ್ಥೆಗಾಗಿ ಅವುಗಳಲ್ಲಿ ಅನೇಕ ವಿಭಾಗಗಳನ್ನಾಗಿ ವಿಂಗಡಿಸಿದ. ಅವುಗಳನ್ನು ಅಂದು ಸೂಬಾ, ಸರ್ಕಾರ ಹಾಗೂ ಮಹಲ್‌ಗಳೆಂದು ಕರೆಯುವುದು ರೂಢಿಯಲ್ಲಿತ್ತು. ಸಣ್ಣ ತಾಲೂಕುಗಳಿದ್ದಲ್ಲಿ ಅವುಗಳನ್ನು ಅಂದು ಪೇಠಾ ಎಂದು ಕರೆಯುತ್ತಿದ್ದರು. ಸೂಬಾ ಎಂದರೆ ವಿಭಾಗೀಯ ಕೇಂದ್ರವೆಂದೆನಿಸಿಕೊಳ್ಳುತ್ತಿತ್ತು. ಸರ್ಕಾರ ಎಂದರೆ ಜಿಲ್ಲೆ; ಮಹಲ್ ಎಂದರೆ ತಾಲೂಕುಗಳೆಂದು ಗುರುತಿಸಲಾಗುತ್ತಿತ್ತು.

ಮೊಗಲರು ತಾವು ಸ್ವಾಧೀನ ಪಡಿಸಿಕೊಂಡಿದ್ದ ಪ್ರದೇಶಗಳಲ್ಲಿ ರೂಢಿಗತವಾಗಿ ಬಂದಿದ್ದ ಹೆಸರುಗಳನ್ನು ಸಹ ಬದಲಿಸಿದರು. ಅಂದಿನ ಕಾಲದಲ್ಲಿ ಅವರಿಟ್ಟುಕೊಂಡಿದ್ದ ಹೆಸರುಗಳನ್ನು ಇಂದೂ

ಬಹು ಪರಿಶ್ರಮದಿಂದ ಗುರುತಿಸಬೇಕಾದ ಪ್ರಸಂಗಗಳಿವೆ. ಫಾರ್ಸಿ ಭಾಷೆಯಲ್ಲಿದ್ದ ಈ ಹೆಸರುಗಳು ಕಾಲಾಂತರದಲ್ಲಿ ಆಂಗ್ಲ ಭಾಷಾ ಪ್ರಭಾವಕ್ಕೊಳಗಾಗಿ ಸಾಕಷ್ಟು ಪರಿವರ್ತನೆ ಹೊಂದಿವೆ. ಆದುದರಿಂದ ಆಧುನಿಕ ಲೇಖಕರಿಗೆ ಪರಿಸರದ ಪರಿಚಯವಿಲ್ಲದಿರುವುದರಿಂದ ಈ ಕುರಿತು ಅಭ್ಯಾಸ ಮಾಡಿ ಡಾಕ್ಟರೇಟ್ ಪಡೆದವರ ಗ್ರಂಥಗಳಲ್ಲಿಯೂ ಸಾಕಷ್ಟು ತಪ್ಪುಗಳಾಗಿರುವುದು ಕಂಡುಬರುತ್ತದೆ.

ಇಂದು ನಮ್ಮ ನಾಡಿನ ಗಡಿ ಭಾಗದ ಜಿಲ್ಲೆ ಎನಿಸಿಕೊಳ್ಳುತ್ತಿರುವ ಬೀದರ ಮೊಗಲರ ಕಾಲದಲ್ಲಿ 'ಮಹಮ್ಮದಾಬಾದ ಬೀದರ' ಎಂದು ಕರೆಯಿಸಿಕೊಳ್ಳುತ್ತಿತ್ತು. ಬೀದರನ್ನು ಕೈವಶ ಮಾಡಿಕೊಳ್ಳುವ ಪೂರ್ವದಲ್ಲಿ ಆ ಭಾಗಕ್ಕೆ ನಾಂದೇಡ ಕೇಂದ್ರ ಸ್ಥಳವಾಗಿತ್ತು. ಈಗ ಅದು ಮಹಾರಾಷ್ಟ್ರಕ್ಕೆ ಸೇರಿ ಹೋಗಿದೆ. ಬೀದರ ಕೈವಶವಾದ ನಂತರ ಮೊಗಲರು ನಾಂದೇಡ, ಕಲ್ಯಾಣ, ಮಳಖೇಡ, ಅಕ್ಕಲಕೋಟ, ಯಾದಗಿರ ಮೊದಲಾದ ಭಾಗಗಳನ್ನೆಲ್ಲ ಕೂಡಿಸಿ ಅದನ್ನು ಬೀದರ ಸೂಬಾ ಎಂದೇ ಕರೆಯತೊಡಗಿದರು.

ವಿಜಾಪುರದ ಆದಿಲ್‌ಶಾಹಿ ರಾಜ್ಯವು ಕೈವಶವಾದ ನಂತರ ಅದರಲ್ಲಿ ಎರಡು ಭಾಗಗಳನ್ನು ಮಾಡಲಾಯಿತು. ತುಂಗಭದ್ರಾ ನದಿಯ ಉತ್ತರ ಭಾಗದ ಪ್ರದೇಶವನ್ನೆಲ್ಲ ಸೂಬಾ ವಿಜಾಪುರ ಎಂದು ಕರೆದರೆ, ತುಂಗಭದ್ರಾ ನದಿಯ ದಕ್ಷಿಣದ ಭೂ ಪ್ರದೇಶವನ್ನೆಲ್ಲ ಸೂಬಾ ವಿಜಾಪುರ ಕರ್ನಾಟಕ ಎಂದು ಕರೆಯತೊಡಗಿದರು.

ಗೋವಳಕೊಂಡದ ಕುತುಬ್ ಶಾಹೀ ರಾಜ್ಯವನ್ನು ಪಡೆದುಕೊಂಡ ನಂತರ ಅದನ್ನೂ ಎರಡು ಭಾಗಗಳಾಗಿ ವಿಂಗಡಿಸಲಾಯಿತು. ಕೃಷ್ಣಾ ನದಿಯ ಉತ್ತರ ಭಾಗವನ್ನೆಲ್ಲ ಸೂಬಾ ಗೋವಳಕೊಂಡ ಎಂದು ಕರೆದರು. ಕೃಷ್ಣಾ ನದಿಯ ದಕ್ಷಿಣ ಭಾಗದ ಭೂ- ಪ್ರದೇಶವನ್ನು ಸೂಬಾ ಗೋವಳಕೊಂಡ ಕರ್ನಾಟಕ ಎಂದು ಕರೆಯತೊಡಗಿದರು. ಸೂಬಾ ಗೋವಳಕೊಂಡ ಕರ್ನಾಟಕದ ಸೀಮೆಯಲ್ಲಿ ತಿರುಪತಿ ಹಾಗೂ ತಂಜಾವೂರು ಭಾಗದ ಪ್ರದೇಶವೆಲ್ಲ ಮಿಳಿತವಾಗಿತ್ತು. ತಿರುಚನಾಪಳ್ಳಿಯು ಸ್ಥಾನಿಕ ಪ್ರದೇಶವನ್ನು ಬಿಟ್ಟು ಗುಂಟೂರು ಚಿತ್ತೂರು ನೆಲ್ಲೂರು, ಕಡಪಾ, ಉತ್ತರ ಅರ್ಕಾಟ, ಚಂಗಲಪಟ್ಟಣ, ಗುತ್ತಿ ಹಾಗೂ ಅನಂತಪುರ ಮೊದಲಾದ ಭಾಗಗಳೆಲ್ಲ ಅಂದು ಗೋವಳಕೊಂಡ ಕರ್ನಾಟಕ ಸೂಬಾಕ್ಕೆ ಸೇರಿದ ಪ್ರದೇಶಗಳಾಗಿದ್ದವು.

ವಿಜಾಪುರದ ದಕ್ಷಿಣ ಭಾಗದ ಸೂಬಾದಲ್ಲಿ ಮೈಸೂರು, ಚಿತ್ರದುರ್ಗ, ಬಿದನೂರು, ಇವೇ ಮೊದಲಾದ ಸಂಸ್ಥಾನಗಳಿದ್ದು ಇವರೆಲ್ಲ ಮೊಗಲರ ಮಾಂಡಲಿಕ ರಾಜರೆಂದೆನಿಸಿಕೊಳ್ಳುತ್ತಿದ್ದರು. ಈ ಮಾಂಡಲಿಕರಾಜರ ಅಧೀನದಲ್ಲಿದ್ದ ಭೂಭಾಗಗಳನ್ನು ಬಿಟ್ಟಲ್ಲಿ ವಿಜಾಪುರ ದಕ್ಷಿಣಸೂಬಾ ಅಷ್ಟು ಹೇಳಿಕೊಳ್ಳುವಂಥ ವಿಶಾಲವಾದ ಭೂಪ್ರದೇಶವೆಂದೆನಿಸಿಕೊಳ್ಳುತ್ತಿರಲಿಲ್ಲ.

ಅಂದು ವಿಭಾಗೀಯ ಅಧಿಕಾರಿಗಳನ್ನು ಫೌಜದಾರ್ ಎಂದು ಕರೆಯುವ ಸಂಪ್ರದಾಯವಿತ್ತು. ಇವರಿಗೆ ಕಂದಾಯವನ್ನು ವಸೂಲಿಮಾಡುವ ಅಧಿಕಾರವನ್ನೀಯಲಾಗಿತ್ತು. ಕೆಲವು ಸಂದರ್ಭಗಳಲ್ಲಿ ವಿಜಾಪುರದ ಸುಬೇದಾರನ ಕೈಯಲ್ಲಿ ಗೋವಳಕೊಂಡದ ಸೂಬಾಧಿಕಾರವೂ ಕೊಡಲ್ಪಟ್ಟಿತೆಂಬ ಮಾತು ಇತಿಹಾಸದ ಅಭ್ಯಾಸದಿಂದ ತಿಳಿದು ಬರುವುದು. ದಾವೂದಖಾನ್ ಎಂಬ ಸರದಾರನು ಈ ಎರಡೂ ವಿಭಾಗಗಳ ಮೇಲೆ ಅಧಿಕಾರವನ್ನು ನಡೆಸುತ್ತಿದ್ದನೆಂಬ ಮಾತು ಅಂದಿನ ಕಾಲದ ಪತ್ರವ್ಯವಹಾರಗಳಿಂದ ಗೊತ್ತಾಗುತ್ತದೆ.

ಮೊಗಲರು ದಕ್ಷಿಣ ಭಾರತದಲ್ಲಿ ತಮ್ಮ ರಾಜ್ಯಾಡಳಿತವನ್ನು ಹೇಗೆ ನಡೆಸಿದರೆಂಬ ವಿಚಾರವನ್ನು ಅಭ್ಯಾಸಮಾಡಬೇಕಾಗಿದ್ದಲ್ಲಿ ಹೈದರಾಬಾದಿನ ಪುರಾತತ್ವ ಇಲಾಖೆಯಲ್ಲಿ ದೊರೆಯುವ ಕಾಗದ ಪತ್ರಗಳು ಅತ್ಯಂತ ಮಹತ್ವದ ದಾಖಲೆಗಳಾಗಿವೆ. ಇದೇ ವಿಷಯವನ್ನೆತ್ತಿಕೊಂಡು ಕೆಲವರು ಡಾಕ್ಟರೇಟ್ ಪದವಿಯನ್ನು ಪಡೆದುಕೊಂಡಿದ್ದಾರೆ.

ಬೀದರ ಸೂಬಾದಲ್ಲಿ ಅಂದು ಏಳು ಜಿಲ್ಲೆಗಳು, ಸರ್ಕಾರ ಮಹಲುಗಳಿದ್ದವು. ಬೀದರ್, ಭಾಲ್ಕಿ, ಯಲ್ಕೇಹಳ್ಳಿ (ಈಗ ಇದು ಆಂಧ್ರಕ್ಕೆ ಸೇರಿದೆ. ಹಿಂದಿನ ಕಾಲದಲ್ಲಿ ಇದನ್ನು ಜಹೀರಾಬಾದ ಎಂದು ಕರೆಯುತೊಡಗಿದ್ದರು. ನಾಮದಾಸನ

ಜೀವನ ಚರಿತ್ರೆಯನ್ನು ಬರೆದ ಆತ್ಮಾರಾಮ ಬುವಾ ಮೂಲತಃ ಕನ್ನಡಿಗರು. (ಅವರ ಸಮಾಧಿಯು ಈ ಜಹೀರಾಬಾದಿನಲ್ಲಿದೆ) ಚಿಟಗುಪ್ಪಾ, ನಾಥವಾರ, ಔರಾದ ಈ ಭಾಗಗಳು ಇಂದಿಗೂ ನವಕರ್ನಾಟಕದಲ್ಲಿಯೇ ಉಳಿದುಕೊಂಡಿವೆ.

ನಾಂದೇಡ ಜಿಲ್ಲೆಯಲ್ಲಿ ಅಂದು ೪೩ ತಾಲೂಕುಗಳಿದ್ದವು. ಅದರಲ್ಲಿಯ ಆದಿರಾಬಾದ ಹಾಗೂ ನಿಜಾಮಾಬಾದ ಇಂದು ಆಂಧ್ರದಲ್ಲಿವೆ. ಮತ್ತೆ ಕೆಲವನ್ನು ಮಹಾರಾಷ್ಟ್ರಕ್ಕೆ ಕೂಡಿಸಲಾಗಿದೆ.

ಯಾದಗಿರಿ ಇಂದು ಗುಲಬರ್ಗಾ ಜಿಲ್ಲೆಗೆ ಸೇರಿದ ತಾಲೂಕು ಸ್ಥಳವಾಗಿದೆ. ಹಿಂದೆ ಮೊಗಲರು ಇದನ್ನು ಫಿರೋಜಾಬಾದ ಎಂಬ ಹೆಸರಿನಿಂದ ಕರೆಯುತ್ತಿದ್ದರು. ಮೊಗಲರ ಕಾಗದ ಪತ್ರಗಳಲ್ಲಿ ಫಿರೋಜಾಬಾದ ಎಂಬ ಹೆಸರೇ ಎಲ್ಲ ಕಡೆಗೆ ಕಾಣಸಿಗುತ್ತದೆ.

ರಾಷ್ಟ್ರಕೂಟರ ಕಾಲದಲ್ಲಿ ರಾಜಧಾನಿಯಾಗಿದ್ದ ಕಾಗಿಣೀತೀರದ ಮಳಖೇಡ ಕ್ಷೇತ್ರವನ್ನು ಅಂದು ಮೊಗಲರು ಮುಜಫರ್ ನಗರ್ ಎಂದು ಕರೆಯುತ್ತಿದ್ದರು. ಅಂದು ಈ ತಾಲೂಕಿನಲ್ಲಿ ಕೇವಲ ಹದಿನಾಲ್ಕು ಹಳ್ಳಿಗಳಿದ್ದವು. ಇದರಲ್ಲಿ ಕೂತುಕೂರು ಎಂಬ ಹೆಸರಿದೆ. ಅದು ಬಹುಶಃ ಆತಕೂರು ಆಗಿದ್ದಿರಬಹುದೆನಿಸುತ್ತದೆ. ಕಲಕಿ ಎಂದು ಕಾಣಬರುವ ಊರು ಕಾಳಗಿಯಾಗಿರಬಹುದೆಂದೆನಿಸುತ್ತದೆ. ಅಂದಿನ ಕಾಲದಲ್ಲಿ ಚಿಂಚೋಳಿತಾಲೂಕಿನಲ್ಲಿ ೯೨ ಹಳ್ಳಿಗಳು ಸಮಾವೇಶವಾಗಿದ್ದುದು ತಿಳಿದುಬರುವದು.

ಸರ್ಕಾರ ಅಕ್ಕಲಕೋಟದ ಬಹುಭಾಗವನ್ನೆಲ್ಲ ಇಂದು ಮಹಾರಾಷ್ಟ್ರಕ್ಕೆ ಸೇರಿಸಲಾಗಿದೆ, ಆದರೂ ಹಿರೇಮಣ್ಣೂರು, ಹಿಪ್ಪರಗಾ, ಉಡಚಣ ಈ ಹಳ್ಳಿಗಳು ಮಾತ್ರ ಇಂದಿನ ಗುಲಬುರ್ಗಾ ಜಿಲ್ಲೆಯಲ್ಲಿ ಉಳಿದುಕೊಂಡಿವೆ.

ಸರ್ಕಾರ ಕಲ್ಯಾಣಿ (ಇಂದಿನ ಕಲ್ಯಾಣ ತಾಲೂಕು) ಅಂದು ಈ ಭಾಗಕ್ಕೆ ೫೧ ಹಳ್ಳಿಗಳು ಸೇರಿಕೊಂಡಿದ್ದವು. ಬಹುಭಾಗ ಇಂದಿಗೂ ಕರ್ನಾಟಕದಲ್ಲಿ ಉಳಿದಿದೆ.

ಸೂಬಾ ವಿಜಾಪುರ– ಇದರಲ್ಲಿ ಅಂದು ಹದಿನೆಂಟು ಜಿಲ್ಲೆಗಳು ೨೪ ಮಹಲುಗಳು ಇದ್ದವು. ಇಂದಿನ ವಿಜಾಪುರನಗರವನ್ನು ಅಂದು ಮೊಗಲರು ದಾರೂಜಫರ್ ಎಂಬ ಹೆಸರಿನಿಂದ ಕರೆಯುತ್ತಿದ್ದರು. ಜಫರ್ ಎಂದರೆ ವಿಜಯ ಎಂದು ಅರ್ಥ.

ಉತ್ತರ ಹಾಗೂ ದಕ್ಷಿಣ ಈ ಎರಡು ಭಾಗಗಳಲ್ಲಿ ಹದಿನೆಂಟು ಸರ್ಕಾರಗಳಿದ್ದವು. ಒಟ್ಟು ೨೫೧ ಮಹಲುಗಳಿದ್ದವು ಅಂದಿನ ವಿಜಾಪುರ ಸರ್ಕಾರದಲ್ಲಿ ೭೫೯ ಹಳ್ಳಿಗಳಿದ್ದು ವಿಜಾಪುರ ಹವೇಲಿ ಎಂಬುದು ೩೭ ಹಳ್ಳಿಗಳಿಂದ ಕೂಡಿದುದಾಗಿತ್ತು. ಅದರಲ್ಲಿಯ ಕೆಲವು ಹಳ್ಳಿಗಳನ್ನು ಇಲ್ಲಿ ಕೊಡಬಹುದಾಗಿದೆ.

ಆಲಮೇಲ, ಹಳ್ಳಿ, ಅಂಕಲಗಿ, ಬಿದರಿ, ತಾಂಬೆ, ಜತ್ರಿ, ಬರಡೋಲ, ಬಳ್ಳೊಳ್ಳಿ, ಚಾಂದಕವಟೆ, ಶಿರೋಳ, ಕೊಕಟನೂರು, ಕರಜಗಿ, ಕೊಲ್ಹಾರ, ಕೋರವಾರ, ಹೊರ್ತಿ, ಹುನಗುಂದ, ಮಮದಾಪುರ, ಚಿಮ್ಮಲಗಿ, ಇವೇ ಮೊದಲಾದ ಸ್ಥಳಗಳು ಅಂದು ಮಹಲ್ ಎಂಬ ಹೆಸರಿನಿಂದ ಗುರುತಿಸಲ್ಪಡುತ್ತಿದ್ದವು. ಈ ಮಹಲುಗಳ ಆಡಳಿತಕ್ಕೆ



"ಬರೀ ಗುಡಿಸಲುಗಳ ನಡುವೆ ಅಂತಸ್ತಿನ ಮನೆ ಕಟ್ಟಿಸಿದ್ದು ಒಳ್ಳೆಯದೇ ಆಯ್ತು. ಊರೆಲ್ಲ ಮುಳುಗಿದರೂ ನಿಮ್ಮ ಮನೆ ನೆಲೆ ಸಿಕ್ಕಿತು!"

ಸಂಬಂಧ ಪಟ್ಟ ಹಳ್ಳಿಗಳ ಹೆಸರುಗಳೂ ಇವೆ.

ಇಂದಿನ ಗಡಿಭಾಗದ ಬೆಳಗಾಂವಿ ಅಂದು ಮೊಗಲರ ಕಾಲದಲ್ಲಿ ಆಜಂನಗರ ಎಂಬ ಹೆಸರಿನಿಂದ ಕರೆಸಿಕೊಳ್ಳುತ್ತಿತ್ತು. ಇದರಲ್ಲಿ ಅಂದು ಹನ್ನೆರಡು ತಾಲೂಕುಗಳಿದ್ದವು. ಸಂಪಗಾಂ, ಕೇಸೂರು, ಪಾರ್ಶ್ವಾಪುರ, ಮುಕ್ಕೇರಿ ಮೊದಲಾದವುಗಳ ಹೆಸರುಗಳು ಕಾಣಸಿಗುತ್ತವೆ.

ಆದವಾನಿಯನ್ನು ಅಂದು ಇಂತಿಯಾಜಗಡ ಎಂಬ ಹೆಸರಿನಿಂದ ಕರೆಯುತ್ತಿದ್ದರು. ಕಲೀಮುನಗರ ಎಂದು ಕರೆಸಿಕೊಳ್ಳುತ್ತಿದ್ದ ಪಟ್ಟಣವೇ ಮುಂದೆ ಕರ್ನೂಲು ಎಂದಾಯಿತು. ಕುರುಗೋಡು, ಬಳ್ಳಾರಿ, ತೆಕ್ಕಲಕೋಟೆ ಮೊದಲಾದ ಭಾಗಗಳನ್ನು ಅಂದು ಇದಕ್ಕೆ ಸೇರಿಸಲಾಗಿತ್ತು. ಅಂದು ಕರ್ನಾಟಕ ಸೂಬಾದಲ್ಲಿದ್ದ ಆದವಾನಿ ಕರ್ನೂಲುಗಳನ್ನು ಇಂದು ಆಂಧ್ರಕ್ಕೆ ಸೇರಿಸಲಾಗಿದೆ.

ಇಂದು ಕರ್ನಾಟಕ ರಾಜ್ಯದ ಜಿಲ್ಲಾ ಕೇಂದ್ರವಾದ ಗುಲಬುರ್ಗಾ ನಗರವನ್ನು ಅಂದು ಮೊಗಲರು ಅಹಸನಾಬಾದ ಎಂದು ಕರೆಯುತ್ತಿದ್ದರು. ಅಂದು ಈ ಜಿಲ್ಲೆಯಲ್ಲಿ ೨೮೮ ಹಳ್ಳಿಗಳಿದ್ದವು.

ಸರ್ಕಾರ ರಾಯಬಾಗದಲ್ಲಿದ್ದ ಕೊಲ್ಲಾಪುರದ ಬಹುಭಾಗವನ್ನು ಇಂದು ನಾವು ಮಹಾರಾಷ್ಟ್ರದಲ್ಲಿ ಕಾಣುವಂತಾಗಿರುವುದು. ಮೀರಜ ಎಂಬ ಸ್ಥಳಕ್ಕೆ ಮೊಗಲರು ಮುರ್ತಜಾಬಾದ ಎಂಬ ಹೆಸರಿನಿಂದ ಕರೆಯುತ್ತಿದ್ದರು. ಇದರಲ್ಲಿ ಆರು ತಾಲೂಕುಗಳಿದ್ದವು. ಈಗ ಅವುಗಳೆಲ್ಲ ಮಹಾರಾಷ್ಟ್ರದಲ್ಲಿ ಸೇರಿ ಹೋಗಿವೆ.

ಸರ್ಕಾರ ದಕ್ಷಿಣ ಕರ್ನಾಟಕದಲ್ಲಿ ೩೩ ತಾಲೂಕು ಅಥವಾ ಮಹಲುಗಳಿದ್ದವು. ಇಂದಿನ ಕರಾವಳಿಯ ಮಂಗಳೂರನ್ನು ಅಂದು ಇಸ್ಲಾಂಪುರ ಎಂಬ ಹೆಸರಿನಿಂದ ಕರೆಯುತ್ತಿದ್ದರು.

ಮೈಸೂರಿನ ರಾಜ ಒಡೆಯರಿಗೆ ಸೇರಿದ ಭೂಭಾಗವನ್ನು ಗುರುತಿಸುವಾಗ ಅವುಗಳ ಮುಂದೆ "ಜ" ಎಂಬ ಹೆಸರನ್ನು ಹಾಕಲಾಗಿದೆ. ಅಂದರೆ ಆ ಭಾಗವು ಜಗದೇವರಾಯನಿಗೆ ಸೇರಿದುದು ಎಂದು ವಾಚಕರು ಅರ್ಥ ಮಾಡಿಕೊಳ್ಳಬಹುದಾಗಿದೆ. ಇಲ್ಲಿ ಕಾಣಸಿಗುವ ಅಶ್ನಿಕುಂದಿ ಎಂಬ ಹೆಸರನ್ನು ನೋಡಿದಾಗ ಅದು ಅರಿಗುಂದಿಯಾಗಿರ-

ಬಹುದೆ? ಎನಿಸುತ್ತದೆ. ಆಘನಿ ಎಂಬ ಹೆಸರು ಅವನಿ ಎಂದಾಗಿರಬಹುದು. ನಾಗಲೂರು, ದೊಡ್ಡ ಬಳ್ಳಾಪುರ, ಚಿಕ್ಕಬಳ್ಳಾಪುರ, ಪಾಲಂ ಕೋಟೆ (ಇದು ಪಾಲಮ ನೇರ ಆಗಿರಬಹುದು) ತಿನಕೂರು ಎಂಬುದು ಇಂದಿನ ತುಮಕೂರು ಆಗಿರಬಹುದು. ಧರ್ಮಾವರ, ದೇವನಪಲ್ಲಿ ಇದು ದೇವನಹಳ್ಳಿಯಾಗಿರಬಹುದು. ಬೇಲೂರು ಶಿರಾ ಸುಲ್ತಾನ ಪುರ ಎಂದು ಕರೆಯುತ್ತಿದ್ದ ನಗರವೇ ಇಂದು ಬಸವಾಪಟ್ಟಣ ಎಂದಾಗಿರುವದು. ಸೊಂದೂರಿ ಇದು ಇಂದಿನ ಸೊಂಡೂರಾಗಿರಬಹುದು. ಮೇಲಕಲ್ ಇದು ಇಂದಿನ ಮೇಲುಕೋಟೆಯಾಗಿರಬಹುದು. ಹೀಗೆ ಮೈಸೂರಿನ ಭಾಗದಲ್ಲಿ ಅನೇಕ ಹೆಸರುಗಳನ್ನು ಸ್ಥಳ ಪರಿಚಯಗಳಿಂದ ಅಂದಾಜು ಮಾಡಬೇಕಾಗುತ್ತದೆ. ಯಾಕೆಂದರೆ, ಮೊಗಲರು ಅನಂತರದಲ್ಲಿ ಬಂದ ಮರಾಠರ ಆಡಳಿತವು ಮುಗಿದು ಆಂಗ್ಲರ ಕಾಲದಲ್ಲಿ ಪುನಃ ಆ ಹಿಂದಿನ ಹೆಸರುಗಳು ಬದಲಾದಂತೆ ತೋರುತ್ತದೆ. ಚಿತ್ರದುರ್ಗವನ್ನು ಅವರು ಚಿಟಲ್ ದುರ್ಗ ಎಂದು ಕರೆದರೆ ತುಮಕೂರನ್ನು ಟುಮಕೂರು ಎಂದು ಅಪಭ್ರಂಶ ಗೊಳಿಸಿದರೆಂಬುದನ್ನು ಇಂದಿನ ವಾಚಕರು ಬಲ್ಲವರಾಗಿದ್ದಾರೆ.

ಸರ್ಕಾರ ಬಂಕಾಪುರದಲ್ಲಿ ೧೬ ತಾಲೂಕುಗಳು ಇದ್ದವು. ಮೊಗಲರು ಕರೆಯುತ್ತಿದ್ದ ರತನಪಲ್ಲಿ ಇಂದಿನ ರಾಣೆಬೆನ್ನೂರಾಗಿರಬಹುದು. ಇದರಲ್ಲಿ ಧಾರವಾಡ, ನಸೀರಾಬಾದ, ಹರಿಹರ, ಲಕ್ಷ್ಮೇಶ್ವರ, ಪಾನಾಪುರ ಇದು ಇಂದಿನ ಭಾಗಾಪುರವಾಗಿರಬಹುದು. ಹೀಗೆ ಇನ್ನೂ ಅನೇಕ ಹೆಸರುಗಳನ್ನು ನಾವು ಗುರುತಿಸಬೇಕಾಗುತ್ತದೆ.

ಸರ್ಕಾರ ನೂರಗಲ್ (ಇದು ಇಂದಿನ ತೊರಗಲ್ಲ ಆಗಿದ್ದಿರಬಹುದು) ಇದರಲ್ಲಿ ಹದಿನಾರು ತಾಲೂಕುಗಳಿದ್ದವು. ಬಾಗಲಕೋಟ (ಬಾಗಲಕೋಟೆ) ಮುಚಕನೂರು, ಲೋಕಾಪುರ, ಗಲಗಲಿ ಅಂದು ಈ ಗಲಗಲಿಯನ್ನು ಕುತುಬಾಬಾದ ಎಂದು ಕರೆಯುತ್ತಿದ್ದರು. ನರಗುಂದ, ನವಲಗುಂದ ಈ ಭಾಗಗಳಿದ್ದವು. ನರಗುಂದವನ್ನು ಕೆಲವು ಕಾಲ ಬಹದ್ದೂರ ನಗರ ಎಂದು ಕರೆಯುದಾಗಿ ತಿಳಿದು ಬರುವುದು.

ಸರ್ಕಾರ ಗಾಜೀಪುರ ಇದರಲ್ಲಿ ೨೩ ತಾಲೂಕು

ಗಳಿದ್ದವು. ಈಗ ಈ ಎಲ್ಲ ಭಾಗವನ್ನು ಆಂಧ್ರಕ್ಕೆ ಸೇರಿಸಲಾಗಿದೆ.

ಸರ್ಕಾರ ಮುದಗಲ್ ಇದರಲ್ಲಿ ಹದಿಮೂರು ತಾಲೂಕುಗಳಿದ್ದವು. ಮುದಗಲ್ಲು, ಕೊಪ್ಪಳ, ಸಿಂಧನೂರು, ಯಲಬುರ್ಗಾ, ರುಬುಕೊಂಡಾ ಇದು ಇಂದಿನ ಉರವಕೊಂಡವಾಗಬಹುದು; ಗಂಗಾವತಿ, ಕುಕನೂರು, ಈ ಎಲ್ಲ ಭಾಗಗಳು ಇಂದು ಕರ್ನಾಟಕದಲ್ಲಿಯೇ ಉಳಿದುಕೊಂಡಿವೆ.

ಸರ್ಕಾರ ಸಗರ—ಅಂದು ಇದನ್ನು ನಸರತಾಬಾದ ಎಂದು ಕರೆಯುತ್ತಿದ್ದರು. ಶಹಪೂರ ತಾಲೂಕಿಗೆ ಬಹು ಸಮೀಪದ ಸ್ಥಳವಾಗಿದೆ. ಇದರಲ್ಲಿ ಶಹಪೂರ, ನಸರತಾಬಾದ, ಹವೇಲಿ, ದೇವದುರ್ಗ, ಕೆಂಭಾವಿ, ತಾಳೀಕೋಟೆ ಮೊದಲಾದ ಭೂ ಪ್ರದೇಶವು ಮಿಳಿತವಾಗಿತ್ತು.

ಸರ್ಕಾರ ನಜೀಶಾಹದುರ್ಗ ಇದು ಇಂದಿನ ಪನ್ಹಾಳಗಡವಾಗಿದೆ. ಆದರೆ ಇಂದು ಅದರ ಎಲ್ಲ ಭಾಗಗಳೂ ಮಹಾರಾಷ್ಟ್ರಕ್ಕೆ ಸೇರಿಹೋಗಿವೆ.

ಸರ್ಕಾರ ಫಿರೋಜನಗರ ಅಂದರೆ ಇಂದಿನ ರಾಯಚೂರು. ಅಂದು ಇದರಲ್ಲಿ ಒಂಬತ್ತು ತಾಲೂಕುಗಳಿದ್ದವು. ಕೋಟೀಹಾಳ, ಕವತಾಳ. ಐಜಿ., ಜಾಲಿಹಾಳ, ಮಸಕಲ್ (ಮಸ್ಕಿ), ಈ ಭಾಗಗಳ ಸಮಾವೇಶವಾಗುತ್ತಿತ್ತು.

ಅಂದಿನ ರಾಜಾದಾಯದ ವಿವರ:

೧. ಅಂದು ವಿಜಾಪುರ ಸೂಬಾದ ರಾಜ್ಯಾದಾಯವು ಏಳು ಕೋಟಿ ಎಂಬತ್ನಾಲ್ಕು ಲಕ್ಷ ಅರವತ್ತೊಂದು ಸಾವಿರದಾ ಎಂಟುನೂರಾ ಹದಿನೇಳು ರೂಪಾಯಿ ಒಂದು ಆಣೆ ಆರು ಪೈದಷ್ಟಿತ್ತೆಂದು ತಿಳಿದು ಬರುವದು.

ಮಾಂಡಲೀಕ ರಾಜರು ಹಾಗೂ ಪಾಳೇಗಾರರಿಂದ ಖಂಡಣೀ ರೂಪದಲ್ಲಿ ಬರುತ್ತಿದ್ದ ಆದಾಯದ ವಿವರವು ಈ ರೀತಿಯಾಗಿದೆ.

ಅಂದು ಮೈಸೂರಿನವರಿಂದ ವಸೂಲಿಯಾಗುತ್ತಿದ್ದ ಖಂಡಣೀಯ ವಿವರವು ಹೀಗಿದೆ.

ಮೂವತ್ತೊಂದು ಲಕ್ಷ ಮೂತ್ತಾರು ಸಾವಿರ, ರೂಪಾಯಿಗಳೆಂದು ತಿಳಿದು ಬರುವದು. (ಈ ಕಾಲವನ್ನು ೧೭೨೦ ರ ವರೆಗೆ ಎಂದು ಹೇಳಲಾಗಿದೆ.)

## ಮಾಂಡಲಿಕ ರಾಜರಿಗೆ ಮೊಗಲರಿತ್ತ ಅಧಿಕಾರದ ವಿವರ

೧. ಮೊಗಲ ಸರಕಾರದಿಂದ ಅವರಿಗೆ ಭೂಮಿಯನ್ನು ಮೋಜಣಿ ಮಾಡುವ ಅಧಿಕಾರವಿರಲಿಲ್ಲ.

೨. ಸಂಸ್ಥಾನಿಕರ ಆದಾಯದ ಮೇಲೆ ಪ್ರತಿಬಂಧಕವಿರಲಿಲ್ಲ.

## ಮಾಂಡಲಿಕ ರಾಜರ ಅಂದಿನ ಆದಾಯ

ಮೈಸೂರು ರಾಜ್ಯದ ಅಂದಿನ ಆದಾಯವು ಅಂದರೆ ೧೭೬೦ ರಲ್ಲಿ ಹದಿನೇಳು ಲಕ್ಷದಷ್ಟಿತ್ತು. ಆಗ ಅವರು ಎರಡುಲಕ್ಷ ಖಂಡಣೀಯನ್ನು ಕೊಡಬೇಕಾಗುತ್ತಿತ್ತು.

ಸ್ವಾದಿಯು ಆದಾಯ ೧೭೩೭ರಲ್ಲಿ ಮೂವತ್ತು ಲಕ್ಷದಷ್ಟಿತ್ತು. ಅವರು ಎರಡು ಲಕ್ಷ ಮೂವತ್ತಾರು ಸಾವಿರದಷ್ಟು ಖಂಡಣೀ ಹಣವನ್ನು ಕೊಡುತ್ತಿದ್ದರು.

ಸಗರ ಹಾಗೂ ಸುರಪುರ ೧೭೩೪ ರಲ್ಲಿ ನಾಲ್ವತ್ತೆರಡುಸಾವಿರದಾ ಐನೂರು ರೂಪಾಯಿ ಖಂಡಣೀ ಹಣವನ್ನು ಕೊಡುತ್ತಿದ್ದರು.

ಕೆಳದಿ (ಕಾದರ) ೧೭೩೮ ರಲ್ಲಿ ಇದರ ಆದಾಯವು ಐವತ್ತು ಲಕ್ಷದಷ್ಟಿತ್ತು. ಐದು ಲಕ್ಷ ಖಂಡಣೀಯನ್ನೀಯಬೇಕಾಗುತ್ತಿತ್ತು.

ಗೋವಳಕೊಂಡ ಕರ್ನಾಟಕ ಹಾಗೂ ಇತರ ಭಾಗಗಳ ಉತ್ಪನ್ನ ಹಾಗೂ ಖಂಡಣಿಯ ಆದಾಯವನ್ನು ಸ್ಪಷ್ಟವಾದಿಂದ ಕೊಡಲು ಸಾಧ್ಯವಾಗಿಲ್ಲ.

ಇದು ಮೊಗಲರ ಕಾಲದ ರಾಜ್ಯಾಡಳಿತದ ಒಂದು ವಿಹಂಗಮ ನೋಟವಾಗಿರುವುದು. ❀

# ರತ್ನಗಳು - ನವರತ್ನಗಳು

**ಅ. ವೆಂ. ಗುಂಡೂರಾಯ**

ರತ್ನಗಳ ಬಗ್ಗೆ ತಿಳಿಸುವ ಶಾಸ್ತ್ರವೇ ರತ್ನಶಾಸ್ತ್ರ. ಹಿಂದೆ ನಮ್ಮ ದೇಶವು ರತ್ನಗಳ ಉತ್ಪತ್ತಿಯಲ್ಲಿ ಅಗ್ರಸ್ಥಾನ ಪಡೆದಿತ್ತು. ಆಗ ನಮ್ಮಲ್ಲಿ ಸಿಕ್ಕುತ್ತಿದ್ದ ಅಮೂಲ್ಯ ರತ್ನಗಳನ್ನು ವಿದೇಶಗಳಿಗೆ ರಫ್ತು ಮಾಡಿ ನಮ್ಮ ದೇಶದ ಸಂಪತ್ತನ್ನು ಹೆಚ್ಚಿಸಿದ್ದರು. ಈಗ ಇದಕ್ಕೆ ಪ್ರೋತ್ಸಾಹವಿಲ್ಲದೆ ನಮ್ಮ ದೇಶದ ಭೂಗರ್ಭದಲ್ಲಿ ಅಡಗಿರುವ ರತ್ನ ಸಂಪತ್ತನ್ನು ಉಪಯೋಗಿಸಿಕೊಳ್ಳದೆ ಅಪಾರ ನಷ್ಟಕ್ಕೊಳಗಾಗುವಂತಾಗಿದೆ. ಸರಕಾರದಿಂದಾಗಲಿ ಅಥವಾ ಸಾಹುಕಾರರಿಂದಾಗಲಿ ಪ್ರೋತ್ಸಾಹ ದೊರೆತಲ್ಲಿ ಈಗಲೂ ಸಹ ಮರೆತುಹೋಗಿರುವ ನಮ್ಮ ಹಿಂದಿನ ರತ್ನದ ಗಣಿಗಳನ್ನು ಪತ್ತೆ ಮಾಡಬಹುದು. ಇದು ನಮ್ಮಲ್ಲಿ ದೊರಕುವ ಅನೇಕ ಪುರಾತನ ರತ್ನಶಾಸ್ತ್ರ ಗ್ರಂಥಗಳ ಆಧಾರದಿಂದ ಸಾಧ್ಯ. ಇಂಥ ಅಮೂಲ್ಯ ಅಪರೂಪ ಗ್ರಂಥಗಳನ್ನು ನಾನು ನಮ್ಮ ದೇಶದ ನಾನಾ ಕಡೆಗಳಲ್ಲಿರುವ ಗ್ರಂಥಾಲಯಗಳಲ್ಲಿ ಹುಡುಕಿ ಓದಿದ್ದೇನೆ. ಇದರ ಬಗ್ಗೆ ಆಸಕ್ತಿ ಇರುವವರು ನಾನು ಓದಿರುವ ರತ್ನಶಾಸ್ತ್ರಕ್ಕೆ ಸಂಬಂಧಪಟ್ಟ ಕೆಳಗೆ ಸೂಚಿಸಿರುವ ಗ್ರಂಥಗಳನ್ನು ಓದಿದಲ್ಲಿ ನಮ್ಮ ಹಿಂದಿನವರು ಈ ಶಾಸ್ತ್ರದಲ್ಲಿ ಎಷ್ಟು ಪರಿಣಿತರಾಗಿದ್ದರೆಂಬುದು ಖಚಿತವಾಗುತ್ತದೆ. ರತ್ನಗಳ ಬಗ್ಗೆ ವಿವರಿಸುವ ನಮ್ಮ ಪುರಾತನ ಗ್ರಂಥಗಳ ಪಟ್ಟಿ ಹೀಗಿದೆ:

ಬುದ್ಧ ಭಟ್ಟನ ರತ್ನಪರೀಕ್ಷಾ, ನಾರಾಯಣನ ನವರತ್ನ ಪರೀಕ್ಷಾ, ಚಂಡೇಶ್ವರನ ರತ್ನ ದೀಪಿಕಾ, ಭೋಜರಾಜನ ಯುಕ್ತಿ ಕಲ್ಪತರು, ಸೋಮನ ಮಾನಸೋಲ್ಲಾಸ, ಕೌಟಿಲ್ಯನ ಅರ್ಥಶಾಸ್ತ್ರ, ವಾತ್ಸ್ಯಾಯನನ ಕಾಮಶಾಸ್ತ್ರ, ವರಾಹಮಿಹಿರನ ಬೃಹತ್ ಸಂಹಿತಾ, ಅಗಸ್ತ್ಯರ ಅಗಸ್ತಿಮತಂ, ಅಗ್ನಿಪುರಾಣ, ಗರುಡ ಪುರಾಣ, ವಿಷ್ಣು ಧರ್ಮೋತ್ತರ ಪುರಾಣ, ಹಾಲಾಸ್ಯ ಮಹಾತ್ಮ್ಯ, ಶುಕ್ರ ನೀರೆ, ಶಿಲಪ್ಪದಿಗಾರಮ್.

ಈ ಮೇಲಿನ ಗ್ರಂಥಗಳಲ್ಲಿ ರತ್ನಗಳನ್ನು ನವರತ್ನಗಳು – ಉಪರತ್ನಗಳು ಎಂಬುದಾಗಿ ವಿಂಗಡಿಸಲಾಗಿದೆ.

**ನವರತ್ನಗಳು :** ವಜ್ರ (Diamond), ಮಾಣಿಕ್ಯ (Ruby), ನೀಲ (Sapphire), ಪಚ್ಚೆ (Emerald), ವೈಢೂರ್ಯ (Cat's eye), ಪುಷ್ಯರಾಗ (Topaz), ಗೋಮೇಧ (Zircon), ಮುತ್ತು (Pearl) ಹಾಗೂ ಹವಳ (Coral).

# ಕೆಲ ವಿವರಗಳು

೧. ಹಿಂದೆ ಗೋಲ್ಕೊಂಡ ಪ್ರಾಂತಕ್ಕೆ ಸೇರಿದ್ದ ಕ್ರಿಸ್ತ ಪೂರ್ವ ಎಂಟನೆಯ ಶತಮಾನದಷ್ಟು ಹಿಂದೆಯೆ ವಜ್ರಗಳನ್ನು ಗಣಿಗಳಿಂದ ಅಗೆದು ತೆಗೆಯಲಾಗುತ್ತಿತ್ತು.

೨. ಸ್ವಾತಂತ್ರ್ಯಾನಂತರ ನಾಮಶೇಷರಾದ ಮಹಾರಾಜರುಗಳಿಗೆ ವಜ್ರವೈಢೂರ್ಯಗಳ ಸಲಹೆಗಾರರಾಗಿದ್ದ ಕೆಲವರು, ಆ ವಿಷಯದಲ್ಲಿದ್ದ ತಮ್ಮ ಅಗಾಧ ಪರಿಣತಿಯನ್ನುಪಯೋಗಿಸಿಕೊಂಡು ವಜ್ರವ್ಯವಹಾರದಲ್ಲೆ ಮುಂದುವರಿದರು. ೧೯೬೦ ರ ಹೊತ್ತಿಗೆ ಇತಿಹಾಸದಲ್ಲಿ ನಮಗೊಂದು ಕುತೂಹಲಕರ ಸಂಗತಿ ಎದ್ದು ತೋರುತ್ತದೆ. ವಜ್ರಗಳನ್ನು ಕೊಳ್ಳುವವರು ಕೈ ಬೆರಳೆಣಿಕೆಯಷ್ಟು ಜನ ಮಾತ್ರ. ಆದರೂ ಆ ಕುಶಲರು ತಮ್ಮ ಅನುಭವ- ಸ್ಥಾನಬಲದಿಂದ, ಹೊಸಬಗೆಯಲ್ಲಿ ವಜ್ರದ ವ್ಯವಹಾರ ಪ್ರಾರಂಭಿಸಿ ಕೇವಲ ೧೫ ವರ್ಷಗಳಲ್ಲಿ ಉಳಿದವರು ಅಚ್ಚರಿ ಅಸೂಯೆಗಳಿಂದ ತಮ್ಮತ್ತ ನೋಡುವಂತೆ ಮಾಡಿದರು.

೩. ರೋಮನ್ ಇತಿಹಾಸ ತಜ್ಞ ಪ್ಲಿನಿ, ತನ್ನ ದೇಶದ ಜನರಲ್ಲಿರುವ ಐಷಾರಾಮಿ ವ್ಯಾಮೋಹದ ದುರ್ದೆಶೆಯನ್ನು ಮುಂಗಾಣುತ್ತ, ವಜ್ರದ ಉದ್ಯಮವನ್ನು ಕುರಿತು ಬರೆಯುತ್ತಾನೆ. ಆತನ ಪ್ರಕಾರ ವಿಷಕಾರಿ ಸರ್ಪಗಳು ನೈಸರ್ಗಿಕ ವಜ್ರಗಳನ್ನು ಕಾಯುತ್ತಿದ್ದವು. ರಹಸ್ಯ ನಿಧಿಯನ್ನು ಸರ್ಪಗಳು ಅಜ್ಜಗಾವಲು ಕಾಯುತ್ತಿವೆಯೆಂಬ ಭಾರತೀಯರ ನಂಬಿಕೆ. ಪ್ಲೀನಿಯ ಇತಿಹಾಸದ ಮೇಲೆ ಪ್ರಭಾವ ಬೀರಿರಬೇಕು.

೪. ವಜ್ರವನ್ನು ನೀರಿನಲ್ಲಿ ಮುಳುಗಿಸಿದಾಗ ಅದು ಕಾಣದಿದ್ದರೆ ಶ್ರೇಷ್ಠದರ್ಜೆಯ ವಜ್ರವೆಂದೂ ಪ್ರತ್ಯೇಕವಾಗಿ ಕಾಣುತ್ತಿದ್ದರೆ ದ್ವಿತೀಯ ದರ್ಜೆಯ ವಜ್ರವೆಂದೂ ಪರಿಗಣಿಸುವುದಿದೆ. ಸೈಬೀರಿಯದ ಮಿರ್ನಿ ಎಂಬ ಪಟ್ಟಣದ ಬಳಿ ವಜ್ರಗಳು ಎಷ್ಟು ಹೇರಳವಾಗಿ ದೊರೆಯುತ್ತವೆಯೆಂದರೆ ಅಲ್ಲಿ ನೆಲವನ್ನು ಸ್ವಲ್ಪ ಕೆದರಿದರೂ ಸಾಕು, ವಜ್ರ ಸಿಗುತ್ತದೆ ಎಂಬ ಭಾವನೆ ಪ್ರಚಲಿತವಾಗಿದೆ. ಈ ಪ್ರದೇಶದಲ್ಲೆ ೧೯೮೦ ರಲ್ಲಿ ೩೨೪ ಕ್ಯಾರಟ್ಟಿನ ವಜ್ರ ಅನಾಯಸವಾಗಿ ಸಿಕ್ಕಿತ್ತು.

೫. ಸುಳ್ಳು ಎನಿಸಬಹುದಾದರೂ, ಭಾರತದಲ್ಲಿ ವಜ್ರಗಳನ್ನು ಕ್ಯಾರೆಟ್ಟಿನ ೧/೧೫೦ ದಷ್ಟು ಕತ್ತರಿಸಲಾಗುತ್ತದೆ. (೧ ಕ್ಯಾರೆಟ್ = ೧ ಗ್ರಾಮಿನ ೧/೫ ಭಾಗ) ಇಂಥ ಸಣ್ಣ ಪ್ರಮಾಣದ ವಜ್ರಗಳನ್ನೂ ಮತ್ತೆ ಸಂಸ್ಕರಿಸಿ ಮತ್ತೆ ಕತ್ತರಿಸಲಾಗುತ್ತದೆ. ಸೂಕ್ಷ್ಮದರ್ಶಕದಲ್ಲಿ ನೋಡಬಹುದಾದ ಈ ವಜ್ರಗಳು ವಜ್ರದ ಧೂಳಿನಂತೆಕಾಣುತ್ತವೆ. ವಜ್ರ ವ್ಯಾಪಾರಿಯ ಕಚೇರಿಯ ನೆಲಹಾಸು ಇಂಥ ಅಮೌಲ್ಯ 'ಧೂಳು' ಮಯವಾಗಿರುತ್ತದೆ.

೬. ಜಗತ್ತಿನಲ್ಲೇ ಭಾರತ ವಜ್ರಗಳನ್ನು ಸಂಸ್ಕರಿಸುವ ದೇಶಗಳಲ್ಲಿ ಮೊದಲ ಸ್ಥಾನದಲ್ಲಿದೆ. ವಜ್ರಗಳನ್ನು ಅತಿ ಚಿಕ್ಕದಾಗಿ ಕತ್ತರಿಸುವುದನ್ನು ಭಾರತ ಜಗತ್ತಿಗೆ ಬಿಟ್ಟುಕೊಟ್ಟಿರದಿದ್ದರೆ ವಜ್ರವ್ಯವಹಾರ ಇಷ್ಟೊತ್ತಿಗೆ ತಲೆಕೆಳಗಾಗಿರುತ್ತಿತ್ತೇನೊ. ಅಲ್ಲದೆ ಸಂಸ್ಕರಣಕ್ಕೆಂದು ಭಾರತಕ್ಕೆ ವಜ್ರಗಳ ಆಮದಾಗದಿರುತ್ತಿದ್ದರೆ ಇಲ್ಲಿ ನಾಲ್ಕುಲಕ್ಷ ಜನ ಕೆಲಸಗಾರರು ನಿರುದ್ಯೋಗಿಗಳಾಗಬೇಕಿತ್ತು.

ಉಪರತ್ನಗಳು: ಪರಿಭದ್ರ, (Aquamarine ಜಲನೀಲ (Cordearite), ಪುಲಕ (Garhet), ಸೌಗಂಧಿಕ (Spinel), ಪೀಲು (Jade), ಸೂರ್ಯಕಾಂತ (Sun Stone), ಚಂದ್ರಕಾಂತ (Moon Stone), ಸ್ಫಟಿಕ (Quartz crystal), ವಿಮಲಕ (Opal), ಪಲಂಕ (Onyx), ಪಿತೋನ (Jasper), ಭೃತಮಣಿ (Peridot). ರಾಜಾವರ್ತ (Lapis Lazuli).

ರತ್ನಗಳ ಗುಣದೋಷಗಳನ್ನು ವಿವರವಾಗಿ ವಿವರಿಸಲಾಗಿದೆ. ಕಾಕ ಪಾದ (ಕಾಗೆಯ ಕಾಲು), ಶ್ಯಾಮ ಬಿಂದು (ಕಪ್ಪು ಚುಕ್ಕೆ), ರಕ್ತ ಬಿಂದು (ಕೆಂಪು ಚುಕ್ಕೆ) ದೋಷಗಳಿಂದ ಕೂಡಿರುವ ವಜ್ರದ ಆಭರಣಗಳನ್ನು ಧರಿಸಿದರೆ ಅಂಥವರು ಅನೇಕ ತೊಂದರೆಗಳಿಗೆ ಸಿಕ್ಕಿ ಮನೆ ಮಠ ಕಳೆದು ಕೊಳ್ಳುತ್ತಾರೆ. ಆದ್ದರಿಂದ ಇಂಥ ದೋಷ ಯುಕ್ತವಾದ ವಜ್ರಗಳನ್ನು ಯಾರೂ ಉಪ-ಯೋಗಿಸಬಾರದೆಂದು ಪುರಾತನ ರತ್ನ-ಶಾಸ್ತ್ರಜ್ಞರು ಎಚ್ಚರಿಕೆ ನೀಡಿದ್ದಾರೆ.

ನವರತ್ನಗಳಿಗೂ-ನವಗ್ರಹಗಳಿಗೂ ಇರುವ ಸಂಬಂಧವನ್ನು ಹೀಗೆ ಹೇಳಲಾಗಿದೆ. ಸೂರ್ಯ = ಮಾಣಿಕ್ಯ; ಚಂದ್ರ = ಮುತ್ತು; ಮಂಗಳ = ಹವಳ; ಬುಧ = ಪಚ್ಚೆ; ಗುರು = ಪುಷ್ಯರಾಗ; ಶುಕ್ರ = ವಜ್ರ; ಶನಿ = ನೀಲ; ರಾಹು = ಗೋಮೇಧ; ಕೇತು = ವೈಢೂರ್ಯ.

ಪ್ರತಿಯೊಬ್ಬನೂ ತನ್ನ ಹುಟ್ಟಿದ ದಿನಾಂಕ ದಿಂದ ತನಗೆ ಸಂಬಂಧಪಟ್ಟ ಅದೃಷ್ಟ ರತ್ನವನ್ನು ತಿಳಿದು ಧರಿಸಿದರೆ ಭಾಗ್ಯವಂತನಾಗುವನೆಂದು ಕರಾರುವಾಕ್ಕಾಗಿ ಹೇಳಲಾಗಿದೆ. ಶನಿಗೆ ಸಂಬಂಧ ಪಟ್ಟ ನೀಲಿ ರತ್ನವನ್ನೂ ಮತ್ತು ರಾಹು-ಕೇತುಗಳಿಗೆ ಸಂಬಂಧಪಟ್ಟ ಗೋಮೇಧ-ವೈಢೂರ್ಯ ರತ್ನಗಳನ್ನೂ ಜ್ಯೋತಿಷ್ಯರ ಸಲಹೆ ತೆಗೆದುಕೊಂಡೇ ಉಪಯೋಗಿಸಬೇಕು. ಇಲ್ಲದಿದ್ದಲ್ಲಿ ಇವುಗಳನ್ನು ಧರಿಸಿದರೆ ತೊಂದರೆಗಳಿಗೆ ಸಿಕ್ಕಿಕೊಳ್ಳಬೇಕಾಗುವುದು ಎಂಬ ಭಾವನೆ ಸಾರ್ವತ್ರಿಕವಾಗಿದೆ.

ಕೆಲವು ಬಗೆಯ ರತ್ನಗಳನ್ನು ಧರಿಸುವುದ ರಿಂದಲೊ ಅಥವಾ ಇವುಗಳ ಭಸ್ಮಗಳನ್ನು ಔಷಧಿಯಂತೆ ಸೇವಿಸುವುದರಿಂದಲೊ ಅಸಾಧ್ಯ ಕಾಯಿಲೆಗಳೂ ಗುಣವಾಗುವುವೆಂದು ತಿಳಿಯಲಾಗಿದೆ. ವಿಕಿರಣಶೀಲ ಖನಿಜಗಳಂತೆ (Radio active minerals) ಕಣ್ಣಿಗೆ ಕಾಣದ ಕಿರಣಗಳನ್ನು ಕೆಲವು ರತ್ನಗಳು ಹೊರಸೂಸು-ವುದರಿಂದ ಅಸಾಧ್ಯ ರೋಗಗಳು ವಾಸಿಯಾಗಬಹುದೆಂದು ನಂಬಬಹುದು.

ಕೆಲವು ರತ್ನಗಳನ್ನು ಧರಿಸುವುದರಿಂದ ಸಂತಾನವಿಲ್ಲದವರು ಸಂತಾನ ಪಡೆಯುವುದೂ ಹೆರಿಗೆಯ ಕಾಲದಲ್ಲಿ ಸುಲಭವಾಗಿ ಹೆರಿಗೆಯಾಗುವುದು ಸಾಧ್ಯವೆಂದೂ ಭಾವಿಸಲಾಗಿದೆ. ❀

### ದೇವರತ್ನಗಳು

ಎಲ್ಲಾ ಚಿಂತೆಗಳನ್ನು ದೂರ ಮಾಡುವ **ಚಿಂತಾಮಣಿ**
ಸರ್ವ ರೋಗಗಳನ್ನೂ ವಾಸಿ ಮಾಡುವ **ಆರೋಗ್ಯಮಣಿ**
ಹಸಿವೆ ಬಾಯಾರಿಕೆಗಳನ್ನು ಹೋಗ-ಲಾಡಿಸುವ **ಅಮೃತಮಣಿ**
ಸದಾ ಪರಿಮಳವನ್ನು ಬೀರುವ **ಗಂಧಮಣಿ**
ನಿರಂತರವೂ ದೀಪದಂತೆ ಪ್ರಕಾಶ ನೀಡುವ **ಜ್ಯೋತಿಮಣಿ**
ಬೇಕೆಂದಾಗ ಮಳೆ ಸುರಿಸುವ **ನಾಗಮಣಿ**
ಮುಟ್ಟಿದ್ದೆಲ್ಲಾ ಲೋಹಗಳನ್ನು ಚಿನ್ನವಾಗಿಸುವ **ಸ್ಪರ್ಶಮಣಿ**
ಸತ್ತವರನ್ನು ಬದುಕಿಸುವ **ಸಂಜೀವಮಣಿ**
ಸಮಸ್ತ ಭಾಗ್ಯಗಳನ್ನೂ ಕೊಡುವ **ಕೌಸ್ತುಭಮಣಿ**

# ಪುನರಾವರ್ತಿತ ಏಕಕಗಳ ಅವಿಭಾಜ್ಯತೆ

**ಜಿ. ಟಿ. ನಾರಾಯಣರಾವ್**

### ಅವಿಭಾಜ್ಯ ಎಂದರೇನು?

ಪ್ರಸಕ್ತ ಲೇಖನದಲ್ಲಿ ನಮ್ಮ ವ್ಯವಹಾರ ಧನ ಪೂರ್ಣಾಂಕಗಳ ಜೊತೆ ಮಾತ್ರ ಇರುವುದು. ಇವು ೧ರಿಂದ ತೊಡಗಿ ಪ್ರತಿ ಸಲವೂ ೧ ಹೆಚ್ಚುತ್ತ ಮೇರೆ ಇರದೆ ಏರುವ ಅನಂತ ಹಂತಗಳು: ೧, ೨, ೩, ೪, ೫,... ಇಡೀ ವಿಶ್ವಪೂರ್ತಿ ಜಾಗ ಒದಗಿಸಿದರೂ ಈ ಶ್ರೇಣಿಯ ಎಲ್ಲ ಪದಗಳನ್ನೂ ಬರೆದು ಮುಗಿಸಲು ಸಾಧ್ಯವಾಗದ ತ್ರಿವಿಕ್ರಮಾವತಾರ ಸನ್ನಿವೇಶ!

ಧನ ಪೂರ್ಣಾಂಕ ಶ್ರೇಣಿಯಲ್ಲಿ ಎರಡು ವರ್ಗಗಳನ್ನು ಗುರುತಿಸಬಹುದು: ಸ್ವತಃ ಅದೇ ಸಂಖ್ಯೆಯಿಂದ ಮತ್ತು ೧ರಿಂದ ಭಾಗವಾಗುವ ಸಂಖ್ಯೆಗಳು, ಇತರ ಸಂಖ್ಯೆ ಅಥವಾ ಸಂಖ್ಯೆಗಳಿಂದ ಭಾಗವಾಗುವ ಸಂಖ್ಯೆಗಳು.

೧, ೨, ೩, ೫, ೭, ೧೧, ೧೩, ೧೭, ೧೯, ೨೩, ೨೯ ಮುಂತಾದವು ಮೊದಲನೆಯ ವರ್ಗಕ್ಕೂ ೪, ೬, ೮, ೯, ೧೦, ೧೨, ೧೪, ೧೫, ೧೬, ೧೮, ೨೦, ೨೧, ೨೨ ಮುಂತಾದವು ಎರಡನೆಯ ವರ್ಗಕ್ಕೂ ಸೇರುತ್ತವೆ. ಉದಾಹರಣೆಗೆ ೨೯. ಇದು ಸ್ವತಃ ೨೯ ಮತ್ತು ೧ರ ಹೊರತು ಬೇರೆ ಯಾವ ಸಂಖ್ಯೆಯಿಂದಲೂ ಭಾಗವಾಗುವುದಿಲ್ಲ. ಹೀಗಲ್ಲದೇ ೧೮ ಆದರೋ ೨, ೩, ೬, ೯ ಎಂಬ ಇತರ ಸಂಖ್ಯೆಗಳಿಂದ ಭಾಗವಾಗುತ್ತದೆ.

ಮೊದಲನೆಯ ವರ್ಗದ ಸಂಖ್ಯೆಗಳು ಅಪವರ್ತನರಹಿತವಾದವು. ಇವನ್ನು ಎರಡು ಅಥವಾ ಹೆಚ್ಚು ಸಂಖ್ಯೆಗಳ ಗುಣಲಬ್ಧಗಳಾಗಿ ವಿಭಜಿಸಲು ಸಾಧ್ಯವಾಗುವುದಿಲ್ಲ. ಎಂದೇ ಇವು ಅವಿಭಾಜ್ಯಗಳು. ಉದಾಹರಣೆಗೆ ೩೧, ೩೭, ೪೧, ೪೩ ಮುಂತಾದ ಸಂಖ್ಯೆಗಳನ್ನು ಅಪವರ್ತಿಸಲು (ಅಥವಾ ವಿಭಜಿಸಲು) ಪ್ರಯತ್ನಿಸಿ ನೋಡಿ. ಯಾವುದೊಂದೂ ತನ್ನ ವ್ಯಕ್ತಿತ್ವ ಅಥವಾ ಸಂಖ್ಯಾತ್ವವನ್ನು ಬಿಟ್ಟುಕೊಡುವುದಿಲ್ಲ—ಹೈಡ್ರೊಜನ್, ಸೀಸ, ಕಬ್ಬಿಣ ಮುಂತಾದ ರಾಸಾಯನಿಕ ಧಾತುಗಳಂತೆ ಒಂದು ಬಗೆಯ ಶುದ್ಧ ಸಂಖ್ಯೆಗಳಿವು.

ಎರಡನೆಯ ವರ್ಗದ ಸಂಖ್ಯೆಗಳು ಅಪವರ್ತನಸಹಿತವಾದವು. ಇವನ್ನು ಎರಡು ಅಥವಾ ಹೆಚ್ಚು ಸಂಖ್ಯೆಗಳ ಗುಣಲಬ್ಧಗಳಾಗಿ ವಿಭಜಿಸಲು ಸಾಧ್ಯವಿದೆ. ಎಂದೇ ಇವು ವಿಭಾಜ್ಯಗಳು. ಉದಾಹರಣೆಗೆ ೨೪, ೨೫, ೨೬, ೨೭, ೨೮, ಮುಂತಾದ ಸಂಖ್ಯೆಗಳನ್ನು ಅಪವರ್ತಿಸಬಹುದು: ೨೪ = ೨ × ೨ × ೨ × ೩; ೨೫ = ೫ × ೫; ೨೬ = ೨ × ೧೩; ೨೭ = ೩ × ೩ × ೩; ೨೮ = ೨ × ೨ × ೭. ಪ್ರತಿಯೊಂದೂ ತನ್ನ ವ್ಯಕ್ತಿತ್ವ ಅಥವಾ ಸಂಖ್ಯಾತ್ವವನ್ನು ಬಿಟ್ಟುಕೊಡುವಂಥ ಪರಿಸ್ಥಿತಿ—ವಾಯು, ನೀರು, ಉಪ್ಪು ಮುಂತಾದ ರಾಸಾಯನಿಕ ಸಂಯುಕ್ತಗಳಂತೆ. ಒಂದು ಬಗೆಯ ಸಂಕರ ಸಂಖ್ಯೆಗಳಿವು.

### ಪ್ರರೂಪ ಶೋಧನೆ

ಮಾನವ ಮನಸ್ಸಿನ ಒಂದು ವಿಶಿಷ್ಟಗುಣವೆಂದರೆ ಯಾದೃಚ್ಛಿಕತೆಯಲ್ಲಿ (randomness) ಪ್ರರೂಪ ಶೋಧನೆ. ಆಕಾಶದಲ್ಲಿ ನಕ್ಷತ್ರಗಳು ಯಾದೃಚ್ಛಿಕವಾಗಿ (ಯದ್ವಾತದ್ವಾ ಅಥವಾ ಬೇಕಾಬಿಟ್ಟಿ) ಹರಡಿಹೋಗಿವೆ. ಆದರೆ ಮಾನವ ಮನಸ್ಸು ದೀರ್ಘಕಾಲ ವೀಕ್ಷಣಾನಂತರ ಈ ಯಾದೃಚ್ಛಿಕತೆಯಲ್ಲಿ ಹಲವಾರು ಪ್ರರೂಪಗಳನ್ನು (patterns) ಗುರುತಿಸಿದೆ. ಮೇಷ ವೃಷಭಾದಿ ದ್ವಾದಶ ರಾಶಿಗಳೂ ಇತರ ೭೬ ನಕ್ಷತ್ರ ಪುಂಜಗಳೂ ಹೀಗೆ ಗುರುತಿಸಲಾದ ನಕ್ಷತ್ರ ಪ್ರರೂಪಗಳು. ಸಂಗೀತ- ನೃತ್ಯ, ದರೋಡೆ-

ಪೋರರ ಲೂಟಿ ವಿಧಾನ, ಪುಢಾರಿಯ ರಾಜಕೀಯ ಭಾಷಣ, ರೇಲ್ವೆ ಬಂಡಿಯ ಓಡು-ಪಾಟ ಒಂದೊಂದರಲ್ಲಿಯೂ ಬುದ್ಧಿವಂತ ಮನಸ್ಸು ಪ್ರರೂಪವನ್ನು ಗುರುತಿಸಬಲ್ಲದು. ಪ್ರರೂಪ ಶೋಧನೆಗೆ ವಿಜ್ಞಾನದ ಮುನ್ನಡೆಯಲ್ಲಿ ಮಹತ್ತ್ವದ ಸ್ಥಾನವಿದೆ.

೭, ೧೨, ೧೭, ೨೨, ೨೭,... ಇಲ್ಲಿಯ ಪ್ರರೂಪವೇನು? ಯಾವುದೇ ಪದಕ್ಕೆ ೫ ಕೂಡಿಸಿದಾಗ ಮುಂದಿನ ಪದ ದೊರೆಯುತ್ತದೆ.

೧, ೧, ೨, ೩, ೫, ೮, ೧೩,... ಇಲ್ಲಿಯ ಪ್ರರೂಪವೇನು? ಯಾವುದೇ ಒಂದು ಜೊತೆ ಆಸನ್ನ ಪದಗಳ ಮೊತ್ತ ಮುಂದಿನ ಪದ.

೧, ೪, ೧೩, ೪೦, ೧೨೧... ಇಲ್ಲಿಯ ಪ್ರರೂಪ ವೇನು? ಯಾವುದೇ ಪದವನ್ನು ೩ರಿಂದ ಗುಣಿಸಿ ೧ನ್ನು ಕೂಡಿಸಿದಾಗ ಮುಂದಿನ ಪದ ದೊರೆಯುತ್ತದೆ.

ಪ್ರರೂಪಶೋಧನೆಯ ಕಾರಣವಾಗಿ ಶ್ರೇಣಿಯ ವ್ಯಕ್ತಿತ್ವ ನಿರ್ಧಾರಣೆ ಸುಲಭವಾಗುತ್ತದೆ. ಅದರಲ್ಲಿ ಬರುವ ೧೯,೨೭೬ನೆಯ ಪದ ಯಾವುದು? ೩೯೧ನೆಯ ಪದದಿಂದ ತೊಡಗಿ ೫೭೬ನೆಯ ಪದದ ವರೆಗಿನ ಪದಗಳ ಮೊತ್ತ ಎಷ್ಟು? ಇಂಥ ಪ್ರಶ್ನೆಗಳಿಗೆ ಯಾಂತ್ರಿಕವಾಗಿ ಉತ್ತರ ಅರಸುವುದು ಸಾಧ್ಯವಾಗುತ್ತದೆ.

ಅಂದಮೇಲೆ ಅವಿಭಾಜ್ಯಗಳ ವಿತರಣೆಯಲ್ಲಿ ಏನಾದರೂ ಪ್ರರೂಪ ಗುರುತಿಸಬಹುದೇ? ೧ರಿಂದ ೧೧೩ರ ವರೆಗಿನ ಅವಿಭಾಜ್ಯಗಳಿವು (ಗಣಿತದ ತಾಂತ್ರಿಕ ಕಾರಣಕ್ಕಾಗಿ ೧ನ್ನು ಈ ಶ್ರೇಣಿಗೆ ಸೇರಿಸುವುದಿಲ್ಲ):

೨, ೩, ೫, ೭, ೧೧, ೧೩, ೧೭, ೧೯, ೨೩, ೨೯, ೩೧, ೩೭, ೪೧, ೪೩, ೪೭, ೫೩, ೫೯, ೬೧, ೬೭, ೭೧, ೭೩, ೭೯, ೮೩, ೮೯, ೯೭, ೧೦೧, ೧೦೩, ೧೦೭, ೧೦೯, ೧೧೩.

ಪ್ರರೂಪರಾಹಿತ್ಯವೇ ಇಲ್ಲಿಯ ಲಕ್ಷಣ. ಅವಿಭಾಜ್ಯಗಳ ಶ್ರೇಣಿಯನ್ನು ಗಣಕಕ್ಕೆ ಊಡಿ ಪರೀಕ್ಷಿಸಲಾಗಿದೆ. ಅಲ್ಲಿಯೂ ಫಲಿತಾಂಶ ಇದೇ. ಯಾದೃಚ್ಛಿಕತೆಯ ಗೊಂಡಾರಣ್ಯದಲ್ಲಿ ಪ್ರರೂಪಾನ್ವೇಷಣೆ ವ್ಯರ್ಥ ಸಾಹಸ. ಹೀಗಾಗಿ "೨ರಿಂದ ತೊಡಗಿದಂತೆ ೫೦೬೭ನೆಯ ಅವಿಭಾಜ್ಯ ಯಾವುದು?" "೪೬೭ನೆಯ ಅವಿಭಾಜ್ಯದಿಂದ ತೊಡಗಿ ೮೯೧ನೆಯ ಅವಿಭಾಜ್ಯದ ವರೆಗಿನ ಅವಿಭಾಜ್ಯಗಳ ಮೊತ್ತ ಎಷ್ಟು?" ಇಂಥ ಪ್ರಶ್ನೆಗಳಿಗೆ ಉತ್ತರ ಪಡೆಯಲು ಸೂತ್ರಗಳು ಇಲ್ಲ.

ಇಲ್ಲಿ ಅನುಸರಿಸಬಹುದಾದ ಕ್ರಮವಿದು: ೨ ರಿಂದ ಆರಂಭಿಸಿ ಸಂಖ್ಯಾಶ್ರೇಣಿಯನ್ನು ನಮ್ಮ ಸಹನೆ ಮತ್ತು ಸಾಮರ್ಥ್ಯದ ಮಿತಿವರೆಗೆ ಬರೆಯುತ್ತೇವೆ. ಸೆಕೆಂಡಿಗೆ ಒಂದು ಸಂಖ್ಯೆಯಂತೆ ಬರೆಯುತ್ತೇವೆಂದು ಭಾವಿಸೋಣ. ಹತ್ತು ವರ್ಷಾನಂತರ ನಾವಿನ್ನೂ ೩೧೫,೫೬೭,೩೬೦ರ ಗಡಿ ದಾಟಿರುವುದಿಲ್ಲ! ಸಂಖ್ಯಾಶ್ರೇಣಿಯ ಅನಂತತೆಯ ಜೊತೆ ಹೋಲಿಸುವಾಗ ಈ ಅಂತರ ಒಂದು ಹುಳುವಿನ ಕ್ಷಣ ಕಾಲದ ಸರಿತದಷ್ಟೂ ಇರುವುದಿಲ್ಲ. ಹೀಗೆ ಯಥಾಶಕ್ತಿ ಸಂಖ್ಯಾಶ್ರೇಣಿಯ ಹನುಮಂತಲಾಂಗೂಲವನ್ನು ಕ್ರಮಿಸಿದ ತರುವಾಯ ಅದರಲ್ಲಿ ಆರಂಭದಿಂದ, ಅಂದರೆ ೨ರಿಂದ ತೊಡಗಿ, ಮೊದಲು ಎದುರಾಗುವ ಪ್ರತಿಯೊಂದು ಅವಿಭಾಜ್ಯಕ್ಕೂ ವಿನಾಯಿತಿ ನೀಡಿ ಅದರ ಎಲ್ಲ ಗುಣಿತಗಳನ್ನೂ ಹೊಡೆದುಹಾಕುತ್ತೇವೆ. ಈ ಪರಶುರಾಮಕುಠಾರಹನನಾನಂತರ ಉಳಿಯುವ ಗಟ್ಟಿ ಕಾಳುಗಳೆಲ್ಲವೂ ಅವಿಭಾಜ್ಯಗಳಾಗಿರುತ್ತವೆ—ಅಂದರೆ ೨, ೩, ೫, ೭, ೧೧, ೧೩, ೧೭ ಮುಂತಾದ ಮೊದಲು ಎದುರಾಗುವ ಅವಿಭಾಜ್ಯಗಳಿಗೆ ವಿನಾಯತಿ; ಇವುಗಳ ಸರ್ವ ಗುಣಿತಗಳಿಗೂ ಮರಣ ದಂಡನೆ!

೨ರಿಂದ ೧೦೦ರ ವರೆಗೆ ೨೫ ಅವಿಭಾಜ್ಯಗಳಿವೆ.

೨ರಿಂದ ೧,೦೦೦ದ ವರೆಗೆ ೧೬೮ ಅವಿಭಾಜ್ಯಗಳಿವೆ.

೨ರಿಂದ ೫೦,೦೦೦ದ ವರೆಗೆ ೯,೫೯೨ ಅವಿಭಾಜ್ಯಗಳಿವೆ.

೨ರಿಂದ ೨೦೦,೦೦೦ದ ವರೆಗೆ ೧೭,೯೮೪ ಅವಿಭಾಜ್ಯಗಳಿವೆ.

೨ರಿಂದ ೧,೦೦೦,೦೦೦,೦೦೦ (ಒಂದು ಬಿಲಿಯನ್ ಅಥವಾ ನೂರು ಕೋಟಿ) ವರೆಗೆ ೫೦೮,೪೭೫,೫೩೪ ಅವಿಭಾಜ್ಯಗಳಿವೆ.

ಈ ವಿತರಣೆಯಲ್ಲಿ ಕೂಡ ಯಾವುದೇ ಪ್ರರೂಪ ಪ್ರಕಟವಾಗುವುದಿಲ್ಲ. ಹೀಗೆ ಅವಿಭಾಜ್ಯಗಳ ಯಾದಿ ತಯಾರಿಸಿ ಇದರಲ್ಲಿ ೫೦೬೭ನೆಯ ಅವಿ

ಭಾಜ್ಯವನ್ನು ಗುರುತಿಸಿ ಇಡಬೇಕು. ಪುನಃ ಈ ಯಾದಿಯಿಂದ ೪೩೭ನೆಯ ಅವಿಭಾಜ್ಯದಿಂದ ೪೯೧ನೆಯ ಅವಿಭಾಜ್ಯದ ವರೆಗಿನ ಪದಗಳನ್ನು ಪ್ರತ್ಯೇಕಿಸಿ ಇವುಗಳ ಮೊತ್ತವನ್ನು ಮಾಮೂಲಿ ಕೂಡಿಸುವ ವಿಧಾನದಿಂದ ಪಡೆಯಬೇಕು.

ಇಂಥ ಸಮಸ್ಯೆಗಳಿಗೆ ಒಂದು ಮಿತಿಯಿಂದ ಆಚೆಗೆ ಸಾಕ್ಷಾತ್ ಗಣಕವೂ ಉತ್ತರ ನೀಡಲಾರದು. ಏಕೆಂದರೆ ಸಂಖ್ಯಾಪ್ರಪಂಚದ ಬೃಹತ್ತಿನ ಮುಂದೆ ವಿಶ್ವದ ಅಸೀಮ ವ್ಯಾಪ್ತಿಯೂ ಹೋಲಿಕೆ ಅಲ್ಲ. ಅಂದ ಮೇಲೆ ಚೊತ್ತೆ ಗಣಕದ ಪಾಡೇನು! ಸಂಖ್ಯಾ ಮಾರುತಿಯನ್ನು ಬಂಧಿಸ ಬಲ್ಲ ಬ್ರಹ್ಮಾಸ್ತ್ರವಿಲ್ಲ.

## ಅವಿಭಾಜ್ಯ ಪರೀಕ್ಷಣೆ

ದತ್ತ ಸಂಖ್ಯೆ ಅವಿಭಾಜ್ಯವೇ ಅಲ್ಲವೇ? ಈ ಪ್ರಶ್ನೆಗಳಿಗೆ ಉತ್ತರ ಪಡೆಯಲು ಒಂದು ವಿಧಾನ ವಿದೆ.

ಆ ಸಂಖ್ಯೆ ೨೫,೭೫೯ ಆಗಿರಲಿ. ಇದರ ವರ್ಗ ಮೂಲ (ಸಮೀಪದ ಉನ್ನತ ಪೂರ್ಣಾಂಕದಲ್ಲಿ) ೧೬೧. ಈ ವರ್ಗಮೂಲಕ್ಕಿಂತ ಕಿರಿದಾದ ಅವಿಭಾಜ್ಯಗಳ ಯಾದಿ ತಯಾರಿಸಬೇಕು: ೨, ೩, ೫,...೧೪೯, ೧೫೧, ೧೫೭. ಇದರ ಒಂದೊಂದು ಪದದಿಂದಲೂ ೨೫,೭೫೯ನ್ನು ಭಾಗಿಸಬೇಕು. ಪ್ರತಿ ಸಲವೂ ಶೇಷ ಉಳಿಯುತ್ತದೆ. ಆದ್ದರಿಂದ ೨೫,೭೫೯ ಒಂದು ಅವಿಭಾಜ್ಯ.

ಆ ಸಂಖ್ಯೆ ೨೬,೨೪೩ ಆಗಿರಲಿ. ಇದರ ವರ್ಗ ಮೂಲ ೧೬೨. ಇದಕ್ಕಿಂತ ಕಿರಿದಾದ ಅವಿಭಾಜ್ಯಗಳ ಯಾದಿ ತಯಾರಿಸಿ ಈ ಪ್ರತಿಯೊಂದರಿಂದಲೂ ೨೬,೨೪೩ನ್ನು ಭಾಗಿಸಿದಾಗ ದೊರೆಯುವ ಫಲ ಒಂದು ಹಂತದಲ್ಲಿ ಶೇಷರಹಿತವಾಗುತ್ತದೆ: ೭ × ೨೩ × ೧೬೩ = ೨೬,೨೪೩. ಆದ್ದರಿಂದ ೨೬,೨೪೩ ಅವಿಭಾಜ್ಯವಲ್ಲ.

ದತ್ತ ಸಂಖ್ಯೆಯ ವರ್ಗಮೂಲಕ್ಕಿಂತ ಕಿರಿದಾದ ಅವಿಭಾಜ್ಯಗಳಿಂದ ಆ ಸಂಖ್ಯೆ ಭಾಗವಾಗದಿದ್ದರೆ ಅದು ಅವಿಭಾಜ್ಯ, ಭಾಗವಾದರೆ ವಿಭಾಜ್ಯ.

ಸಂಖ್ಯೆಗಳು ಇನ್ನೂ ದೊಡ್ಡವಾದಾಗ ಪರಿಸ್ಥಿತಿ ಬಿಗಡಾಯಿಸುತ್ತದೆ. ಎಂಥ ಪ್ರಬಲ ಗಣಕ ಕೂಡ ನಿಭಾಯಿಸಲಾಗದ ಪ್ರಸಂಗ. ದತ್ತ ಸಂಖ್ಯೆ ಅವಿಭಾಜ್ಯವೇ ಅಲ್ಲವೇ ಎಂದು ನಿರ್ಧರಿಸಲು ಸುಲಭ ವಿಧಿ ಇಲ್ಲ.

ಕನಿಷ್ಠ ಅವಿಭಾಜ್ಯ ೨ ಎಂದು ಗೊತ್ತಿದೆ. ಗರಿಷ್ಠ ಅವಿಭಾಜ್ಯವಿದೆಯೇ?

ಕ್ರಿಸ್ತಪೂರ್ವ ೨-೩ ಶತಮಾನಾವಧಿಯಲ್ಲಿ ಪ್ರವರ್ಧಿಸಿದ ಗ್ರೀಕ್ ಗಣಿತವಿದ ಯೂಕ್ಲಿಡ್ ಈ ಪ್ರಶ್ನೆಗೆ ಉತ್ತರ ನೀಡಿದ್ದಾನೆ. ಅವನ ತರ್ಕಸರಣಿ ಅರಿಯಲು ಸರಳ ಉದಾಹರಣೆಯೊಂದನ್ನು ಪರಿಶೀಲಿಸೋಣ:

ಯೂಕ್ಲಿಡ್: "ನಿಮಗೆ ಗೊತ್ತಿರುವ ಗರಿಷ್ಠ ಅವಿಭಾಜ್ಯ ಯಾವುದು?"

ನೀವು: "ಅದು ೭."

ಯೂಕ್ಲಿಡ್: "೨ರಿಂದ ೭ರ ವರೆಗಿನ ಸಂಖ್ಯೆಗಳ ಗುಣಲಬ್ಧಕ್ಕೆ ೧ನ್ನು ಕೂಡಿಸಿ."

ನೀವು: "ಸರಿ, ೫೦೪೧ ದೊರೆಯುತ್ತದೆ."

ಯೂಕ್ಲಿಡ್: "೨ ರಿಂದ ೭ರ ವರೆಗಿನ ಪ್ರತಿಯೊಂದೂ ಸಂಖ್ಯೆಯಿಂದ ೫೦೪೧ನ್ನು ಭಾಗಿಸಿ."

ನೀವು: "ಪ್ರತಿ ಸಲವೂ ೧ ಶೇಷ ಉಳಿಯುತ್ತದೆ."

ಯೂಕ್ಲಿಡ್: "ಆದ್ದರಿಂದ ಒಂದೋ ೫೦೪೧ ನಿಮಗೆ ಗೊತ್ತಿರುವ ಗರಿಷ್ಠ ಅವಿಭಾಜ್ಯಕ್ಕಿಂತ ದೊಡ್ಡದಾದ ಇನ್ನೊಂದು ಅವಿಭಾಜ್ಯ, ಇಲ್ಲವೇ ಅದು ೭ಕ್ಕಿಂತ ದೊಡ್ಡದಾದ ಅವಿಭಾಜ್ಯಗಳು ಅಪವರ್ತನಗಳಾಗಿರುವ ಒಂದು ವಿಭಾಜ್ಯ."

ವಾಸ್ತವವಾಗಿ ೫೦೪೧=೭೧ × ೭೧. ಇಲ್ಲಿ ೭೧ ಎಂಬುದು ೭ಕ್ಕಿಂತ ದೊಡ್ಡದಾದ ಅವಿಭಾಜ್ಯ.

೭ರ ಬದಲು ೧೧ನ್ನು ಆಯ್ದಿದ್ದರೆ ಈ ಫಲಿತಾಂಶ ೩೯,೯೧೬,೮೦೧ ಆಗಿರುತ್ತಿತ್ತು, ೧೩ನ್ನು ಆಯ್ದಿದ್ದರೆ ೬,೨೨೭,೦೨೦,೮೦೧ ಆಗಿರುತ್ತಿತ್ತು. ಇವು ಸ್ವತಃ ಅವಿಭಾಜ್ಯಗಳು ಅಥವಾ ೧೧ ಇಲ್ಲವೇ ೧೩ಕ್ಕಿಂತ ದೊಡ್ಡದಾದ ಅವಿಭಾಜ್ಯಗಳು ಅಪವರ್ತನಗಳಾಗಿರುವ ವಿಭಾಜ್ಯಗಳು ಎಂಬುದನ್ನು ಸಾಧಿಸುವ ಪರಮ ಸಂತೋಷ ನಿಮ್ಮದಾಗಲಿ! (ಸರಕು ತೀರಿದ ಉಪಾಧ್ಯಾಯ ತರಗತಿಯಲ್ಲಿ ಅನನುಕೂಲ ಸನ್ನಿವೇಶ ಎದುರಾದಾಗ ಆತ್ಮ ಪ್ರತ್ಯಯ

ಕಾಪಾಡಿಕೊಳ್ಳಲು ಅನುಸರಿಸುವ ಒಂದು ಮಾಮೂಲೀ ವರಸೆ ಇದಲ್ಲ ಎಂದು ಭರವಸೆ-ನೀಡುತ್ತೇನೆ!)

ಮೇಲಿನ ವಾದವೈಖರಿಯನ್ನು ಇದೇ ಧಾಟಿಯಲ್ಲಿ ಸಾರ್ವತ್ರೀಕರಿಸಿ ಸರ್ವ ಸಂದರ್ಭಗಳಿಗೂ ಒಪ್ಪುವ ಗಣಿತ ಸಾಧನೆಯನ್ನು ಯೂಕ್ಲಿಡ್ ನೀಡಿದ್ದಾನೆ. ಇದರ ತಾರ್ಕಿಕ ಸಾರಳ್ಯಕ್ಕೂ ಬೌದ್ಧಿಕ ಸೌಂದರ್ಯಕ್ಕೂ ಮಾರುಹೋದ ಜಿ. ಎಚ್. ಹಾರ್ಡಿ (೧೮೭೭-೧೯೪೭, ಪ್ರಸಕ್ತ ಶತಮಾನದ ಮಹಾಗಣಿತವಿದರ ಪೈಕಿ ಒಬ್ಬರು, ಶ್ರೀನಿವಾಸ ರಾಮಾನುಜನ್ ಅವರನ್ನು ಪ್ರಪಂಚಕ್ಕೆ ಪರಿಚಯಿಸಿದ ಮಹಾನುಭಾವರು) ಉದ್ಗರಿಸಿರುವ ಮೆಚ್ಚುಮಾತಿದು: "ಭಾವನೆಯಲ್ಲಿಯೂ ಸಾಧನೆಯಲ್ಲಿಯೂ ಅತ್ಯಂತ ಸರಳವಾಗಿದ್ದು ಬೌದ್ಧಿಕ ಸೌಂದರ್ಯದಲ್ಲಿ ಮಹೋನ್ನತ ದರ್ಜೆಯ ಸಿದ್ಧಿ ಈ ಸಾಧನೆ."

೧೯೮೫ರ ತನಕ ತಿಳಿದಿದ್ದ ಗರಿಷ್ಠ ಅವಿಭಾಜ್ಯ ೧೩೨೦೪೯ − ೧ ಇದರ ಅರ್ಥ ೨ನ್ನು ಅದರಿಂದಲೇ ೧೩೨,೦೪೯ ಸಲ ಗುಣಿಸಿ ದೊರೆತ ಲಬ್ಧದಿಂದ ೧ನ್ನು ಕಳೆಯಬೇಕು ಎಂದು. ಈ ಬೃಹತ್ಸಂಖ್ಯೆಯಲ್ಲಿ ೪೦,೦೦೦ಕ್ಕೂ ಜಾಸ್ತಿ ಅಂಕೆಗಳಿದ್ದು ಇದನ್ನು ಮುದ್ರಿಸಲು 'ಕಸ್ತೂರಿ' ಸಂಚಿಕೆಯ ೨೯ ಪುಟಗಳೇ ಬೇಕಾಗುತ್ತವೆ. ಹೀಗಿದ್ದರೂ ಇದು ಅವಿಭಾಜ್ಯಗಳ ಅನಂತ ಗಮನದಲ್ಲಿ ಒಂದು ಕೇವಲ ಹೆಜ್ಜೆ ಕೂಡ ಅಲ್ಲ!

## ಪುನರಾವರ್ತಿತ ಏಕಕ ಎಂದರೇನು?

ಏಕಕ ಎಂದರೆ ೧. ಈ ಅಂಕೆಯಿಂದ ಮಾತ್ರ ರೂಪಿತವಾದ ಸಂಖ್ಯೆಗೆ ಪುನರಾವರ್ತಿತ ಏಕಕ ಎಂದು ಹೆಸರು. ಉದಾಹರಣೆಗೆ ೧, ೧೧, ೧೧೧, ೧೧೧೧, ೧೧೧೧೧ ಇತ್ಯಾದಿ. ಇವನ್ನು ಅನುಕ್ರಮವಾಗಿ ಪು-೧, ಪು-೨, ಪು-೩, ಪು-೪, ಪು-೫ ಎಂದು ಮುಂತಾಗಿ ಬರೆಯೋಣ. ಆದ್ದರಿಂದ ಪು-೧೩೨,೦೪೯ ಎಂದರೆ ೧೩೨,೦೪೯ ಸಲ ೧ನ್ನು ಒತ್ತೊತ್ತಿಗೆ ಬರೆದಾಗ ದೊರೆಯುವ ಸಂಖ್ಯೆ ಎಂದರ್ಥ. ಈ ನೂತನ ಸಂಕೇತೀಕರಣದ ಉಪಯುಕ್ತತೆ ಸ್ಪಷ್ಟ: ಅತಿ ಬೃಹತ್ತಾದ ಪುನರಾವರ್ತಿತ ಏಕಕವನ್ನು ಅತಿ ಹ್ರಸ್ವವಾಗಿ ನಿರೂಪಿಸುವ ಸೌಕರ್ಯ,

ಪುನರಾವರ್ತಿತ ಏಕಕಗಳ ಶ್ರೇಣಿಯಲ್ಲಿ ಅವಿಭಾಜ್ಯಗಳನ್ನು ಅರಸುವುದು ಗಣಿತವಿದರ ಆಸಕ್ತಿ. ಈ ಮುಂದಿನ ಶೋಧನೆಗಳನ್ನು ನೀವೇ ಕೈಗೊಳ್ಳಬಲ್ಲಿರಿ:

ಪು-೧ = ೧. ಇದಕ್ಕೆ ಅವಿಭಾಜ್ಯಗಳ ಶ್ರೇಣಿಯಿಂದ ವಿನಾಯಿತಿ ನೀಡಲಾಗಿದೆಯೆಂದು ಹಿಂದೆಯೇ ಹೇಳಿದೆ.

ಪು-೨ = ೧೧. ಇದೊಂದು ಅವಿಭಾಜ್ಯ.

ಪು-೩ = ೧೧೧ = ೩ × ೩೭. ಇದು ಅವಿಭಾಜ್ಯವಲ್ಲ.

ಪು-೪ = ೧೧೧೧ = ೧೦೧ × ೧೧. ಇದು ಅವಿಭಾಜ್ಯವಲ್ಲ.

ಪು-೫ = ೧೧೧೧೧ = ೪೧ × ೨೭೧. ಇದು ಅವಿಭಾಜ್ಯವಲ್ಲ.

ಪು-೬ = ೧೧೧೧೧೧ = ೧೧ × ೧೦೧೦೧ ಇದು ಅವಿಭಾಜ್ಯವಲ್ಲ.

ಪು-೭ = ೧೧೧೧೧೧೧. ಇದು ಅವಿಭಾಜ್ಯವಲ್ಲ. ಇದರ ಅಪವರ್ತನಗಳನ್ನು ಶೋಧಿಸುವ ಸಂತೋಷ ನಿಮ್ಮದಾಗಲಿ.

ಈ ಸ್ಥೂಲ ಗಣನೆಗಳಿಂದ ಒಂದು ಸಂಗತಿ ಸ್ಪಷ್ಟವಾಗುತ್ತದೆ: ಪುನರಾವರ್ತಿತ ಏಕಕಗಳ ಪೈಕಿ ಅವಿಭಾಜ್ಯತೆಯ ಅರ್ಹತೆ ಪಡೆಯಲು ಅವುಗಳಲ್ಲಿ ೧ ಗಳು ೨ರ ಗುಣಿತಗಳಲ್ಲಿ (ಅಂದರೆ ನಾಲ್ಕು, ಆರು, ಎಂಟು ಇತ್ಯಾದಿ ೧ ಗಳು) ಅಥವಾ ೩ರ ಗುಣಿತಗಳಲ್ಲಿ (ಅಂದರೆ ಮೂರು, ಆರು, ಒಂಬತ್ತು ಇತ್ಯಾದಿ ೧ ಗಳು) ಇರತಕ್ಕದ್ದಲ್ಲ. ಹೀಗೆ ಪು-೪, ಪು-೬, ಪು-೮, ಮುಂತಾದವೂ ಅಂತೆಯೇ ಪು-೩, ಪು-೯, ಪು-೧೫ ಪು-೨೧ ಮುಂತಾದವೂ ಅವಿಭಾಜ್ಯತೆಯ ಅರ್ಹತೆ ಗಳಿಸುವುದಿಲ್ಲ. ಉಳಿದವು? ಉದಾಹರಣೆಗೆ ಪು-೭, ಪು-೧೧, ಪು-೧೩ ಮುಂತಾದವು? ಒಂದೊಂದನ್ನೂ ಅವಿಭಾಜ್ಯತೆಯ ಒರೆಗಲ್ಲಿಗೆ ತೀಡಿ ಪರೀಕ್ಷಿಸುವುದೊಂದೇ ಹಾದಿ.

ಹೀಗೆ ಸಾಗಿದ ಗಣಿತವಿದರು ಪುನರಾವರ್ತಿತ ಏಕಕಗಳ ಅನಂತಶ್ರೇಣಿಯಲ್ಲಿ ಅವಿಭಾಜ್ಯಗಳ ವಿತರಣೆ ಮಾಮೂಲಿ ಸಂಖ್ಯಾಶ್ರೇಣಿಯ

ಸಂದರ್ಭದಲ್ಲಿಯಂತೆಯೇ ಯಾದೃಚ್ಛಿಕವಾಗಿದೆ ಯೆಂದೂ ಇವನ್ನು ಪತ್ತೆಹಚ್ಚಲು ಯಾವುದೇ ಸಿದ್ಧ ಸೂತ್ರವಿಲ್ಲವೆಂದೂ ಕಂಡುಕೊಂಡರು.

ಪುನರಾವರ್ತಿತ ಏಕಕಗಳ ಪೈಕಿ ಸದ್ಯ (೧೯೮೬) ತಿಳಿದಿರುವ ಅವಿಭಾಜ್ಯಗಳು ಕೇವಲ ಐದು: ಪು-೨, ಪು-೧೯, ಪು-೨೩ (ಸಾಧನೆ ಒದಗಿದ್ದು ೧೯೧೯ರಲ್ಲಿ), ಪು-೩೧೭ (ಸಾಧನೆ ಒದಗಿದ್ದು ೧೯೭೮ರಲ್ಲಿ), ಪು-೧೦೩೧ (ಸಾಧನೆ ಒದಗಿದ್ದು ೧೯೭೯ರಲ್ಲಿ).

ಮುಂದಿನದು ಯಾವುದು? ಪು-೧೦೩೧ ನ್ನು ಅವಿಭಾಜ್ಯವೆಂದು ಸಾಧಿಸಿದವರು ಅಮೆರಿಕದ ವಿಲಿಯಮ್ಸ್ ಮತ್ತು ಡುಬ್ನರ್ ಎಂಬ ಗಣಿತ ವಿದರು. ಇವರ ಪೈಕಿ ಡುಬ್ನರ್ ಎಂಬವರ ಪ್ರಕಾರ ಪು-೧೦೩೧ರ ಮುಂದಿನ ಅವಿಭಾಜ್ಯ ಪುನರಾವರ್ತಿತ ಏಕಕ ಪು-೧೦೦೦೦ ಕ್ಕಿಂತ ಕಡಿಮೆಯದಾಗಿರುವುದಿಲ್ಲ. ಇದನ್ನು ಶೋಧಿಸುವ ದಿಶೆಯಲ್ಲಿ ನೀವೂ ಒಂದು ಕೈ ನೋಡಬಾರದೇಕೆ? "ಯಾವ ಪುರುಷಾರ್ಥಕ್ಕೆ?" ಎಂದು ನೀವು ಕುತ್ತಿ ಕೇಳುತ್ತಿರುವುದು ನನ್ನನ್ನು ತಿವಿಯುತ್ತಿದೆ. ವಿಜ್ಞಾನದ ಇತಿಹಾಸದಿಂದ ಆಯ್ದಿರುವ ಮುಂದಿನ ಮೂರು ನಿದರ್ಶನಗಳನ್ನು ಓದಿದ ಬಳಿಕ ನೀವೇ ನಿಮ್ಮ ಪ್ರಶ್ನೆಗೆ ಉತ್ತರ ಕಂಡುಕೊಳ್ಳಬಲ್ಲಿರಿ.

ಕ್ರಿಸ್ತಪೂರ್ವ ದಿನಗಳಲ್ಲಿ ಗ್ರೀಕ್ ಗಣಿತವಿದರು ಕೇವಲ ಬೌದ್ಧಿಕ ಕ್ರೀಡೆಯಾಗಿ ಶಂಕುಜಗಳ (conics) ಗಣಿತವನ್ನು ಅಭಿವರ್ಧಿಸಿದ್ದರು. ದೀರ್ಘವೃತ್ತ (ellipse), ಪರವಲಯ (carabola) ಮತ್ತು ಅತಿಪರವಲಯ (hyperbola) ಇವುಗಳಿಗೆ ಒಟ್ಟಾಗಿ ಶಂಕುಜ ಗಳೆಂದು ಹೆಸರು. ಹಲವಾರು ಶತಮಾನಗಳ ತರುವಾಯ ಬಂದ ಯೋಹನ್ ಕೆಪ್ಲರ್ (ಕ್ರಿ.ಶ. ೧೫೭೧-೧೬೩೦) ಎಂಬ ಜರ್ಮನ್ ಖಗೋಳ ವಿಜ್ಞಾನಿ ಗ್ರಹಗಳು ಸೂರ್ಯನ ಸುತ್ತ ಸಾಗುವ ಕಕ್ಷೆಗಳು ದೀರ್ಘವೃತ್ತಗಳೆಂದು ಆವಿಷ್ಕರಿಸಿದ. ದೀರ್ಘವೃತ್ತದ ಪೂರ್ತಿ ಗಣಿತವೃತ್ತಾಂತ ಆಗ ಸುಲಭಲಭ್ಯವಾಗಿದ್ದುದರಿಂದ ಖಗೋಳವಿಜ್ಞಾನದ ಮಾತ್ರವೇ ಅಲ್ಲ, ಭೌತವಿಜ್ಞಾನದ ಮುನ್ನಡೆಗೆ ಕೂಡ ವಿಶೇಷ ಕುಮ್ಮಕ್ಕು ದೊರೆಯಿತು. ಇದಲ್ಲವಾಗಿದ್ದರೆ ಕೆಪ್ಲರನ ಕಾಲದಲ್ಲಿ ದೀರ್ಘ ವೃತ್ತದ ಗಣಿತವನ್ನು ಹರಿಃ ಶ್ರೀಃ ಓಂ ನಾಮ ದಿಂದ ಆರಂಭಿಸಬೇಕಾಗಿರುತ್ತಿತ್ತು. ಹೀಗೆ ಒಂದು ಕಾಲದಲ್ಲಿ ಬೌದ್ಧಿಕ ಕ್ರೀಡೆ ಆಗಿದ್ದುದು ಇನ್ನೊಂದು ಕಾಲದಲ್ಲಿ ವಾಸ್ತವತೆಗೆ ಬರೆವ ಭಾಷ್ಯವಾಯಿತು.

ಯೂಕ್ಲಿಡ್ ಮತ್ತು ಜ್ಯಾಮಿತಿ ಪರ್ಯಾಯ ನಾಮಗಳೆಂದು ಇಂದಿನ ವಿದ್ಯಾರ್ಥಿಗಳಿಗೆ ಗೊತ್ತಿದೆ: ಜ್ಯಾಮಿತಿಯ ಅಸ್ತಿತ್ವಕ್ಕೆ ಯೂಕ್ಲಿಡ್‌ನ ಕೊಡುಗೆ ಆ ಮಟ್ಟದ್ದಾಗಿರುವುದೇ ಇದರ ಕಾರಣ. ಈ ಉನ್ನತ ಬೌದ್ಧಿಕ ಕ್ರೀಡೆಯು ನವುರು ನಾಜೂಕುಗಳನ್ನು ಅರ್ಥವಿಸಲಾಗದ 'ಪ್ರಾಯೋಗಿಕ ಅನ್ವಯ ದೃಷ್ಟಿಯ' (ಅಂದರೆ ಬದುಕಿಗೆ ಹೇಗೆ ಇದು ಸಂಗತವಾಗುತ್ತದೆ ಎಂಬ ಸಂದೇಹ ತಳೆದ) ಒಬ್ಬ ತರುಣ ಯೂಕ್ಲಿಡ್‌ನನ್ನು ಪ್ರಶ್ನಿಸಿದ: "ಅಯ್ಯಾ, ನಿನ್ನ ಈ ಶೋಧನೆಯ ಪ್ರಯೋಜನವೇನು?"

ಕುಪಿತನಾದ ಯೂಕ್ಲಿಡ್ ಉದ್ಗರಿಸಿದ: "ಇವನಿಗೆ ನಾಲ್ಕು ನಾಣ್ಯ ಕೊಡಿ."

ನಾಣ್ಯದ ಆಕೃತಿಯ ಹಿನ್ನೆಲೆಯಲ್ಲಿಯೂ ಜ್ಯಾಮಿತಿ ಅಂತರ್ಗತವಾಗಿದೆ ಎಂಬುದನ್ನು ಮರೆಯಬಾರದು.

ವಿದ್ಯುತ್ತಿನ ಗುಣಧರ್ಮಗಳ ಸಂಶೋಧನೆ ಯಲ್ಲಿ ಮಗ್ನನಾಗಿದ್ದ ಇಂಗ್ಲೆಂಡಿನ ಮೈಕೆಲ್ ಫ್ಯಾರಡೇಯನ್ನು (೧೭೯೧-೧೮೬೭) ಆ ದೇಶದ ಪ್ರಧಾನಿ ಕೇಳಿದ: "ನಿನ್ನ ಈ ಸಂಶೋಧನೆಯ ಪುರುಷಾರ್ಥವೇನು?"

ನಿರ್ವಿಕಾರ ಚಿತ್ತದಿಂದ ಫ್ಯಾರಡೇ ಉತ್ತರಿಸಿದ: "ಒಂದು ದಿನ ನೀನು ವಿದ್ಯುತ್ತಿನ ಮೇಲೆ ಕರ ಹೇರಿ ನಿನ್ನ ಬೊಕ್ಕಸ ಭರ್ತಿಮಾಡಬಲ್ಲೆ."

ಪುನರಾವರ್ತಿತ ಏಕಕಗಳ ಅವಿಭಾಜ್ಯತೆಯ ಶೋಧ ಸದ್ಯಕ್ಕೆ ಸೂಕ್ಷ್ಮಾತಿಸೂಕ್ಷ್ಮ ಗಣನೆಗಳನ್ನು ಕ್ಷಿಪ್ರಾತಿಕ್ಷಿಪ್ರ ಕ್ಷಣಗಳಲ್ಲಿ ನಿರ್ವಹಿಸಬಲ್ಲ ಪ್ರಬಲ ಗಣಕಗಳ ನಿರ್ಮಾಣಕ್ಕೆ ಕಾರಣವಾಗಿದೆ. ಇವುಗಳ ಪ್ರಯೋಜನವ್ಯಾಪ್ತಿಗೆ ಮೇರೆ ಇದೆಯೇ? ❁



# ಅಹೋಬಲ ಶಂಕರರೊಂದಿಗೆ

## ಒಂದು ಸಂದರ್ಶನ

**ಡಾ. ಎಸ್. ಕೆ. ಜೋಶಿ**

**ಜೀವನವು ನಿಮಗೇನು ಪಾಠ ಕಲಿಸಿದೆ? ಜೀವನದ ಮಹೋದ್ದೇಶವೇನು?**

* ಇವೆರಡೂ ಬಹು ದೊಡ್ಡ ಉತ್ತರಿಸಲಾಗದ ಪ್ರಶ್ನೆಗಳು; ಅಥವಾ ಉತ್ತರಿಸಲು ಕಷ್ಟವಾದ ಪ್ರಶ್ನೆಗಳು. ನನ್ನ ಈ ಎಪ್ಪತ್ತೆರಡು ವರುಷಗಳ ಅವಧಿಯಲ್ಲಿ ನನಗೆ ಜೀವನ ಕಲಿಸಲು ಹೋಗಿರುವ ಪಾಠಗಳು ಎಷ್ಟೊ! ಅವುಗಳಲ್ಲಿ ಎಷ್ಟನ್ನು ನಾನು ಕಲಿಯುಲು ಸಮರ್ಥನಾದೆನೆಂಬುದೇ ಪ್ರಶ್ನೆ. ಬಹು ಮಟ್ಟಿಗೆ ನನ್ನ ಬುದ್ಧಿಗೆ ಸಿಲುಕುವ ಪಾಠಗಳು ಬಹು ಸ್ವಲ್ಪ. ಆದರೂ ಇಷ್ಟು ಹೇಳಬಲ್ಲೆ: ಇಡೀ ಜನತೆ, ಅಂದರೆ ಭಾರತದ ಇಡೀ ಮನುಷ್ಯ ವರ್ಗದಲ್ಲಿ, ನಾನೊಬ್ಬ ಅತ್ಯಂತ ಸಾಧಾರಣ ವ್ಯಕ್ತಿ ಎನಿಸಿಕೊಂಡರೂ ಒಮ್ಮೊಮ್ಮೆ ಅದರ ಅಷ್ಟು ಅಂಶಗಳಲ್ಲೂ ನನ್ನದಾಗಿರುವುದೊಂದು ಪ್ರತ್ಯೇಕತೆ ಇದೆ. ಅದನ್ನು ಅರಿವಿಗೆ ತಂದುಕೊಂಡಾಗೆಲ್ಲ, ಆ ಮನುಷ್ಯ ವರ್ಗದ ಸಮಸ್ತ ವಿಶೇಷ ಮೌಲ್ಯಗಳು ಮುಖ್ಯವಾಗಿ ಎಲ್ಲ ವಿಧಗಳಲ್ಲೂ, ಅತೀ ಉನ್ನತವಾಗಿ ಬೆಳೆದು, ಜೀವನದ ಅತಿ ಮಹತ್ತಾದ ಶಿಖರವನ್ನೇರಲು ಅದಕ್ಕಿರುವ ಸಾಮರ್ಥ್ಯದಲ್ಲಿ, ನನಗೂ ಒಂದು ಪಾಲಿದೆ. ಅದರ ಅಮರತ್ವದಲ್ಲೂ ನನಗೊಂದು ಅಂಶ ಇದ್ದೇ ಇದೆ ಎಂಬ ಭಾವನೆ ಬರುತ್ತದೆ. ಇದರ ಫಲಿತಾಂಶವಾಗಿ ಇಂದು ಕಾಣಬರುತ್ತಿರುವ, ಜಾಗತಿಕ, ಸಾಮಾಜಿಕ ವಿಪರ್ಯಾಸಗಳು, ಆಗಾಗ ಮನಸ್ಸಿನಲ್ಲಿ ಹುಟ್ಟಿಸುವ ಉದ್ವೇಗ, ನಿರಾಶೆಗಳು ಮಾಯವಾಗಿ ಇಡೀ ಮನುಷ್ಯ ವರ್ಗದ ಉಜ್ವಲ ಭವಿಷ್ಯದ ಬಗ್ಗೆ ಉತ್ಸಾಹ ಮೂಡುತ್ತದೆ. ಸಾರ್ಥಕವಾಗಿ ಜೀವಿಸಿರುವುದೇ ಒಂದು ಮಹತ್ತಾದ ಅನುಭವ ಎನ್ನಿಸುತ್ತದೆ.

ನನ್ನ ದೃಷ್ಟಿಯಲ್ಲಿ ಆದಷ್ಟು ಸಮಗ್ರವಾಗಿ ಸೂಕ್ಷ್ಮವಾಗಿ ಅರ್ಥಮಾಡಿಕೊಂಡು, ಅಷ್ಟೇ ಆಸಕ್ತಿಯಿಂದ, ಶ್ರದ್ಧೆಯಿಂದ ಜೀವನದಲ್ಲಿ "ನಾನು" ಎಂಬುದೇನೆಂದು ಅರಿತುಕೊಂಡು, ಬರಿ ಸುಖವನ್ನೇ ಆಶಿಸುತ್ತ ಹಂಬಲಿಸದೆ, ಕಷ್ಟಗಳಿಗೆ ರೋಸದೇ, ಹೆದರದ, ಸಾಮೂಹಿಕ ಕಷ್ಟ ಸುಖಗಳೇ ತನ್ನವೆಂದು ಅನ್ನಿಸುವಷ್ಟು ಪ್ರಜ್ಞೆಯನ್ನು ಸಂಪಾದಿಸಿಕೊಂಡು, ಇಡೀ ಮನುಷ್ಯ ವರ್ಗದ, ಉನ್ನತಿಗಾಗಿ ಹೋರಾಡುವುದೇ ಜೀವನದ ಉದ್ದೇಶ.

**ಧರ್ಮದ ಬಗ್ಗೆ ಹಾಗೂ ದೇವರ ಅಸ್ತಿತ್ವದಲ್ಲಿ ನಿಮ್ಮ ಅನಿಸಿಕೆಗಳೇನು?**

* ಮನುಷ್ಯನ ಇತಿಹಾಸವನ್ನು ಮೂಲದಿಂದ ಅಧ್ಯಯನ ಮಾಡಿದರೆ, ನಮಗೆ ತಿಳಿಯುವುದೇನಂದರೆ, ಧರ್ಮ-ದೇವರು ಎಂಬುದು, ಆದಿ ಮನುಷ್ಯನು ಅಂದಿನ ತನ್ನ ವಿಕಾಸದ ಹಾದಿಯಲ್ಲಿ ಹೆಜ್ಜೆಯನ್ನಿರಿಸುವ ಮುನ್ನ ಕಲ್ಪಿಸಿ

# ಕಿಂಡಿನೋಟದಲ್ಲಿ ಅಹೋಬಲ ಶಂಕರ

ಧಾರವಾಡದಲ್ಲಿಂದು ಗ್ರಂಥಗಳ ಮಧ್ಯೆ ಏಕಾಕಿಯಾಗಿ ಕಾಲ ತಳ್ಳುತ್ತಿರುವಂತೆ ತೋರುವ ಮಧ್ಯಮ ಎತ್ತರದ ಸುಮಾರು ೭೦-೭೫ ವರ್ಷದ ವ್ಯಕ್ತಿಯೊಬ್ಬ ನೋಡಸಿಕ್ಕುತ್ತಾರೆ. ಅವರೊಂದಿಗೆ ಮಾತಿಗೆ ಮೊದಲು ಮಾಡಿದರೆ ಎಂದೂ ನಿಲ್ಲದ ಗಾಡಿಯಂತೆ ನಿರರ್ಗಳವಾದ ವಾಗ್ಝರಿ ಹರಿಯತೊಡಗುತ್ತದೆ. ಎಷ್ಟೋ ಸಲ ಅವರನ್ನು ತಡೆದು ನಡುವೆಯೆ ಪ್ರಶ್ನೆ ಕೇಳುವುದು ಕೂಡ ಅಪ್ರಸ್ತುತವೇನೋ ಎಂದು ನಿಮಗೇ ಮನದಟ್ಟಾಗಿಬಿಡುತ್ತದೆ. ಅವರೇ ಶ್ರೀ ಅಹೋಬಲ ಶಂಕರ. ಅವರೊಬ್ಬ ಬಹುಭಾಷಾವಿದ. ತೆಲಗು ಅವರ ಮನೆಮಾತು. ಹುಟ್ಟಿದ್ದು ಕರ್ನಾಟಕದಲ್ಲಿ, ಕಲಿತದ್ದು ಕನ್ನಡದಲ್ಲಿ, ಇಂಗ್ಲಿಷಿನಲ್ಲಿ. ದಕ್ಷಿಣದ ಇನ್ನೆರಡು ಭಾಷೆಗಳಾದ ತಮಿಳು, ಮಲೆಯಾಳಿಗಳೂ ಅವರಿಗೆ ಗೊತ್ತು. ಬಂಗಾಲಿಯನ್ನು ಆಳವಾಗಿ ಅಭ್ಯಸಿಸಿದ್ದಾರೆ. ಹಿಂದಿ, ಮರಾಠಿಗಳನ್ನು ಓದಿಕೊಂಡಿದ್ದಾರೆ. ಆದರೆ ಜೀವನದ ಬಹುಭಾಗವನ್ನು ಇಂಗ್ಲಿಷ್ ಪತ್ರಿಕೋದ್ಯಮಿಯಾಗಿ ಕಳೆದಿದ್ದಾರೆ. ನಿವೃತ್ತಿ ಸಮಯದಲ್ಲಿ ಅವರು 'ಫ್ರೀ ಪ್ರೆಸ್ ಜರ್ನಲ್'ನ ಸಹಾಯಕ ಸಂಪಾದಕರಾಗಿದ್ದರು. 'ಪಥೇರ್ ಪಾಂಚಾಲಿ', 'ಅಪರಾಜಿತೋ', 'ಸಾಹಿಬ್ ಬೀಬಿ ಔರ್ ಗುಲಾಂ' ನಂತಹ ಮಹತ್ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ.



ಅಹೋಬಲ ಶಂಕರ ಆದರ್ಶಗಳ ಕನಸನ್ನು ಎಳವೆಯಿಂದಲೇ ಕಂಡವರು; ಅವುಗಳ ಬೆಂಬತ್ತಲು ಎಂದೂ ಹಿಂಜರಿದವರಲ್ಲ. ಬೆಂಗಳೂರಲ್ಲಿ ಬಿ.ಎಸ್ಸಿ.ಯಲ್ಲಿ ಓದುತ್ತಿದ್ದರಾದರೂ ಪದವೀ ಪರೀಕ್ಷೆ ಮುಗಿಸಲಿಲ್ಲ. ಶಿವಮೊಗ್ಗ ನ್ಯಾಯಾಲಯದಲ್ಲಿ ಗುಮಾಸ್ತ ಜಾಗ ಸಿಕ್ಕು ಏಳುವರ್ಷ ದುಡಿದರು. ಆಗಲೇ ಮದುವೆಯೂ ಆಯಿತು. ಮುಂದೆ ಕೆ.ಜಿ.ಎಫ್.ಗೆ ಬದಲಿಯಾದಾಗ ಒಂದು ವ್ಯಾಜ್ಯದಲ್ಲಿ, ಒಬ್ಬ ಮಾರವಾಡಿ ಮತ್ತು ಒಬ್ಬ ಕಾರ್ಮಿಕನ ನಡುವಿನ ತಂಟೆಯಲ್ಲಿ, ಅವರು ಬಹಿರಂಗವಾಗಿಯೇ ಕಾರ್ಮಿಕನ ಪಕ್ಷ ವಹಿಸಿದರು. ಈ ಅವಧಿಯಲ್ಲಿ ತಾವು ಮಾಡುತ್ತಿದ್ದ ಗುಮಾಸ್ತಗಿರಿ ಅವರಿಗೆಂದೂ ಸಮಾಧಾನ ತಂದಿರಲಿಲ್ಲ. ಅಂತರ್ಯದಲ್ಲಿ ಅವರ ಆತ್ಮ ಬಂಡೇಳುತ್ತಿತ್ತು, ಈ ವ್ಯವಸ್ಥೆಯ ವಿರುದ್ಧ. ೧೯೪೧ರಲ್ಲಿ ಜರ್ಮನಿ ರಶಿಯದ ಮೇಲೆ ದಾಳಿ ಮಾಡಿದಾಗ ಯುದ್ಧ ಸೇರಬೇಕೆಂದೂ ಅವರು ಹವಣಿಸಿದರು. ೧೯೪೨ ರಲ್ಲಿ ಅಗಸ್ಟ್ ಕ್ರಾಂತಿಯ ನಂತರ ಕೆಲಸಕ್ಕೆ ರಾಜಿನಾಮೆಯಿತ್ತು ಚಳವಳಿ ಸೇರಿದರು.

ಮುಂದೆ ಉಪಜೀವನದ ಪ್ರಶ್ನೆ ಭೂತಾಕಾರ ತಳೆದು ನಿಂತಾಗ ಕಲಕತ್ತೆಗೆ ಹೋದರು. ಅಲ್ಲಿ ಬ್ರಹ್ಮದೇಶದಿಂದ ನಿರಾಶ್ರಿತರಾಗಿ ಬಂದ ಸಾವಿರಾರು ತೆಲಗು ನಿರಾಶ್ರಿತರ ಪುನರ್ವಸತಿ ಕಾರ್ಯದಲ್ಲಿ ತೆಲಗು ಬಲ್ಲವರೊಬ್ಬರ ಅಗತ್ಯ ಇವರಿಂದ ಪೂರಯಿಸಲ್ಪಟ್ಟಿತು. ಮುಂದೆ ಮುಂಬಯಿಗೆ ಬಂದು ಅಂದಿನ 'ಬಾಂಬೆ ಕ್ರಾನಿಕಲ್'ನಲ್ಲಿ ಉಪಸಂಪಾದಕನಾಗಿ ತರಬೇತಿ ಪಡೆಯತೊಡಗಿದರು. ೧೯೪೭ರ ಜನೆವರಿಯಲ್ಲಿ 'ನ್ಯಾಶನಲ್ ಸ್ಟ್ಯಾಂಡರ್ಡ್' ಸೇರಿ ಐದು ವರ್ಷಗಳಲ್ಲಿ ಉಪಮುಖ್ಯ ಸಂಪಾದಕರಾದರು. ಅಲ್ಲಿದ್ದಾಗಲೇ ಅವರ ಹೆಂಡತಿ ಕಾಲವಾದ ನಂತರ ಕೆಲಸ ಬಿಟ್ಟು ಬೆಂಗಳೂರಿಗೆ ಮರಳಿದರು. ಆಗಲೇ ಪ್ರಸಿದ್ಧ ಬಂಗಾಲಿ ಕೃತಿಗಳ ಕನ್ನಡೀಕರಣವನ್ನು ಅವರು ಆರಂಭಿಸಿದ್ದು. ಕೂಡಲಿ ಚಿದಂಬರಂರವರಂಥ ಖ್ಯಾತ ಪ್ರಕಾಶಕರು ಅವುಗಳನ್ನು ಬೆಳಕಿಗೆ ತಂದಿದ್ದಾರೆ.

೧೯೫೭ರಲ್ಲಿ ಮುಂಬಯಿಗೆ ಮರಳಿ ಮೊದಲು 'ಫ್ರೀ ಪ್ರೆಸ್ ಜರ್ನಲ'ನ್ನು ಉಪಸಂಪಾದಕನೆಂದು ಸೇರಿದರೂ ನಿವೃತ್ತಿ ಸಮಯಕ್ಕೆ ಅವರು ಸಹಾಯಕ ಸಂಪಾದಕರಾಗಿದ್ದರು. ದಿ. ಸದಾನಂದರಂಥ ಹೆಸರಾಂತ ಸಂಪಾದಕರೊಂದಿಗೆ ದುಡಿದ ಹೆಮ್ಮೆ ಶಂಕರರದು.

ಗಾಂಧಿ, ಮಾರ್ಕ್ಸ್ ಇಬ್ಬರ ಪ್ರಭಾವವೂ ಅಹೋಬಲ ಶಂಕರರ ಮೇಲೆ ಗಾಢವಾಗಿರುವುದನ್ನು ಅವರ ಜೀವನದುದ್ದಕ್ಕೂ ಕಾಣಬಹುದು. ಅವರು ತಮ್ಮ ಜೀವನದಲ್ಲಿ ಆಸ್ತಿ ಮಾಡುವುದಕ್ಕೆ ಎಂದೂ ಮಹತ್ವ ನೀಡಲಿಲ್ಲ. ಅವರ ಆರು ಮಕ್ಕಳ (ನಾಲ್ಕು ಹೆಣ್ಣು, ಎರಡು ಗಂಡು) ಮದುವೆಯೂ ಅಂತರ್ಜಾತೀಯ ವಿವಾಹವೇ. ಅದೆಲ್ಲಕ್ಕೂ ಸೇರಿ ತಾವು ಒಟ್ಟು ೧೫,೦೦೦ ಕ್ಕಿಂತ ಹೆಚ್ಚೇನೂ ಖರ್ಚು ಮಾಡಲಿಲ್ಲವೆನ್ನುತ್ತಾರೆ ಶಂಕರ.

ಅವರ ಸಾಮಾಜಿಕ ದೃಷ್ಟಿ ನಮ್ಮ ಸಂಕುಚಿತ ಮಿತಿಯನ್ನು ಮೀರಿ ಬಲುದೂರ ಚಲಿಸುತ್ತದೆ. ಈ ಸಂದರ್ಶನ ಅವರ ಪರಿಪಕ್ವ ಜೀವನದ, ಮಾಗಿದ ವೈಚಾರಿಕತೆಯ, ಸಮತೋಲ ದೃಷ್ಟಿಕೋನದ ಮೇಲೆ ಬೆಳಕು ಬೀರುತ್ತದೆ. ❁

ಕೊಂಡ ಸಲಕರಣೆಗಳು. ಅವನು ತನ್ನ ಅಂದಿನ ವ್ಯವಸ್ಥೆಯ ಸುರಕ್ಷಿತ ವ್ಯವಹಾರಕ್ಕಾಗಿ, ಶಿಸ್ತಿಗಾಗಿ, ಅಳವಡಿಸಿಕೊಂಡ (Utilitarain), ತಾತ್ಕಾಲಿಕ ಸೌಕರ್ಯಗಳು ವಿಶ್ವ ಸಮಾಜ ಅಡ್ಡಾದಿಡ್ಡಿಯಾಗಿ ಬೆಳೆದು ಬಂದು ಈಗ ನಿಂತಿರುವ ಸ್ಥಿತಿಯಲ್ಲಿ, ಸಾವಿರಾರು ವರ್ಷಗಳಿಂದಲೂ, ಮನುಷ್ಯವರ್ಗದ ಮೇಲು ವರ್ಗಗಳ, ಅಲ್ಪ ಸಂಖ್ಯಾತರು ಎಷ್ಟೋ ಸಾಮಾಜಿಕ ಸೌಖ್ಯಗಳಲ್ಲಿ ಮೇಲೇರಿದ್ದರೂ ಇನ್ನೂ ಮೂಕ ಪ್ರಾಣಿಗಳಂತೆಯೇ ಜೀವಿಸುತ್ತಿರುವ ಕೆಳ ಸ್ತರದ ಬಹು ಸಂಖ್ಯಾತರು, ಮೇಲಿನವರ ಸುಖ ಸಂಪತ್ತುಗಳಿಗಾಗಿಯೇ ಹಗಲು ರಾತ್ರಿ ಬೆವರು ಹರಿಸುತ್ತ, ಸುಖವೆಂಬುದೇನೆಂದರಿಯದೇ, ಬರೀ ಕುಡಿತದ ಅಮಲು, ಗಾಢ ನಿದ್ರೆ, ಕಡೆಗೆ ಅಕಾಲ ಮರಣಗಳಲ್ಲಿ ಬಿಡುಗಡೆಯನ್ನು ಬಯಸುತ್ತ, ತಮ್ಮ ವ್ಯಕ್ತಿತ್ವದ ಅರಿವೇ ಅಂಕುರಿಸದೆ ಇರುವಂತೆ ಮಾಡಲು, ಈ ದೇವರು–ಧರ್ಮ ಎಂಬ ಸೌಕರ್ಯಗಳು, ಅವರಿಗೆ ಮುರಿಯಲಾರದ ಸಂಕೋಲೆಗಳಾಗುವಂತೆ ಅಲ್ಲದೇ ಅವರ ವ್ಯಕ್ತಿತ್ವವು ಎಚ್ಚರವಾಗದಂತೆ ಮಾಡುವ ಅಫೀಮಿನಂತೆ ಉಪಯೋಗಿಸಲ್ಪಟ್ಟಿವೆ. ಈಗ ವಿಶ್ವದ ಬಹುಭಾಗಗಳಲ್ಲಿ, ಕಾಣಬರುತ್ತಿರುವುದೇನು? ಸಾಮಾಜಿಕ ಹಿಂಸೆ, ಕೊಲೆಗಳು, ರಕ್ತದ ಹೋಳಿಗಳು, ಅನಾಥರ ಹಾಹಾಕಾರಗಳಲ್ಲವೇ? ಇವೆಲ್ಲ ದೇವರ ಹೆಸರಿನಲ್ಲಿ ಧರ್ಮದ ಹೆಸರಿನಲ್ಲಿ! ನಾವು ಮನುಷ್ಯರು, ಮೃಗಗಳಲ್ಲ. ಏಕೆಂದರೆ ಅವಕ್ಕೆ ದೈವಜ್ಞಾನವೂ ಇಲ್ಲ, ಧರ್ಮಜ್ಞಾನವೂ ಇಲ್ಲ. ದೇವರು–ಧರ್ಮ ಎಂಬೀ ಕಲ್ಪನೆಗಳಿಂದ ಮನುಷ್ಯ ವರ್ಗಕ್ಕೆ, ಹಾನಿ ಹೆಚ್ಚಾಗಿದೆಯೋ ಪ್ರಗತಿ ಹೆಚ್ಚೋ ಬ್ಯಾಲನ್ಸ್ ಶೀಟ್ ಹಾಕಿ ನೋಡಲಿ ಜ್ಞಾನಿಗಳೆನಿಸಿಕೊಂಡವರು.

**ಕನ್ನಡ ವಾಙ್ಮಯ ಎತ್ತ ಸಾಗಿದೆ? ಇತರ ಪ್ರಾದೇಶಿಕ ಭಾಷೆಗಳೊಂದಿಗೆ ಹೋಲಿಸಿದರೆ ಸಾಧನೆ ಎಷ್ಟು?**

* ಕನ್ನಡದ ಇಂದಿನ ವಾಙ್ಮಯ ವ್ಯಾಸಂಗವನ್ನು ನಾನು ವಿಶದವಾಗಿ, ಆಳವಾಗಿ, ಮಾಡುವ ಅವಕಾಶವಿಲ್ಲ. ಏಕೆಂದರೆ, ಮೊದಲಿನಿಂದಲೂ ನನಗೆ ವ್ಯಾಸಂಗ ಮಾಡಲು ಆಸಕ್ತಿ, ಅವಕಾಶವಿದ್ದಿತಾದರೂ, ನನ್ನ ಮೂವತ್ತೊಂದನೆಯ ವಯಸ್ಸಿನಿಂದ ನನ್ನ ಬದುಕಿನಲ್ಲಿ ಅವ ದೊಡ್ಡ ಬದಲಾವಣೆಯ ದೆಸೆಯಿಂದ ಕರ್ನಾಟಕವನ್ನು ಬಿಟ್ಟು, ಜೀವನೋಪಾಯಕ್ಕಾಗಿ ಮುಂಬಯಿಗೆ ಹೋಗಿ, ಪತ್ರಿಕೋದ್ಯೋಗಿಯಾಗ ಬೇಕಾಗಿ ಬಂತು. ಆಗ ಕನ್ನಡದ ಸಂಪರ್ಕ ಕಡಿಮೆಯಾಯಿತು. ಪತ್ರಿಕೋದ್ಯಮ ರಾಜಕೀಯ ಮುಂತಾದವುಗಳಲ್ಲಿ ಆಸಕ್ತಿ ಹೆಚ್ಚಿಸಿಕೊಳ್ಳಬೇಕಾಯಿತು. ಅಲ್ಲದೇ, ಬೇರೆ ಬೇರೆ ಭಾಷೆಗಳನ್ನು ಕಲಿತು, ಅವುಗಳ ಸಾಹಿತ್ಯವನ್ನು ಅರಿಯುವ ಹಂಬಲ ಹುಟ್ಟಿಕೊಂಡಿತು. ಈ ಕಾರಣ ಕನ್ನಡ ಸಾಹಿತ್ಯದಲ್ಲಿ ಪ್ರಕಟವಾದ ಎಷ್ಟೋ ಕೃತಿಗಳನ್ನೋದಲು ಅವಕಾಶವಾಗಲಿಲ್ಲ.

ಅದಾಗ್ಯೂ, ಕೆಲ ಗಮನಾರ್ಹವಾದ ಪುಸ್ತಕಗಳನ್ನು ಅರಸಿಕೊಂಡು ಹೋಗಿ ಓದುತ್ತಿದ್ದೆ. ಆದಾಗಿ, ಈ ಲಘು ಪರಿಚಯದ ಆಧಾರದ ಮೇಲೆ, ಹಾಗೂ ಅಲ್ಲಲ್ಲಿ ಬರೆದ ವಿಮರ್ಶಕರ ಲೇಖನಗಳ ಆಧಾರದ ಮೇಲೆ ನಾನು ಹೇಳುವುದೇನೆಂದರೆ, ನನಗೆ ಅಷ್ಟೇ ಲಘು ಪರಿಚಯವಿರುವ ಬಂಗಾಲಿ, ತೆಲಗು, ಮಲೆಯಾಳ, ಮರಾಠಿ ಸಾಹಿತ್ಯಗಳಲ್ಲಿಯ ಕೆಲ ಅನನ್ಯವಾದ ಕೃತಿಗಳನ್ನು ಹೋಲಿಸಿದರೆ, ಕನ್ನಡದಲ್ಲಿ ಆಗಿರುವ ಪ್ರಗತಿ ಸಾಲದೆನ್ನಿಸುತ್ತದೆ. ಒಂದು ಮುಖ್ಯ ಕಾರಣ. ಬಹಳ ಮಂದಿ ಇಂಗ್ಲಿಷ್ ಓದಿದ ವಿದ್ಯಾವಂತರು ಕನ್ನಡ ಪುಸ್ತಕಗಳ ಕಡೆಗೆ ಗಮನವನ್ನು ಹರಿಸುವುದೇ ಇಲ್ಲ. ಕನ್ನಡದ ಕೃತಿಗಳನ್ನು ಓದುವ ಅಲ್ಪಸಂಖ್ಯಾತ ಶಿಕ್ಷಿತರಲ್ಲಿ, ಇಂಗ್ಲಿಷ್ ಮತ್ತು ಇತರ ಭಾಷೆಗಳ ಸಾಹಿತ್ಯದ ಪರಿಚಯವಿಲ್ಲದೇ, ಸುಲಭವಾಗಿ ಮೆಚ್ಚಿಕೊಳ್ಳುತ್ತಾರೆ. ಅವರಿಗೆ ತುಲನಾತ್ಮಕ ವಿಮರ್ಶೆಯ ಜ್ಞಾನವಿರುವದಿಲ್ಲ. ಇದರ ಫಲವಾಗಿ ಎಷ್ಟೋ ಬಾರಿ, ಇಂಗ್ಲಿಷ್ ಮತ್ತು ಬೇರೆ

ಭಾಷೆಗಳಿಂದ ಕೃತಿಚೌರ್ಯ ಮಾಡಿರುವ ಅನೇಕ ಕೃತಿಗಳಿಗೆ, ಅರ್ಹತೆಯಿಲ್ಲದ ಶ್ಲಾಘನೆ ಮತ್ತು ಪ್ರಚಾರ ಸಿಗುತ್ತದೆ. ಬರಹಗಾರರಲ್ಲಿ ಸೃಜನ ಶಕ್ತಿ ಬೆಳೆಯಬೇಕಾದರೆ, ಸ್ವವಿಮರ್ಶೆಯು ಅವಶ್ಯಕ. ಬೇರೆ ಭಾಷೆಗಳ ಕೃತಿಗಳನ್ನೋದಿದಾಗ, ತಮ್ಮವು ಎಷ್ಟು ಕೆಳ ದರ್ಜೆಯವು ಎನ್ನಿಸಿದಾಗ, ಉತ್ತಮ ಕೃತಿ ರಚನೆ ಮಾಡಲು ತಮ್ಮಲ್ಲಿಯೇ ಒಂದು ಒಳತೋಟಿಯಾಗುತ್ತದೆ.

ಕೇವಲ ಪ್ರಚಾರ, ಆದಾಯ ಮತ್ತು ಪುರಸ್ಕಾರಗಳ ಮೋಹಕ್ಕೆ ಬಲಿಯಾಗದೇ, ಶಾಶ್ವತವಾಗಿ ಉಳಿಯುವ ಕನ್ನಡಕ್ಕೆ ಒಂದೇ ಅಲ್ಲದ, ದೇಶದ ಮತ್ತು ವಿಶ್ವದ ಇತರ ಭಾಷೆಗಳಲ್ಲೂ ಅನುವಾದಿಸಲು ಯೋಗ್ಯತೆಯುಳ್ಳ ಕೃತಿಗಳನ್ನು ರಚಿಸಲು ಸ್ಫೂರ್ತಿ ದೊರೆಯುತ್ತದೆ. ಇಡೀ ಜೀವನವನ್ನೇ ಸಾಹಿತ್ಯಕ್ಕಾಗಿ ಮುಡಿಪಾಗಿಟ್ಟು, ಫಲಾಪೇಕ್ಷೆ ಇಲ್ಲದೆ, ಬರುವ ಕಷ್ಟ ನಿಷ್ಠುರಗಳಿಗೆ ಸೋಲದೇ, ಅವಧೂತರಂತೆ ಜೀವನ ಕಳೆದು ಸ್ವೇಚ್ಛೆಯಾಗಿ ಕೃತಿಗಳನ್ನು ರಚಿಸಿ, ಬಂಗಾಲಿ, ಹಿಂದಿ, ತಮಿಳು, ತೆಲಗು ಮತ್ತು ಮಲೆಯಾಳಿ ಭಾಷೆಗಳಲ್ಲಿ ನಕ್ಷತ್ರಗಳಂತೆ ವಿರಾಜಿಸುವ ಶರಚ್ಚಂದ್ರ, ವಿಭೂತಿ ಭೂಷಣ, ಕಾಜಿ ನಜೀರುಲ್ ಇಸ್ಲಾಮ್, ಮುನಷಿ ಪ್ರೇಮಚಂದ, ಗುರುಜಾಡ ಅಪ್ಪಾರಾವ್ ಪಂತುಲು, ಸುಬ್ರಹ್ಮಣ್ಯ ಭಾರತಿ, ವೈಕಂ ಮಹಮ್ಮದ ಬಷೀರ್ ಮತ್ತು ಪೊಟ್ಟೇಕಾಟ್ ಮುಂತಾದ ಪ್ರತಿಭಾವಂತರನ್ನು ಹೋಲುವವರು ನಮ್ಮ ಕನ್ನಡ ಸಾಹಿತ್ಯದಲ್ಲಿ ನನಗೆ ತಿಳಿದಿರುವ ಮಟ್ಟಿಗೆ ಇಬ್ಬರು–ಮೂವರು ಮಾತ್ರ. ಇವರು, ಬಡತನಕ್ಕೆ ಹೇಸದೇ, ವಿಮರ್ಶಕರಿಗೆ ಹೆದರದೇ, ಯಾವ ಆಸೆ ಆಮಿಷಗಳಿಗೂ ತಲೆಬಾಗದೇ, ಇಡೀ ವಿಶ್ವ ಸಾಹಿತಿಗಳ ಸರಿ ಸಮಾನ ನಿಲ್ಲತಕ್ಕವರು ಅವರೇ—ಕೈಲಾಸಂ, ಬೇಂದ್ರೆ ಮತ್ತು ಶಿವರಾಮ ಕಾರಂತರು.

ಕೈಲಾಸಂ ಮತ್ತು ಬೇಂದ್ರೆಯವರ ಕೃತಿಗಳನ್ನು ಬೇರೆ ಭಾಷೆಗಳಿಗೆ ಅನುವಾದಿಸಿದರೆ, ಅವು ಇಡೀ ಸಾಹಿತ್ಯ ಪ್ರಪಂಚಕ್ಕೆ ಕಾಣಿಕೆಗಳಾದಾವು. ಕಾರಂತರು 'ಚೋಮನ ದುಡಿ'ಯನ್ನು ತಮ್ಮ ಇಪ್ಪತ್ತಾರನೆಯ ಹರೆಯದಲ್ಲಿ ಬರೆದರು. ಈ ಕೃತಿಯನ್ನು, ಅರ್ಹತೆಯುಳ್ಳವರು (ಈಗ ಬಂದಿರುವ ಅನುವಾದ ಸಮರ್ಪಕವಾಗಿಲ್ಲ) ಇಂಗ್ಲಿಷಿನಲ್ಲಿ ಅನುವಾದಿಸಿದರೆ, ಇಡೀ ವಿಶ್ವದ ಸಾಹಿತ್ಯಪ್ರೇಮಿಗಳು ಅದನ್ನು ಆದರದಿಂದ ಸ್ವಾಗತಿಸುವರು. ಈ ಕೃತಿಯು ನೋಬೆಲ್ ಬಹುಮಾನ ಪಡೆದ ನಾರ್ವೆಯ ಕುಥ್ ಹಂಸನ್‌ರ 'ಗ್ರೋಥ್ ಆಫ್ ದಿ ಸಾಯಿಲ್,' ಮತ್ತು ಡಾಡಿಸ್ ಲಾಸ್ ಸೇಂಟ್ ರೇಮಾಂಟ್ ಎಂಬ ಪೋಲಿಶ್ ಬರಹಗಾರನ 'ದಿ ಪೀಜಂಟ್ಸ್' ಎಂಬ ಕಾದಂಬರಿಗಳನ್ನು ನೆನಪಿಗೆ ತರುತ್ತದೆ. 'ಚೋಮನ ದುಡಿ'ಯನ್ನು ಪ್ರಪಂಚದ ಯಾವುದೇ ಭಾಷೆಗೆ ಅನುವಾದಿಸಿದರೂ ಎಷ್ಟೇ ಪ್ರಗತಿಯಾಗಿರುವ ದೇಶವಾದರೂ ಸರಿ, ಆ ಭಾಷೆಯ ಜನರು ತಮ್ಮ ಭಾಷೆಯ ಕೃತಿ ಎಂದು ಒಪ್ಪಿಕೊಳ್ಳುವಷ್ಟು ಸಾರ್ವತ್ರಿಕತೆ ಇದೆ ಅದರಲ್ಲಿ. ಈ ಕಾದಂಬರಿ ಪ್ರೇಮಚಂದರ 'ಗೋದಾನ' ಎಂಬ ಮಹತ್ ಕೃತಿಗೆ ಯಾವುದರಲ್ಲೂ ಕಡಿಮೆಯಿಲ್ಲ.

ಹೆಸರಿಸಬೇಕಾದರೆ, ಉಳಿದ ಸಾಹಿತಿಗಳಲ್ಲಿ ಇತ್ತೀಚೆಗೆ ತಮ್ಮ ಎಪ್ಪತ್ತಮೂರನೆಯ ವಯಸ್ಸಿನಲ್ಲಿ ಪ್ರೊ. ಸಂ. ಶಿ. ಭೂಸನೂರಮಠರು ಬರೆದ ಅವರ ಮೊಟ್ಟ ಮೊದಲನೆಯ ಸ್ವತಂತ್ರ ಕೃತಿಯಾದ 'ಭವ್ಯ ಮಾನವ'ವೆಂಬ ಮಹಾಕಾವ್ಯವು ಉದಾತ್ತ ವಿಶ್ವಮಾನವ ವರ್ಗವನ್ನೇ ಉದ್ದೇಶವಾಗಿಟ್ಟುಕೊಂಡು ಬರೆದ ಮೇರು ಕೃತಿಯಾಗಿದೆ. ಇಂದು ಜಾತಿ, ವರ್ಗ, ಮತ ದ್ವೇಷಗಳಿಂದ ಜರ್ಜರಿತವಾಗಿರುವ ಇಡೀ ಮನುಷ್ಯ ಜಾತಿಯ ಪುನರುದ್ಧಾರಕ್ಕೆ ಕವಿ ಭೂಸನ್ನೂರಮಠರು ತಮ್ಮ ಕಾವ್ಯದ ಮೂಲಕ ದಿವ್ಯವಾದ ಸಂದೇಶ ನೀಡಿದ್ದಾರೆ.

ಈಗ ಗದ್ಯ, ಪದ್ಯ, ನಾಟಕಗಳಲ್ಲಿ ಪ್ರಯೋಗಗಳನ್ನು ನಡೆಸುತ್ತಿರುವ ಅನೇಕ

ಬರಹಗಾರರಲ್ಲಿ, ಸಾಹಿತ್ಯ ಪ್ರಪಂಚಕ್ಕೆ ಅಲಂಕಾರಪ್ರಾಯರಾಗಿರುವಂಥ ಉನ್ನತ ಮಟ್ಟದ ಕೃತಿಗಳನ್ನು ರಚಿಸಲು ಸಾಕಷ್ಟು ಪ್ರತಿಭೆಯಿಲ್ಲ. ತಪಸ್ಸು, ಸಾಧನೆ ಹಾಗೂ ನಿಸ್ವಾರ್ಥತೆ ಮೊದಲೇ ಇಲ್ಲ. ಬಹುಮಂದಿ ಅಗ್ಗದ ಜನಪ್ರಿಯತೆ, ಫೆಲೋಶಿಪ್, ಮತ್ತು ಪುರಸ್ಕಾರಗಳ ಬೇಟೆಗಾಗಿಯೇ ಕೃತಿರಚನೆ ಮಾಡುತ್ತಿದ್ದಾರೆ. ಇಂಥವರು, ಸ್ಫೂರ್ತಿಗಾಗಿ ತಮ್ಮ ಸಾಮಾನ್ಯ ಜನತೆಯ ನೋವು ನಲಿವುಗಳ ಕಡೆ ಹೋಗದೆ, ಬಹುಮಂದಿಗೆ ಅಪರಿಚಿತವಾಗಿರುವ ವಿದೇಶಿ ಚಲನಚಿತ್ರಗಳ ಅಥವಾ ಸಾಹಿತ್ಯ ಕೃತಿಗಳ ವಸ್ತುಗಳನ್ನು ಆರಿಸಿಕೊಂಡು ಹೋಗುತ್ತಾರೆ. ಇಂಥವರಿಂದ, ವಿಶ್ವಸಾಹಿತ್ಯಕ್ಕಿಲ್ಲ, ಕನ್ನಡ ಸಾಹಿತ್ಯಕ್ಕಾದರೂ ಎಂತಹ ಕೊಡುಗೆಗಳು ಸಿಗಬಲ್ಲವು?

**ಬಂಗಾಲಿ ಭಾಷೆಯ ಅಮೂಲ್ಯವಾದ ಸುಮಾರು ೩೫ ಕಾದಂಬರಿಗಳನ್ನು ಕನ್ನಡಿಸಿ, ಕನ್ನಡ ಸಾಹಿತ್ಯದ ಸಂಪದಭಿವೃದ್ಧಿ ಮಾಡಿದ ತಾವು, ಇಡಿಯಾಗಿ ಸಾಹಿತ್ಯವು ಮಾನವ ಜೀವನದ ಮೇಲೆ ಮಾಡುವ ಪ್ರಭಾವ-ಪರಿಣಾಮುಗಳಾವವು ಎಂಬುದನ್ನು ವಿವರಿಸುತ್ತೀರಾ?**

* ಸಾಹಿತ್ಯವು ಜನಜೀವನದ ಮೇಲೆ ಮಹತ್ತರ ಪ್ರಭಾವ ಬೀರುತ್ತದೆಂದು, ನನ್ನ ಯೌವನದಲ್ಲಿ ದೃಢವಾಗಿ ನಂಬಿದ್ದೆ. ವಯಸ್ಸು ಬೆಳೆದಂತೆಲ್ಲ ಆ ನಂಬಿಕೆ ಕಡಿಮೆಯಾಗುತ್ತ ಬಂದಿದೆ. ನಾನೀಗ ನೋಡುತ್ತಿರುವಂತೆ, ನಮ್ಮ ಭಾರತೀಯ ಸಮಾಜದ ಮೇಲೆಯೂ ಅಂತಹ ಹೇಳಿಕೊಳ್ಳತಕ್ಕ ಪ್ರಭಾವ ಸಾಹಿತ್ಯದಿಂದ ಆಗಿಲ್ಲ. ಇದಕ್ಕೆ ಅಪವಾದವಾಗಿ ಹಿಂದಿನ ಬಂಗಾಳಿ ಕಾದಂಬರಿಕಾರ ಬಂಕಿಮಚಂದ್ರರ 'ಆನಂದ ಮಠ,' 'ದೇವೀ ಚೌಧುರಾಣಿ' ಎಂಬೀ ದೇಶಭಕ್ತಿ ಪ್ರಚೋದಿಸುವ ಕಾದಂಬರಿಗಳು ಬಂಗಾಳದ ರಾಜಕೀಯ ಉಗ್ರಗಾಮಿ ಚಳುವಳಿಗೆ ಬಹುಮಟ್ಟಿಗೆ ಸ್ಫೂರ್ತಿ ಕೊಟ್ಟುದು ನಿಜ. ಅವನ್ನು ಬಿಟ್ಟರೆ ಬೇರೆ ಇತರ ಯಾವ ಭಾರತೀಯ ಸಮಾಜದಲ್ಲಿ ಸಾಹಿತ್ಯದಿಂದ ಯಾವ ಪ್ರಭಾವವೂ ಆದಂತೆ ಕಾಣುವುದಿಲ್ಲ. ಇಂಗ್ಲಿಷ್ ಸಾಹಿತ್ಯದಲ್ಲಿ ಕೆಲವು ಉದಾಹರಣೆಗಳಿವೆ. ವಿಕ್ಟೋರಿಯನ್ ಯುಗದ ಹಿಂದೆ, ಚಾರ್ಲ್ಸ್ ಡಿಕನ್ಸ್ ಎಂಬ ಕಾದಂಬರಿಕಾರನ 'ಪಿಕ್‌ವಿಕ್ ಪೇಪರ್ಸ್', ಡೇವಿಡ್ ಕಾಪರ್‌ಫೀಲ್ಡ್‌ನ 'ಆಲಿವರ್ ಮತ್ತು ನಿಕೋಲಾಸ್ ನಿಕ್‌ಲ್‌ಬಿ' ಎಂಬ ಕಾದಂಬರಿಗಳು ಕರುಳು ಕಲಕುವಂಥ, ಸಾಮಾಜಿಕ ಅನ್ಯಾಯಗಳ ವಾಸ್ತವಿಕ ನಿರೂಪಣೆಯಿಂದಾಗಿ, ಸಾಲಗಾರರ ಬಂದೀಖಾನೆಗಳು, ಅನಾಥಾಲಯಗಳು, ಖಾಸಗೀ ಶಾಲೆಗಳು, ಇಂಥವುಗಳಲ್ಲಿ ಆಗುತ್ತಿದ್ದ ಅನೇಕ ಅಮಾನುಷ ಅತ್ಯಾಚಾರ ಅನ್ಯಾಯಗಳನ್ನು ಪಾರ್ಲಿಮೆಂಟಿನ ಕಾನೂನುಗಳ ಮೂಲಕ ನಿವಾರಿಸಲು ಸಾಧ್ಯವಾಯಿತು. ಕ್ರಾಂತಿಗೆ ಮುನ್ನ, ರಷ್ಯದಲ್ಲಿ ಜನಸಾಮಾನ್ಯದಲ್ಲಿ ವಿಚಾರಕ್ರಾಂತಿಯ ಬಿರುಗಾಳಿಯನ್ನೆಬ್ಬಿಸಿದ ಗೊಗೋಲ್, ಚೆಕೋವ್, ಟರ್ಗನೇವ್, ಟಾಲ್‌ಸ್ಟಾಯ್, ಡಾಸ್ಟಾವಸ್ಕೀಯಂಥ ಘಟಾನುಘಟಿಗಳ ಪ್ರಭಾವ ಐತಿಹಾಸಿಕವಾದದ್ದು. ಅಂತೆಯೇ ಬಹಳ ಹಿಂದೆ, ಫ್ರಾನ್ಸಿನಲ್ಲಿ ಆದ ಮೊದಲನೆಯ ಮಹಾಕ್ರಾಂತಿಗೆ ಸ್ಫೂರ್ತಿ ಒದಗಿಸಿದ್ದು, ರೂಸೋ, ವಾಲ್ಟೇರ್, ಮಾಂಟೆಸ್ಕ್ಯೂ ಎಂಬೀ ತ್ರಿಮೂರ್ತಿಗಳ ಸಾಹಿತ್ಯ ಕೃತಿಗಳು. ಹಾಗೆಯೇ ಅಮೇರಿಕದ ಸಂಯುಕ್ತ ಸಂಸ್ಥಾನಗಳಲ್ಲಿ, ನಿಗ್ರೋ ಗುಲಾಮಗಿರಿಯ ವಿರುದ್ಧ ಜನತೆಯಲ್ಲಿ ಆಕ್ರೋಶವೆಬ್ಬಿಸಿದ್ದು ಸಹ ಹ್ಯಾರಿಯಟ್ ಬೀಚರ್ ಸ್ಟಾವ್ ಎಂಬಾಕೆಯ 'ಅಂಕಲ್ ಟಾಮ್ಸ್ ಕ್ಯಾಬಿನ್' ಎಂಬ ಕಾದಂಬರಿ. ಈ ಪ್ರಮಾಣದಲ್ಲಿ, ನಮ್ಮ ಭಾರತ ಸಮಾಜದಲ್ಲಿ ಅಂಥ ಹೇಳಿಕೊಳ್ಳುವಂಥ ಪ್ರಭಾವ ಬೀರತಕ್ಕ ಸಾಹಿತ್ಯ ಇನ್ನೂ ಸೃಷ್ಟಿಯಾಗಿಲ್ಲ. ಅದಕ್ಕೆ ಕಾರಣ, ಸಾಮಾಜಿಕ ಕ್ರಾಂತಿಯಾಗಬೇಕೆಂಬ ಹಂಬಲ ನಮ್ಮ ಬೆಳೆಯುತ್ತಿರುವ ಸಾಹಿತಿಗಳಲ್ಲೇ ಹುಟ್ಟಬೇಕಲ್ಲ? ಈಗಿನ ಸಾಹಿತ್ಯ ಕ್ಷೇತ್ರದಲ್ಲಿ

ಆಗುತ್ತಿರುವ ಪ್ರಯೋಗಗಳನ್ನು ನೋಡಿದಾಗ, ಆ ಆಸೆಗೆ ಪುಷ್ಟಿ ಸಿಗುವದಿಲ್ಲ.

**ಪತ್ರಿಕಾ ವ್ಯವಸಾಯದಲ್ಲಿ ಸುಮಾರು ಮೂವತ್ತು ವರುಷಗಳ ಅಮೂಲ್ಯ ಸೇವೆ ಸಲ್ಲಿಸಿದ ತಾವು, 'ಇಂದಿನ ಪತ್ರಿಕೆಗಳು ರಾಜಕೀಯಕ್ಕೆ ಹೆಚ್ಚು ಪ್ರಾಶಸ್ತ್ಯ ಕೊಡು ತ್ತಿವೆ' ಎಂಬ ವಿಚಾರಕ್ಕೆ, ಹೇಗೆ ಪ್ರತಿಕ್ರಿಯೆ ನೀಡುತ್ತೀರಿ?**

* ಇನ್ನೂ ಹೆಚ್ಚು ಕೊಟ್ಟರೂ ಒಳ್ಳೆಯದು. ಏಕೆಂದರೆ, ರಾಜಕೀಯವಾಗಿ, ನಮ್ಮ ಜನಾಂಗ ಇನ್ನೂ ಎಚ್ಚತ್ತಿಲ್ಲ. ಬಹು ಮಂದಿ ಜನರಿಗೆ 'ಡೆಮೊಕ್ರಸಿ' ಎಂಬುದೇ ಅರ್ಥವಾಗಿಲ್ಲ. ಪಾರ್ಟಿಗಳು ಚುನಾವಣೆಗಳಿಂದ ಆರಿಸಿ ಬರುವುದೇ 'ಡೆಮೊಕ್ರಸಿ' ಎಂದು ಬಹಳ ಜನರ ಅಭಿಪ್ರಾಯ. ಅದರ ಫಲಿತಾಂಶ ನೋಡುತ್ತಲೇ ಇದ್ದೇವೆ. ಹಣದ ಆಸೆಯಿಂದಲೋ ದಾಕ್ಷಿಣ್ಯದ ಮತ್ತು ಇತರ ಯಾವುದೇ ಒತ್ತಾಯದಿಂದ ಓಟು ಹಾಕುವುದೇ ಪ್ರಜೆಗಳ ನಿಜವಾದ ನಿರ್ಧಾರ ಎಂಬ ತಪ್ಪೆಣಿಕೆಯಿದೆ. ಪ್ರಜೆಗಳಿಗೆ ನಿಜವಾದ ಅಧಿಕಾರ ಬಂದಾಗಲೇ ಅದು ಪ್ರಜಾ ಪ್ರತಿನಿಧಿ ಪ್ರಭುತ್ವ; ಇಂದಿನ ರಾಜಕೀಯ ಪಾರ್ಟಿಗಳಲ್ಲಿ ಎಷ್ಟು ಮಂದಿ ನಿಜವಾದ ಪ್ರಜೆಗಳ ಹಿತೈಷಿಗಳು? ಪ್ರಜೆಗಳಿಗೆ ಅವರ ನಿಜವಾದ ಮೂಲಭೂತ ಹಕ್ಕುಬಾಧ್ಯತೆಗಳನ್ನು ವಿವರಿಸಿ, ಅವರಲ್ಲಿ ಎಚ್ಚರ ಮೂಡಬೇಕಾದರೆ, ಪತ್ರಿಕೆಗಳ ಮೂಲಕವಲ್ಲದೇ ಬೇರೆಲ್ಲಿ ಸಾಧ್ಯ? ನಮ್ಮ ರಾಜಕೀಯ ಕಟ್ಟಡದ ತಳಹದಿ ಭದ್ರವಾಗುವವರೆಗೂ, ಪತ್ರಿಕೆಗಳಲ್ಲಿ ರಾಜಕೀಯವು ಪ್ರಾಧಾನ್ಯ ಪಡೆಯದೆ ವಿಧಿಯಿಲ್ಲ. ಅದಕ್ಕೆ ಈಗಿರುವಂಥ ಪತ್ರಿಕೆಗಳು ಜಾಹೀರಾತಿನ ಮೇಲೆ ಕೀಳು ದರ್ಜೆಯ ಸಿನಿಮಾ ಚಿತ್ರ, ಹಾಸ-ಪರಿಹಾಸ್ಯಗಳಿಂದ ತುಂಬಿರುತ್ತವೆ. ಅದಾಗಿ, ಹೊಸದಾಗಿ ಅಕ್ಷರಸ್ಥರಾಗುತ್ತಿರುವ ಓದುಗರಲ್ಲಿ ಅತ್ಯಂತ ಕೀಳು ದರ್ಜೆಯ ಅಭಿರುಚಿಗಳನ್ನು ಹುಟ್ಟಿಸುತ್ತಿರುವ ಪತ್ರಿಕೆಗಳು ಎಷ್ಟರಮಟ್ಟಿಗೆ ಪ್ರಾಮಾಣಿಕವಾಗಿ ಜನರಲ್ಲಿ ಮೇಲ್ಮಟ್ಟದ ರಾಜಕೀಯ, ಸಾಮಾಜಿಕ ಪ್ರಜ್ಞೆಗಳನ್ನು ಹುಟ್ಟಿಸಬಲ್ಲವೆಂಬುದೊಂದು ದೊಡ್ಡ ಸಂದೇಹ.

**ಕೊನೆಯದೊಂದು ಪ್ರಶ್ನೆ. ಗಾಂಧೀವಾದಿಯಾಗಿ ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಧುಮ್ಮಿಕ್ಕಿದ್ದ ತಾವು ಈಗಿನ ಯುವಪೀಳಿಗೆಗೆ ಕೊಡುವ ಸಂದೇಶ ವೇನು?**

* ಇಪ್ಪತ್ತೊಂಬತ್ತನೆಯ ವಯಸ್ಸಿನಲ್ಲಿ ಆಗ ತಾನೆ ಹುಟ್ಟಿದ ಮಗನ ತಂದೆಯಾಗಿದ್ದಾಗ್ಯೂ, ನನ್ನ ನಂಬಿರುವ ಹೆಂಡತಿ ಮಗನ ಭವಿಷ್ಯವನ್ನೇ ಕಡೆಗಣಿಸಿ, ಆವೇಶದಿಂದ 'ಕ್ವಿಟ್ ಇಂಡಿಯಾ' ಚಳುವಳಿಗೆ ಧುಮ್ಮಿಕ್ಕಿದೆ. ತಕ್ಕ ಶಾಸ್ತಿಯೂ ಆಯಿತು–ಬಡತನ, ಬಂಧು ಬಳಗದಿಂದ ಧಿಕ್ಕಾರ, ನಿರುದ್ಯೋಗ. ಆದರೂ, ಅದೊಂದು ಪರ್ವಕಾಲದಂತಾಗಿ ನನಗೊಂದು ಹೊಸ ಜನ್ಮವೇ ಬಂತು. ಮುಂಬಯಿಗೆ ಬಂದು ಪತ್ರಿಕೋದ್ಯೋಗಿ ಆದೆ. ಆಗ ನನ್ನಂತೆಯೇ ಹುಚ್ಚರಾಗಿದ್ದ ಎಷ್ಟೋ ಮಂದಿ ಇದ್ದರು. ಆದ್ದರಿಂದ ನನ್ನ ಹುಚ್ಚುತನ ಅಷ್ಟಾಗಿ ನನ್ನನ್ನು ಬಂಧಿಸಲಿಲ್ಲ. ಈಗಿನ ಕಾಲದ ಯುವಕರಲ್ಲಿ ಅಂಥ ಹುಚ್ಚೇರುವುದು ತೀರ ಅಸಂಭವ. ಈಗ ಡಿಸ್ಕೊ...ಕರಾಟೆ ಹುಚ್ಚು. ದೇಶ ಸಮಾಜ ಅಂದರೆ ಅರ್ಥವೇ ಇಲ್ಲ. ಯಾರಿಗೆ ಬೇಕು ಪ್ರಗತಿ? ಆದರೆ, ಈ ಡಿಸ್ಕೋ—ಕರಾಟೆ ಹುಚ್ಚಿನ ಯುವ ಪೀಳಿಗೆಯವರು ಎಚ್ಚರದಿಂದಿರಬೇಕು. ಎಷ್ಟು ಕಾಲ ನಡೆಯುತ್ತೆ? ಆ ಕಡೆ, ಎಲ್ಲೋ, ಅಮೇರಿಕದಲ್ಲೊ, ಯುರೋಪಿನಲ್ಲೊ ಯಾರೋ ಇನ್ನೊಬ್ಬ ಹುಚ್ಚ ಯಾವುದೋ ಅಮಲಿನಲ್ಲಿ ಆವೇಶದಲ್ಲಿ ಒಂದು ಗುಂಡಿಯನ್ನು ಒತ್ತಿದನೆಂದರೆ, ಇಡೀ ಮನುಷ್ಯ ಪ್ರಪಂಚ— ಕ್ಯಾಪಿಟಾಲಿಸ್ಟ್ ಕಮ್ಯುನಿಸ್ಟ್, ನಾಸ್ತಿಕ ಆಸ್ತಿಕ, ಷಿಯಾ ಸುನ್ನಿ, ಕ್ಯಾಥೋಲಿಕ್ ಪ್ರೊಟೆಸ್ಟಂಟ್, ಸೀಖ ಹಿಂದು ಮುಸ್ಲಿಮ್— ಎಲ್ಲಾ ಗಾಳಿಯಲ್ಲಿ ಗುರುತು ಸಹ ಬಿಡದೆ, ಅದೃಶ್ಯವಾಗುತ್ತದೆ. ಒಂದು ಪಕ್ಷ, ಅವನ್ನು

ಹೇಗೋ ತಡೆದರು ಅನ್ನಿ, ಇನ್ನೊಂದೆರಡು ದಶಕಗಳು ಇನ್ನೊಂದು ಶತಮಾನವು ಅನ್ನಿ, ಆ ಭರವಸೆಯಿಂದ ಹಾಗೆ ಉಳಿಯುವ ವಿಶ್ವ ಇನ್ನೇನು ಹದಿನೈದು ವರುಷಗಳಿಗೆ ಇಪ್ಪತ್ತೊಂದನೆ ಶತಮಾನಕ್ಕೆ ಕಾಲಿಡುತ್ತದೆ; ಆಗ ಪ್ರಪಂಚ ಎಲ್ಲಾ ಕಡೆ ದಾಪುಗಾಲಿನಿಂದ ಮುನ್ನಡೆಯುತ್ತಿರುತ್ತದೆ. ಆಗೆಲ್ಲಾ ಕಡೆಯಲ್ಲೂ ಕಂಪ್ಯೂಟರ್(ಮೆಕ್ಯಾನಿಕಲ್ ಮೆನ್)ರದ್ದೇ ಆಡ ಳಿತ. ಮನುಷ್ಯರು ಮಾಡುವ ಕೆಲಸಗಳನ್ನು ಒಂದು ಕಂಪ್ಯೂಟರ್ ಮಾಡುತ್ತದೆ. ಆಗ ಮನುಷ್ಯರೇನು ಮಾಡಬೇಕು? ಬರೇ ಶ್ರಮ ಜೀವಿಗಳೇ ಅಲ್ಲ, ಲಕ್ಷಾಂತರ ಗುಮಾಸ್ತರು ಅಕೌಂಟೆಂಟರು ಮ್ಯಾನೇಜರುಗಳು ನಿರುದ್ಯೋಗಿ ಗಳಾಗುತ್ತಾರೆ. ಆಗ, ನೀವೆಲ್ಲ ಏನು ಮಾಡು ತ್ತೀರಿ? ಆಲೋಚಿಸಿ. ಈಗಿನಿಂದ ಸಿದ್ಧರಾಗಿ. ಆಗ ನೀವೆಲ್ಲ ಹೊಸ ಸಮಾಜ ನಿರ್ಮಾಣದಲ್ಲಿ ಕೈಹಾಕಬೇಕಾಗುತ್ತದೆ. ಹಸಿವಿನಿಂದ ನಿರುದ್ಯೋ ಗದಿಂದ, ಶೋಷಣೆಯಿಂದ, ಮೇಲು ಕೀಳೆಂಬ ಅಸಮಾನತೆಯಿಂದ ದಾರಿದ್ರ್ಯ, ರೋಗ, ಮೌಢ್ಯಗ ಳಿಂದ ದೂರ ಅತೀ ದೂರವಾದ ಸ್ವರ್ಗಕ್ಕೆ ಹತ್ತಿರ ವಾದ ಹೊಸ ಸಮಾಜ ನಿರ್ಮಾಣ ಮಾಡಬೇ ಕಾಗುತ್ತೆ. ಇಡೀ ಮನುಷ್ಯ ವರ್ಗದಲ್ಲಿ ವರ್ಣಭೇದ ವಿಲ್ಲದ, ವರ್ಗಭೇದವಿಲ್ಲದ, ಮತಭೇದವಿಲ್ಲದ, ಹೊಚ್ಚ ಹೊಸ ಸಮಾಜ ಕಟ್ಟಬೇಕಾಗುತ್ತದೆ. ಆ ಸಮಾಜದಲ್ಲಿ ಜೇಲುಗಳಿರುವದಿಲ್ಲ, ಅರಮನೆಗಳು ಮ್ಯೂಜಿಯಂಗಳಾಗುತ್ತವೆ. ದೇವಸ್ಥಾನಗಳು, ಮಸೀದೆಗಳು, ಚರ್ಚುಗಳು ವಿದ್ಯಾಲಯ ಸಭಾ ಮಂದಿರಗಳಾಗುತ್ತವೆ. ಮಾನವನೆಂಬ ಹೊಸ ನಿಜವಾದ ದೇವತೆಯ ಪ್ರತಿಷ್ಠಾಪನೆ, ಉಪಾಸನೆ ಯಾಗುತ್ತದೆ. ಅಲ್ಲಿ ಇಡೀ ಮಾನವ ವರ್ಗ ಒಂದು ಜಾತಿ, ಒಂದು ಪಂಗಡ, ಒಂದು ದಳ ಆಗುತ್ತದೆ. ಯಾರೊಂದಿಗೂ ಪೈಪೋಟಿ ಯುದ್ಧ ಗಳಿರುವುದಿಲ್ಲ. ವಿಜ್ಞಾನ ಸಾಹಿತ್ಯಗಳ ಸಮನ್ವಯ ವಾಗಿ, ಆ ತಳಹದಿಯ ಮೇಲೆ ಹೊಸದೊಂದು ಸಂಸ್ಕೃತಿ ಹುಟ್ಟಿಕೊಳ್ಳುತ್ತದೆ. ಆ ಮುನ್ನಡೆ-ಯುತ್ತಿರುವ ಹೊಸ ಮಾನವ ಪೀಳಿಗೆಯವರ ಪಂಕ್ತಿಯಲ್ಲಿ ಸೇರಿಕೊಳ್ಳಲು ನೀವೆಲ್ಲ ದಾಪು ಗಾಲಲ್ಲಿ ದೈತ್ಯ ಹೆಜ್ಜೆಯಲ್ಲಿ ನಾಗಾಲೋಟದಿಂದ ಓಡಿ ಸೇರಿಕೊಳ್ಳಬೇಕಾಗುತ್ತದೆ.

ಸಿದ್ಧರಾಗಿ, ಬಿಟ್ಟುಬಿಡಿ ಈಗಿನ ನಿಮ್ಮ ಹವ್ಯಾಸ ಗಳನ್ನ, ನಿಮ್ಮ ಮೋಹಗಳನ್ನ! ನಾಡಿನ ಪ್ರೇಮ ಇರಲಿ, ಭಾಷಾ ಪ್ರೇಮ ಇರಲಿ, ಆದರೆ ಅದರದರ ಇತಿಮಿತಿಯಲ್ಲಿ. ಆದರೆ ಜೊತೆಗೆ ಮಾನವ ಪ್ರೇಮ ಮಾತ್ರ ಅಮಿತವಾಗಿರಲಿ! ಇಡೀ ಮನುಷ್ಯವರ್ಗದ ಏಳಿಗೆಗಾಗಿ, ಸದ್ಯಕ್ಕೆ ನಿಮ್ಮ ಹಳ್ಳಿಯ, ನಿಮ್ಮ ಸಣ್ಣ ಜಾಗೆಯ, ವರ್ಗದ, ಭಾಷೆಯ ಕಡೆ ಇರುವ ಆವೇಶ ಅಭಿಮಾನಗಳನ್ನು ತಡೆದಿಟ್ಟುಕೊಂಡು, ಬೇರೆಲ್ಲ ಮನುಷ್ಯ ವರ್ಗ ದೊಂದಿಗೆ ಹೆಜ್ಜೆ ಸೇರಿಸಿ, ಭಾವ ಸೇರಿಸಿ, ದನಿ ಸೇರಿಸಿ ಮುನ್ನಡೆಯಿರಿ.

ಈಗಿರುವ ಪ್ರಪಂಚ ನಿಮ್ಮದು, ನಿಮ್ಮ ಮುಂದಿನ ಸಂತತಿಯದ್ದು. ಅದನ್ನೇ ಸ್ವರ್ಗ ಮಾಡಿಕೊಳ್ಳುವುದು ನಿಮ್ಮ ಕೈಯಲ್ಲಿದೆ. ಅದನ್ನು ಹಾಳು ಮಾಡಲು, ಧೂಳೀಪಟ ಮಾಡಲು ಯಾವ ಹುಚ್ಚನಿಗೂ ಅವಕಾಶ ಕೊಡಬೇಡಿ. ಎಲ್ಲರೊಂದಿಗೆ ದನಿ ಸೇರಿಸಿ ತಡೆಯಿರಿ ಆ ಗುಂಡಿ ಯೊತ್ತಲಿರುವ ರಾಕ್ಷಸನನ್ನು. ✡



ಸಕಲೈಶ್ವರ್ಯವುಳ್ಳ ಮಿತ್ರನಿಗೆ ಕೊಡಮು ಉತ್ತಮ ಕಾಣಿಕೆಯೇನು ಗೊತ್ತೆ?— ಕಳ್ಳರ ಗಂಟೆ.



# ಇರುವೆ ಸಾಲು

ನಾ ಮುಂದೆ   ತಾ ಮುಂದೆ,
ಎಲ್ಲರೂ ಮುಂದೆ ಮುಂದೆ,
ನೀವೆಲ್ಲಾ ಕುರಿಮಂದೆ
ನಾ ಮುಂದೆ ನೀ ಹಿಂದೆ,
ನೀ ಮುಂದೆ ನಾ ಹಿಂದೆ,
ನಾವಲ್ಲ ಕುರಿಮಂದೆ।

ಬೊಂಬಾಯಿ ರೈಲು ನಿಲ್ದಾಣದಲ್ಲಿ ಮೊದಲ ಸಲ ಇಳಿದಾಗ ಉಸಿರು ಕಟ್ಟುತ್ತೋ, ತಲೆ ಚಿಟ್ಟು ಹಿಡಿಯುತ್ತೋ, ಚೀಲ ಕೈ ತಪ್ಪುತ್ತೋ, ಜೇಬೇ ಕತ್ತರಿಸುತ್ತೋ, ಇನ್ನೂ ಏನೇನಾಗುತ್ತೋ ಹೇಳಲು ಬರೊಲ್ಲ. ತೀರ ಹೊಸಬರಾದರೆ ಎಲ್ಲವೂ ಆಗಬಹುದು. ಇಲ್ಲವೆ ಆಗುವ ಹೆದರಿಕೆಯಾದರೂ ಆಗಬಹುದು. ಸಣ್ಣ ಮಕ್ಕಳಾಗಿದ್ದಾಗ ಉಗಿಬಂಡಿ ಹೇಗೆ ಓಡುತ್ತೆ ಅನ್ನುವ ಪ್ರಶ್ನೆಗೆ 'ಉಗಿ ಉಗುಳುತ್ತಾ ಓಡುತ್ತೆ' ಎಂದು ಉತ್ತರ ಕಲಿತಿದ್ದೆವು, ಬೊಂಬಾಯಿಗೆ ಬಂದಮೇಲೆ ವಿದ್ಯುತ್ ಬಂಡಿ ಹೇಗೆ ಓಡುತ್ತೆ ಎನ್ನುವುದಕ್ಕೆ ಉತ್ತರ ತಿಳೀತು— ಈ ರೈಲು ಬಂಡಿ ಜನಗಳನ್ನು ನುಂಗುತ್ತಲೇ ನಿಲ್ಲುತ್ತೆ, ಉಗುಳುತ್ತಲೇ ಓಡುತ್ತೆ. ಜನಗಳ ಹಿಂಡು ರೈಲು ಬಂಡಿಯಿಂದ, ನಿಲ್ದಾಣದಿಂದ, ಜೊಂಡು ಜೊಂಡಾಗಿ ಹೊರಬರುವುದನ್ನು ನೋಡಿದರೆ ಕಣಿವೆಯಿಂದ ರಭಸವಾಗಿ ಹರಿದು ಬರುವ ನದಿಯ ಪ್ರವಾಹದಂತೆ, ಇಲ್ಲವೆ ಇರುವೆ ಗುಡ್ಡದಿಂದ ಹೊರಬರುವ ಇರುವೆ ಗುಂಪಿನಂತೆ, ಕಾಣುತ್ತದೆ.

ರೈಲಿನಿಂದ ಇಳಿದ ತಕ್ಷಣವೇ ಇರುವೆ ಸಾಲು ಶುರುವಾಗುತ್ತೆ ಅನ್ನಬಹುದು. ರೈಲು ನಿಲ್ದಾಣದಲ್ಲಿ ಒಂದೊಂದು ಹೆಜ್ಜೆಯನ್ನೂ ಮುಂದಿನವ ಹೆಜ್ಜೆಯೆತ್ತಿದ ಮೇಲೇ ಇಡಬೇಕು. ಮುಂದಿನವನ ಕಾಲಿಗೆ ಕಾಲು, ಅವನ ಬೆನ್ನಿಗೆ ಹೊಟ್ಟೆ, ಅವನ ತಲೆಯ ಜುಟ್ಟಿಗೆ ಮುಖ ಹತ್ತಿಸಿಕೊಂಡು, ಹೆಜ್ಜೆಗೆ ಹೆಜ್ಜೆ ಜೋಡಿಸುತ್ತಾ, ತಡವರಿಸಿಕೊಂಡು ನಡೆಯುತ್ತಿದ್ದರೆ ಇರುವೆ ಸಾಲಿನಲ್ಲಿ ಓಡುತ್ತಿರುವ ಇರುವೆಯಂತೆ ಭಾಸವಾಗುತ್ತದೆ. ಬೊಂಬಾಯಿನ ರೈಲು ನಿಲ್ದಾಣದಲ್ಲಿ ಮೊದಲು ಕಾಲಿಟ್ಟಾಗ ಶುರುವಾದ ಇರುವೆ ಸಾಲು ಪ್ರತಿಕ್ಷಣವೂ ಅನುಭವಕ್ಕೆ ಬರುತ್ತಲೇ ಇರುತ್ತದೆ. ಇರುವೆ ಸಾಲಿನಲ್ಲಿ ಕಾಲು ತುಳಿಸಿಕೊಳ್ಳುತ್ತಾ, ಸುಗಂಧ-ಬೆವರು ಬೆರೆತ ವಾಸನೆ ಹೀರುತ್ತಾ, ಬೆವರುತ್ತಾ ಹೊರಗೆ ಬಂದರೆ ಒಂದ್ನಿಮಿಷ ತಂಗಾಳಿ ಇಲ್ಲದಿದ್ದರೂ, ಹೊರ ಬಿಸಿ ಗಾಳಿಯಾದರೂ ಬೀಸಿ

---

**ಕೆ. ಚಂದ್ರಮೌಳಿ**

---

ನಿಟ್ಟುಸಿರು ಬಿಡುತ್ತೀರಿ— ಆದರೆ, ಒಂದೇ ನಿಮಿಷ. ಆ ನಂತರ ಬಸ್ಸು, ಆಟೋ, ಟ್ಯಾಕ್ಸಿ ಏನು ಹಿಡಿಯಲು ಹೊರಟರೂ ಮತ್ತೆ ಇರುವೆ ಸಾಲಿನಂತೆ ಕ್ಯೂ ನಿಲ್ಲಲೇಬೇಕು. ಯಾವನೋ ಒಬ್ಬ ಸಾಲು ಬಿಟ್ಟು ಮುಂದೋಡಿದರೆ ಮಿಕ್ಕವರೆಲ್ಲಾ ಕೂಗಿ, ಹಾಹಾಕಾರವೆಬ್ಬಿಸಿ, ಅವನನ್ನು ಹಿಂದಕ್ಕಟ್ಟುತ್ತಾರೆ. ಹಾಗೆ ನೋಡಿದರೆ, ಇರುವೆ ಸಾಲಿನ ಶಿಸ್ತು ಪರಿಪಾಲನೆ ಇಲ್ಲಿ ಚೆನ್ನಾಗೇ ನಡೆಯುತ್ತದೆ.

ವಿಮಾನದಿಂದ ಇಳಿಯುವಾಗ ಆಕಾಶದಿಂದಲೇ ನಿಮಗೆ ಇರುವೆ ಸಾಲಿನ ಪರಿಚಯವಾಗುತ್ತದೆ. ಹಾಗೆ ಮೇಲಿನಿಂದ ನೋಡಿದಾಗ ಇಡೀ ಬೊಂಬಾಯಿ ನಗರವೇ ಒಂದು ಇರುವೆ ಸಾಲಿನಂತೆ ಕಾಣಿಸುತ್ತದೆ— ಸಾಲು ಸಾಲಾಗಿ ಕಡ್ಡಿಪೆಟ್ಟಿಗೆ ಜೋಡಿಸಿದಂತಿರುವ ಕಟ್ಟಡಗಳು, ಸಾಲು ಸಾಲಾಗಿ ರಸ್ತೆಯ ಮೇಲೆ ಓಡಾಡುವ ಬಸ್ಸು, ಕಾರುಗಳು,



ಸಾಲು ಸಾಲಾಗಿ ಒಂದರ ಹಿಂದೆ ಒಂದು ಎಡೆಬಿಡದೆ ಓಡುತ್ತಿರುವ ಲೋಕಲ್ ಟ್ರೇನಿನ ಡಬ್ಬಗಳು— ಒಟ್ಟಿನಲ್ಲಿ ಮೇಲಿನಿಂದ ಕಾಣುವ ದಿಗ್ದರ್ಶನ ಇರುವೆ ಸಾಲುಗಳದ್ದು! ಜಾಗ ಸಾಲದ್ದೆಂತ ಗಗನ ಚುಂಬಿ ಕಟ್ಟಡಗಳನ್ನೇನೊ ಕಟ್ಟಿಸುತ್ತಾರೆ. ಆದರೆ ಮೇಲೆ ಹತ್ತಿದವರೆಲ್ಲಾ ಕೆಳಗಿಳಿಯಲೇಬೇಕಲ್ಲ. ಕೆಳಗಿಳಿದು ರಸ್ತೆಗೆ ಬಂದಾಗ ಅಲ್ಲಿ ಜನ, ಆಟೋ, ಬಸ್, ಟ್ಯಾಕ್ಸಿ, ಕಾರುಗಳ ಗಜಿಬಿಜಿಯಲ್ಲಿ ಓಡಾಡಲು ಕಿಂಚಿತ್ತೂ ಜಾಗವಿಲ್ಲದೆ ರಸ್ತೆಗಳಲ್ಲೆಲ್ಲಾ ಬಿಕ್ಕಟ್ಟೋ ಬಿಕ್ಕಟ್ಟು— ಟ್ರಾಫಿಕ್ ಜಾಮ್! ಟ್ರಾಫಿಕ್ ಜಾಮ್ ಆದಾಗ ಕಾರು ಬಸ್ಸುಗಳ ಸಾಲು ಇರುವೆ ಸಾಲಿನಂತೆಯೇ ಒಂದಕ್ಕೊಂದು ಕಚ್ಚಿಕೊಂಡು ಹೋಗುತ್ತವೆ. ಇಷ್ಟು ಎತ್ತರದ ಕಟ್ಟಡಗಳನ್ನು ಕಟ್ಟಿದವರು ರಸ್ತೆಗಳನ್ನೂ ಎಂಟು ಹತ್ತು ಹಂತಗಳಲ್ಲಿ ಕಟ್ಟಿದ್ದರೆ. ಎಲ್ಲರೂ ವಿವಿಧ ಹಂತಗಳ ರಸ್ತೆಗಳಲ್ಲೇ ಓಡಾಡಬಹುದಿತ್ತಲ್ಲ. ಅರ್ಧಕ್ಕಿಂತಲೂ ಹೆಚ್ಚು ಜನ ಗಾಳಿಯಲ್ಲಿ ಓಡಾಡಬಹುದಿತ್ತಲ್ಲಾ, ಅವರಿಗೆಲ್ಲಾ ನೆಲದ ರಸ್ತೆಗೆ ಇಳಿಯುವ ಅವಶ್ಯಕತೆಯೇ ಇರುತ್ತಿರಲಿಲ್ಲವಲ್ಲ, ಎಂದು ಇರುವೆ ಸಾಲಿನಂತೆ ಯೋಚನೆಯ ಸಾಲೂ ಬಂತು. ಏನು ಬಂದರೇನು, ಬೊಂಬಾಯಿ ಜನ ಆಕಾಶದಲ್ಲೂ ಇರುವೆ ಸಾಲು ನಿಲ್ಲಿಸುತ್ತಾರೆ.

ಇರುವೆ ಸಾಲಿನಂತೆ ನಿಲ್ಲುವುದು ಬೊಂಬಾಯಿನ ನೆಲದ ಗುಣ ಅನ್ನಿಸುತ್ತದೆ. ಒಂದೊಂದು ಜಾಗಕ್ಕೆ ಒಂದೊಂದು ವಿಶಿಷ್ಟ ಗುಣ ಅಂಟಿಕೊಂಡಿರುತ್ತದೆ, ಆ ಗುಣಕ್ಕೆ ಅಲ್ಲಿಯ ನೆಲದ ಪ್ರಭಾವವೇ ಕಾರಣವಾದ್ದರಿಂದ, ಆ ವಿಶಿಷ್ಟ ಗುಣವನ್ನೂ ನೆಲದ ಗುಣವೆಂದೇ ಕರೆಯುವುದು ವಾಡಿಕೆ. ಉದಾಹರಣೆಗೆ, ಮೀರತಿನ ನೆಲದ ಗುಣ ಒರಟುತನ. ಚೋಟಾನಾಗಪುರದ ಗುಣ ಕಾಮುಕತೆ, ಅಹಮಾದಾಬಾದಿನ ನೆಲದ ಗುಣ ವ್ಯವಹಾರ ಬುದ್ಧಿ, ಧಾರವಾಡದ ನೆಲದ ಗುಣ ಕವಿತ್ವ, ಲೂಧಿಯಾನದ್ದು ನಕಲೀತನ... ಇದೇ ರೀತಿ ಬೊಂಬಾಯಿನ ನೆಲದ ಗುಣ ಇರುವೆ ಸಾಲು. ಅದಕ್ಕೇ, ಇಡೀ ಬೊಂಬಾಯಿನ ನೆಲವೇ ಕ್ಯೂನಂತೆ ಉದ್ದುದ್ದಕ್ಕೇ ಬೆಳೆದುಕೊಂಡಿದೆ. ಇಲ್ಲಿ ಏನೇ ಬೇಕಾದರೂ ಮೊದಲು ಇರುವೆ ಸಾಲಿನಂತೆ



ನಿಂತುಬಿಡಬೇಕು. ಈ ಇರುವೆ ಸಾಲು ಬರೀ ಬಸ್, ರೇಷನ್ ಅಂಗಡಿ, ಸಕ್ಕರೆ, ಸೀಮೆ ಎಣ್ಣೆಗೇ ಸೀಮಿತವಾಗಿಲ್ಲ, ಎಲ್ಲಾ ಕಡೆಯೂ ಸಾಲೇ ಸಾಲು. ಅಮೇರಿಕಕ್ಕೆ ಹೋಗಲು ವಿಸಾಕ್ಕ್ಯೋಸ್ಕರ ನನ್ನ ಸ್ನೇಹಿತ ಇರುವೆ ಸಾಲಿನಲ್ಲಿ ಐದು ಗಂಟೆ ಕಾಲ ನಿಂತಿದ್ದ. ಇರುವೆ ಸಾಲಿನಿಂದ



ರೊಚ್ಚಿಗೆದ್ದ ಇನ್ನೊಬ್ಬ ಬೆಳಿಗ್ಗೆ ನಾಲ್ಕುಗಂಟೆಗೇ ವಿಸಾಕ್ಕ್ಯೋಸ್ಕರ ಕಾದು ನಿಂತನಂತೆ. "ಅಲ್ ಕಣಯ್ಯ, ಎಂಟು ಗಂಟೇವರೆಗೂ ನಿದ್ದೇನು ಕೆಟ್ಟು ಕಾಯಬೇಕಾಯ್ತಲ್ಲಯ್ಯ!" ಅಂದಾಗ, ಅವನು ವಿಜಯೋತ್ಸಾಹದಿಂದ ನಕ್ಕು "ಆದ್ರೇನು, ಆ ಇರುವೆ ಸಾಲಿನಲ್ಲಿ ಇನ್ನೊಬ್ಬರ ಬೆನ್ನು ನೋಡ್ತಾ ನಿಲ್ಲೋದು ತಪ್ಪಿಸಿಕೊಂಡೆನೋ ಇಲ್ಲವೋ, ಅದು ಮುಖ್ಯ" ಎಂದು ಹೇಳಿದ. ಇದೇ ರೀತಿ ಮದುವೆ ಮನೆಯ ಬೂಫೆ ಊಟಕ್ಕೆ ನಿಂತರೂ ಇರುವೆ ಸಾಲು, ವಿಮಾನ ಅಥವಾ ರೈಲು ತಿಕೇಟಿಗೆ ನಿಂತರೂ ಸಾಲು, ಶಾಲೆಗೆ ಮಕ್ಕಳ ಪ್ರವೇಶಕ್ಕೆ ಹೊರಟರೂ ಅಷ್ಟೆ, ಮಸಣಕ್ಕೆ ಮಣ್ಣು ಮಾಡಲು ಹೊರಟರೂ ಅಷ್ಟೆ, ಎಲ್ಲೆಲ್ಲೂ ಇರುವೆ ಸಾಲಿನ ಅವಾಂತರವೇ ಅವಾಂತರ. ಬರೀ ಅವಾಂತರವಷ್ಟೇ ಅಲ್ಲ, ಬಸ್ ಕಂಡಕ್ಟರನಿಂದ ಹಿಡಿದು ಟೆಲಿಫೋನ್ ಇಲಾಖೆಯ ರೆಕಾರ್ಡ್‌ವರೆಗೆ ಎಲ್ಲೆಲ್ಲೂ "ಇರುವೆ ಸಾಲು ನಮಗೆ, ನಿಮಗೆ, ಎಲ್ಲರಿಗೂ ಒಳ್ಳೆಯದು. ಸಾಲಾಗಿ ನಿಲ್ಲಿರಿ" ಎನ್ನುವ ವ್ಯಾಖ್ಯಾನ ಬೇರೆ! ಈ ಅವಾಂತರವೇ ಬೇಡವೆಂದು ಸಿದ್ಧಿವಿನಾಯಕನ ಮಂದಿರಕ್ಕೆ ಹೋದರೂ ಅಲ್ಲಿ ಕೇವಲ ಒಂದೂವರೆ ಮೈಲಿಯಷ್ಟು ಸಾಲು! ಹಾ! ಅಂದಹಾಗೆ ಒಂದು ಕಡೆ ಮಾತ್ರ ಇರುವೆ ಸಾಲಿಲ್ಲ ಅಂತ ಕೇಳಿ ಆಶ್ಚರ್ಯ ಪಡಬೇಡಿ. ಕುಟುಂಬ ಯೋಜನೆಯ ಶಿಬಿರದಲ್ಲಿ ಮಾತ್ರ ಇರುವೆ ಸಾಲಿರಲಿ. ನೊಣ ಹೊಡೆಯಲೂ ನಾಲ್ಕು ಜನ ಇರುವುದಿಲ್ಲ.



ದೊಡ್ಡ ಗಗನಚುಂಬಿ ಕಟ್ಟಡದ ಪಕ್ಕವೇ ಕೊಳಚೆ ಪ್ರದೇಶದ ಗುಡಿಸಲುಗಳಿರುವುದು ಮುಂಬಯಿಯ ಒಂದು ವೈಚಿತ್ರ್ಯ. ನಿದ್ದೆಯೊಂದು ಬಿಟ್ಟು ಅವರ ದಿನನಿತ್ಯದ ಕಾರುಭಾರೆಲ್ಲಾ ಹೊರಗಡೆಯೇ. ರೈಲ್ವೇ ಹಳಿಯ ಪಕ್ಕದಲ್ಲಿ ಚೆಂಬುಹಿಡಿದು ಕೂರುವುದು, ಒಡಕಲು ಪೈಪಿನ ಕೆಳಗೆ ಮುಖ ತೊಳೆಯುವುದು, ಇತ್ಯಾದಿ ಎಲ್ಲವೂ ನೀಲಾಕಾಶದ ಕೆಳಗೆಯೇ, ದೇಶಾವಿಶಾಲವಾದ ಜಾಗದಲ್ಲಿಯೇ ನಡೆಯುತ್ತದೆ. ಹೀಗಿರುವಾಗ, ಮೊನ್ನೆ ನಮ್ಮ ಹದಿನೈದನೇ ಮಹಡಿಯಿಂದ ಕೆಳಗೆ ನೋಡಿದರೆ, ಅಲ್ಲಿಯ ಕೊಳಚೆ ಪ್ರದೇಶದವರೆಲ್ಲಾ ಬೆಳಗಾಗೆದ್ದು ಇರುವೆ ಸಾಲಿನಂತೆ ಸಾಲುಗಟ್ಟಿ ನಿಂತಿದ್ದನ್ನು ನೋಡಿ ಆಶ್ಚರ್ಯವಾಯಿತು. 'ಇಷ್ಟು ಮುಂಚೆ, ಅದ್ಯಾವ ರೇಷನ್ ಅಂಗಡಿಯ ಮುಂದೆ ಕ್ಯೂ?' ಎಂದು ಯೋಚಿಸಿದೆ. ಆ ಇರುವೆಸಾಲು ಕೈಯಲ್ಲಿ ಡಬ್ಬವನ್ನು ಹಿಡಿದು ನಿಂತದ್ದು ಸೀಮೆ ಎಣ್ಣೆಗಲ್ಲ, ಸಕ್ಕರೆಗಲ್ಲ, ಸಿನೆಮಾ ಟಿಕೆಟ್‌ಗಲ್ಲ, ಹೊಸದಾಗಿ ಕಟ್ಟಿದ್ದ ಸಾರ್ವಜನಿಕ ಶೌಚಾಲಯಕ್ಕೆ ಹೋಗಲು! ಸೀಮೆ ಎಣ್ಣೆಗೆ, ಬಸ್ಸಿಗೆ, ಸಕ್ಕರೆಗೆ ಕ್ಯೂ ನಿಂತು ಗಂಟೆಗಟ್ಟಲೆ ಕಾಯುದೆ ನಿಲ್ಲುವುದು ವಿಧಿಯಿಲ್ಲ, ಸುಲಭ. ಆದರೆ, ಬೆಳಗಾಗೆದ್ದು ರಘಾಡಿಸಿಕೊಂಡು ಬರುವ ಹೊಟ್ಟೆಯ ಒತ್ತಡವನ್ನು ಎಡಗೈಯಲ್ಲಿ ಅದುಮಿ, ಬಲಗೈಯಲ್ಲಿ ಡಬ್ಬ ಹಿಡಿದು, ತನ್ನ ಸರದಿಗಾಗಿ ಕೆಟ್ಟವಾಸನೆ ಕುಡಿಯುತ್ತಾ ಕಾಯುವುದೆಂದರೆ... ಅಬ್ಬ!! ಬೊಂಬಾಯಿ ಇರುವೆ ಸಾಲಿನ ಶಿಸ್ತಿಗೆ ಎಂತಹವರಾದರೂ ತಲೆಬಾಗಿಸಬೇಕು, ಹೊಟ್ಟೆಯನ್ನೂ ಬಗ್ಗಿಸಬೇಕು, ಮೂಗಿನ ಮೇಲೆ ಬೆರಳೇಕೆ ಕೈಯ್ಯನ್ನೇ ಇಡಬೇಕು!!

ಅಂತೂ ಇರುವೆ ಸಾಲಿನ ಪ್ರಭಾವ ಕೊಳಚೆ ಪ್ರದೇಶದವರಿಗೂ ಇದೆ, ಮಧ್ಯಮ ತರಗತಿಯವರಿಗೂ ಇದೆ. ಈ ಇರುವೆಸಾಲಿನ ಶಿಸ್ತಿನಿಂದ ಪಾರಾದವರೆಂದರೆ ಶ್ರೀಮಂತರೊಬ್ಬರೇ. ಅವರು ಯಾವುದಕ್ಕೂ ಕ್ಯೂ ನಿಲ್ಲಬೇಕಿಲ್ಲ. ಒಂದು ವೇಳೆ ಎಲ್ಲಾದರೂ ನಿಲ್ಲಲೇಬೇಕಾದರೆ, ಅವರ ಬದಲಾಗಿ ಬೇರೆ ಯಾರಾದರೂ ನಿಂತು ಇವರಿಗೆ ಕ್ಯೂನ ಅವಾಂತರ, ತಲೆನೋವನ್ನು ತಪ್ಪಿಸುತ್ತಾರೆ. ನನ್ನ ಈ ಅಭಿಪ್ರಾಯ ತಿಳಿದ ಶ್ರೀಮಂತ ಸ್ನೇಹಿತರೊಬ್ಬರು ರೇಗಿದರು. "ಥತ್, ಈ ಮಿಡಲ್ ಕ್ಲಾಸ್ ಜನ ಇದ್ದಲ್ಲೆಲ್ಲಾ ಮೀಡಿಯೋಕರ್ ವಿಚಾರಗಳೇ ಬರುತ್ತವೆ! ಹಾಳು ಜನರು" ಅಂದರು. ಏನಾಯ್ತು ಸರ್, ಅಂದೆ. ರೇಸ್ ಕ್ಲಬ್‌ನ ಹೊಸ ಕಾರ್ಯದರ್ಶಿ ಅಂತಾನಂತೆ "ಕುದರೆ ರೇಸ್‌ಗೆ ಯಾಕಿಷ್ಟು ಗಲಾಟೆ ಸಾರ್? ಒಂದರ ಹಿಂದೆ ಒಂದು ಕುದುರೆಯನ್ನು ಇರುವೆ ಸಾಲಿನಂತೆ ಸಾಲಾಗಿ ಬಿಟ್ಟರೆ ಸರಿ ಸಾರ್" ಅಂತ. "ಅವನೊಬ್ಬ ಮೂಢ, ಮುಠ್ಠಾಳ!" ಎಂದು ಇನ್ನೂ ರೇಗಿದರು. ಅವರ ಸಿಟ್ಟು ನೋಡಿ ಇರುವೆ ಸಾಲಿನ ಶಿಸ್ತು ಎಷ್ಟು ವಿಪರೀತಕ್ಕೆ ಹೋಗಬಹುದು ಅಂದುಕೊಂಡೆ.

ನನ್ನ ಲಕನೋ ಸ್ನೇಹಿತ ಒಬ್ಬ ರಸಿಕಲಾಲ. ಪ್ರತಿ ಶನಿವಾರ ರಾತ್ರಿಯೂ ಅವನು ಮೆಹಫಿಲ್, ಮುಷಾಯಿರಾ, ಮುಜಿರಕ್ಕಾಗಿ ಹೊರಹೋಗಲೇಬೇಕು. ಮೊನ್ನೆ ಅವನು ಬೊಂಬಾಯಿಗೆ ಬಂದು ಇಲ್ಲಿಯ ಕೆಂಪುದೀಪದ ಮನೆಯೊಂದಕ್ಕೆ ಹೋಗಿ ಅರ್ಧಗಂಟೆಯಲ್ಲೇ ವಾಪಸ್ಸು ಬಂದ. ಯಾಕ್ಕೇ, ಏನಾಯ್ತೋ, ಅಂದೆ. "ಥತ್, ನೀವು ಹಾಳು ಬೊಂಬಾಯಿ ಮಂದಿ, ಅಲ್ಲೂ ಕ್ಯೂ ನಿಲ್ಲಿಸಿ, ನಿಮ್ಮ ಸರದಿಗೆ ಕಾಯಿರಿ ಅಂತೀರಿ. ಅದ್ಕೇ ಓಡಿ ಬಂದೆ" ಅಂದ. "ಒಟ್ಟಿನಲ್ಲಿ ಬೊಂಬಾಯಿ ಹಾಳಾಯ್ತು. ಶ್ರೀಮಂತರೇನು, ಬಡವರೇನು, ಎಲ್ಲರೂ ಇರುವೆ ಸಾಲಿನಲ್ಲಿ ನಿಂತು ಬಯ್ಯಲೇ ಬೇಕು" ಎಂದು ಬೈದ. ಹೀಗೆ, ಬಡವ ಬಲ್ಲಿದ ಅನ್ನದೆ ಇರುವೆ ಸಾಲಿನ ಶಿಸ್ತು ಇಲ್ಲಿ ಎಲ್ಲರಿಗೂ ಅನ್ವಯಿಸುತ್ತದೆ. ಲಕನೋದವ ಆಪ್ ಪಹಿಲೆ, ಆಪ್ ಪಹಿಲೆ ಅನ್ನುತ್ತಿದ್ದಾಗ ಬೊಂಬಾಯಿನವ ಇರುವೆ ಸಾಲಿನ ಬಗ್ಗೆ ಹೇಳಿದ ಶಾಹಿರಿಯನ್ನು ಕೇಳಿ—

**ನಾ ಮುಂದೆ ನೀ ಹಿಂದೆ,**
**ನೀ ಸಾಲೊಡೆದು ಮುಂದೆ,**
**ಇಲ್ಲಿಗೇಕೆ ಬಂದೆ?**
**ನೀನೆಲ್ಲಿಂದ ಬಂದೆ,**
**ನೀ ನಡಿ ಹಿಂದೆ ಹಿಂದೆ**
**ನಾವಲ್ಲ ಕುರಿ ಮಂದೆ!**

(ಕೃಪೆ: ಆಕಾಶವಾಣಿ ಮುಂಬಯಿ)

# ಇಸಡೋರಾ ಡಂಕನ್

## ಜಗತ್ತನ್ನೇ ಕುಣಿಸಿದ ನೃತ್ಯಗಾತಿ

**ಮುನಿಯಾಲ್ ಗಣೇಶ ಶೆಣೈ**

ಸಂಗೀತ, ಸಾಹಿತ್ಯ, ಚಿತ್ರ ರಚನೆಗಳಂತೆ ನೃತ್ಯವೂ ಒಂದು ಅಭಿವ್ಯಕ್ತಿ ಮಾಧ್ಯಮ. ಒಬ್ಬ ಕಲಾವಿದ ತನ್ನ ಅನುಭವಗಳನ್ನು, ಅನಿಸಿಕೆಗಳನ್ನು ಹೊರ ಜಗತ್ತಿಗೆ ಕಾಣಿಸುವ ಪ್ರಯತ್ನಗಳಲ್ಲಿ ನೃತ್ಯವೂ ಒಂದು. ಬೇರೆ ಬೇರೆ ದೇಶಗಳಲ್ಲಿ ಬೇರೆ ಬೇರೆ ವಿಧದ ನೃತ್ಯ ಪ್ರಕಾರಗಳಿವೆ. ಕಾಲ ಕಾಲಕ್ಕೆ ಬದಲಾಗುತ್ತ, ಹಳೆಯದನ್ನು ಮರೆಯದೆ, ಹೊಸತನ್ನು ಮೈಗೂಡಿಸಿಕೊಂಡು ನೃತ್ಯ ಕಲೆ ಬೆಳೆಯುತ್ತಿದೆ. ಅಮೇರಿಕದಂತಹ ಕಾರು-ಟಿ.ವಿ. ಕಾರ್ಖಾನೆಗಳಂತಹ ನಿರ್ಜೀವ ವಸ್ತುಗಳ ದೇಶದಲ್ಲೂ ನೃತ್ಯ ಜನಪ್ರಿಯತೆ ಗಳಿಸಿದೆ. ಈ ಶತಮಾನದಲ್ಲಿ ಅಮೇರಿಕವನ್ನಷ್ಟೇ ಅಲ್ಲದೆ ಪ್ರಪಂಚವನ್ನೇ ತನ್ನ ನೃತ್ಯದಿಂದ ಬೆರಗುಗೊಳಿಸಿದಾಕೆ ಇಸಡೋರಾ ಡಂಕನ್. ಸಮಕಾಲೀನ ಪಾಶ್ಚಾತ್ಯ ನೃತ್ಯದ ಮೇಲೆ ಇಸಡೋರಾ ಗಾಢವಾದ ಪ್ರಭಾವ ಬೀರಿದ್ದಾಳೆ.

ಇಸಡೋರಾ ಹುಟ್ಟಿದ್ದು ೧೮೭೮ರಲ್ಲಿ ಅಮೇರಿಕದ ಸಾನ್ ಫ್ರಾನ್ಸಿಸ್ಕೋದಲ್ಲಿ. ಅವಳ ತಂದೆ ಪೋಲೀಸರ ಕಣ್ಣು ತಪ್ಪಿಸಿ ಓಡಾಡುತ್ತಿದ್ದ. ಕೊನೆಗೆ ಮನೆ ಬಿಟ್ಟು ಎಲ್ಲಿಗೋ ಹೊರಟ. ನಾಲ್ವರು ಮಕ್ಕಳಲ್ಲಿ ಇಸಡೋರಾಳೇ ಚಿಕ್ಕವಳು. ಬಡತನದ ದಿನಗಳಲ್ಲೇ ಬಾಲ್ಯ. ಮನುಷ್ಯರು ವಾಸಿಸಲಿಕ್ಕಾಗದಂತಹ ಮನೆಗಳಲ್ಲಿಯೇ ವಾಸ. ಬಾಡಿಗೆ ಕೊಡಲಿಕ್ಕಾಗದೆ ಆಗಾಗ ಮನೆಯನ್ನು ಬದಲಾಯಿಸಬೇಕಾಗುತ್ತಿತ್ತು. ತಾಯಿ ಪಿಯಾನೋ ಕಲಿಸುತ್ತಿದ್ದಳು; ಕೈಗ್ಲೌಸು, ಸ್ವೇಟರುಗಳನ್ನು ಹೆಣೆಯುತ್ತಿದ್ದಳು. ಮಕ್ಕಳು ಅವುಗಳನ್ನು ಮನೆ ಮನೆಗೆ ಹೋಗಿ ಮಾರಿ ಬರುತ್ತಿದ್ದರು. ಆದರೂ ಬರುತ್ತಿದ್ದ ಆದಾಯ ಬಲು ಕಡಿಮೆ.

ನೆಲದ ಮೇಲೆ ಮೊದಲ ಹೆಜ್ಜೆ ಇಡುವಾಗಲೇ ಇಸಡೋರಾಗೆ ನೃತ್ಯದ ಹುಚ್ಚು. ತೀರಾ ಪುಟ್ಟ ಹುಡುಗಿಯಾಗಿದ್ದಾಗಲೇ ಶಾಸ್ತ್ರೀಯ ನೃತ್ಯವನ್ನು ಕರಗತ ಮಾಡಿಕೊಂಡಿದ್ದಳಷ್ಟೇ ಅಲ್ಲ ಹತ್ತು ವರ್ಷದ ಹೊತ್ತಿಗೆ ಇಸಡೋರಾ ನೃತ್ಯ ತರಗತಿಗಳನ್ನು ನಡೆಸುತ್ತಿದ್ದಳು.

ಯೌವನಕ್ಕೆ ಕಾಲಿಟ್ಟ ಇಸಡೋರಾ ಒಬ್ಬ ಸುಂದರ ಯುವತಿಯಾದಳು. ದಿನ ನಿತ್ಯದ ಉಸಿರಾಟ, ಆಹಾರದಂತೆ ನೃತ್ಯವೂ ಅವಳ ಬದುಕಿನ ಅವಿಭಾಜ್ಯ ಅಂಗವಾಯಿತು. ಆದರೆ

ಶಾಸ್ತ್ರೀಯ ನೃತ್ಯದ ಕಠೋರವಾದ ನಿಯಮಗಳು ಅವಳಿಗೆ ಇಷ್ಟವಾಗಲಿಲ್ಲ; ಮೊಟ್ಟ ಮೊದಲ ಬಾರಿಗೆ ಬರಿಗಾಲಿನಲ್ಲಿ ನೃತ್ಯ ಮಾಡಿದ ಕೀರ್ತಿ ಅವಳದು. ಇದನ್ನು ನೋಡಿದ ಅಮೇರಿಕದ ನೃತ್ಯಪ್ರೇಮಿಗಳು ದಂಗಾದರು. ಜೊತೆಗೆ ಇಸಡೋರಾ ಬಲು ಬಿಗಿಯಾದ ಮೈ ತುಂಬಾ ಮುಚ್ಚುವ ಬಟ್ಟೆ ತೊಡದೆ ಹಗುರವಾದ, ಕಡಿಮೆ ಬಟ್ಟೆ ಧರಿಸಿ ನೃತ್ಯ ಮಾಡುತ್ತಿದ್ದಳು.



ಬ್ಯಾಲೆಯಂತಹ ಸಂಪ್ರದಾಯಬದ್ಧ ನೃತ್ಯಗಳನ್ನೇ ನೋಡುತ್ತಿದ್ದ ಅಮೇರಿಕನ್ನರಿಗೆ ಇಸಡೋರಾ ನೃತ್ಯದ ವಿವಿಧ ಪ್ರಕಾರಗಳನ್ನು ಪರಿಚಯಿಸಿದಳು. ಗ್ರೀಕ್ ಶಾಸ್ತ್ರೀಯ ನೃತ್ಯಗಳಿಂದ ಇಸಡೋರಾ ಸ್ಫೂರ್ತಿ ಹೊಂದಿದಳು. ತನ್ನದೇ ಆದ ಹೊಸ ಬಗೆಯ ಅಭಿವ್ಯಕ್ತಿ ನೃತ್ಯವನ್ನು (Interpretative Dance) ಆವಿಷ್ಕರಿಸಿದಳು. ಕಡಲ ಅಲೆಗಳು, ತೇಲುವ ಮೋಡ, ನದಿ ಸರೋವರಗಳಂತಹ ನಿಸರ್ಗ ಚಲನೆಗಳನ್ನಷ್ಟೇ ಅಲ್ಲ, ನಮ್ಮ ಮಾನಸಿಕ ಚಲನೆಗಳನ್ನೂ ನೃತ್ಯದ ಮೂಲಕ ಪ್ರದರ್ಶಿಸಿದಳು.

ಇಸಡೋರಾಳ ನೃತ್ಯಕ್ಕೆ ವಿಕ್ಟೋರಿಯಾ ರಾಣಿಯ ಮಗಳಾದ ಹೆಲೆನ್ ಮನಸೋತಳು. ಇಸಡೋರಾ ಬ್ರಿಟನ್ ಮತ್ತು ಯುರೋಪಿನ ಹಲವು ದೇಶಗಳಲ್ಲಿ ನೃತ್ಯ ಪ್ರದರ್ಶನ ನೀಡಿದಳು. ಆದರೆ ಸಂಪ್ರದಾಯಪ್ರಿಯ ಆಂಗ್ಲರು ಇಸಡೋರಾಳ ನೃತ್ಯವನ್ನು ಕೆಂಗಣ್ಣಿನಿಂದ ಕಂಡರು. ಒಬ್ಬ ವಿಮರ್ಶಕ ಉದ್ಗರಿಸಿದ: "ಇಸಡೋರಾ ಲಂಡನ್ನಿನಲ್ಲಿ ನರ್ತಿಸಲು ಹೋಗುತ್ತಿರುವ ಸಂಗತಿ ನಿಜಕ್ಕೂ ದುಃಖಕರ. ಏಕೆಂದರೆ ಇಂಗ್ಲೆಂಡಿನಲ್ಲಿ ಈಗ ಪೂರ್ಣವಾಗಿ ಶಾಂತಿ ನೆಲೆಸಿದೆ."

ಇಸಡೋರಾಳನ್ನು ಮೆಚ್ಚಿ ಮುಂದೆ ಬಂದವರ ಸಂಖ್ಯೆ ಅಪಾರ. ಜಗದ್ವಿಖ್ಯಾತ ಶಿಲ್ಪಿ ಆಗಸ್ಟ್ ರೋಡಿನ್ "ಆಕೆ ನಿಸರ್ಗದಿಂದಲೇ ಅಪಾರ ಮೇಧಾವಿ ಶಕ್ತಿಯನ್ನು ಪಡೆದ ಹೆಣ್ಣು" ಎಂದು ಚಿತ್ರಿಸಿದ.

ಇಸಡೋರಾ ಹಂಗೇರಿಗೆ ಹೋಗಿದ್ದಾಗ ಬುಡಾಪೆಸ್ಟಿನಲ್ಲಿ ಒಬ್ಬ ನಟನ ಜೊತೆ ಪ್ರೀತಿ ಬೆಳೆಯಿತು. ಆದರೆ ಸ್ವಲ್ಪ ಕಾಲದಲ್ಲೇ ಅವರು ಬೇರೆಯಾದರು. ಆಕೆ ಬಲ್ಗೇರಿಯಕ್ಕೆ ಹೋದಾಗ ಅಲ್ಲಿನ ಅರಸ ಫರ್ಡಿನಾಂಡ್ ತನ್ನ ಇಟಾಲಿಯನ್ ಅರಮನೆಯನ್ನೇ ಇಸಡೋರಾಗೆ ಕೊಟ್ಟ. ಜರ್ಮನಿಯ ವಿಮರ್ಶಕರು ಅಮಲು ಏರಿದವರ ಹಾಗೆ ಇಸಡೋರಾಳ ನರ್ತನವನ್ನು ಹೊಗಳಿ-

ದರು. 'ನೃತ್ಯದೇವತೆ' ಎಂದು ಕೊಂಡಾಡಿದರು. ಅವಳ ವಾಹನವನ್ನು ರಸ್ತೆಯಲ್ಲಿ ತಳ್ಳುತ್ತಾ ವಿದ್ಯಾರ್ಥಿಗಳು ಜಯಘೋಷ ಮಾಡಿದರು. ಹಣದ ಹೊಳೆಯೇ ಇಸಡೋರಾಳ ಕಾಲ ಬಳಿ ಹರಿಯಿತು. ಆದರೆ ಇಸಡೋರಾ ಎಂದೂ ಬಟ್ಟೆ, ಆಭರಣಗಳಿಗೆ ಆಸೆ ಪಡಲಿಲ್ಲ. ಜರ್ಮನಿಯಲ್ಲಿ ಅನಾಥರಿಗಾಗಿ ಒಂದು ಆಶ್ರಯ ಧಾಮವನ್ನು ಆರಂಭಿಸಿದಳು. ಯುರೋಪಿನಾದ್ಯಂತ ನೃತ್ಯಶಾಲೆಗಳನ್ನು ತೆರೆಸಿದಳು.

ಇಸಡೋರಾಳ ಬದುಕಿನಲ್ಲೇ ಆಕೆ ರಶಿಯದಲ್ಲಿ ನೀಡಿದ ನೃತ್ಯ ಕಾರ್ಯಕ್ರಮಗಳು ಅತ್ಯಂತ ವರ್ಣರಂಜಿತ. 'ಶಾಸ್ತ್ರೀಯ ನೃತ್ಯದ ತೊಟ್ಟಿಲು' ಎಂದು ಪ್ರಸಿದ್ಧವಾದ ರಶಿಯದಲ್ಲಿ ಇಸಡೋರಾಳ 'ನೇರ ಮಾತಿನ ನೃತ್ಯ' ಜನರ ಮನ ಗೆದ್ದಿತು. ಜಗತ್‌ಪ್ರಸಿದ್ಧ ಸಂಗೀತಗಾರರಾದ ಗ್ಲುಕ್, ಬೀಥೋವನ್ ಮತ್ತು ಚೋಪಿನ್‌ರ ಸಂಗೀತಕ್ಕೆ ಇಸಡೋರಾ ನರ್ತಿಸಿದಳು. ರಶಿಯದ ಬ್ಯಾಲೆ ರಾಣಿ ಅನ್ನಾ ಪಾವ್ಲೋವಾ ಸಹ ಇಸಡೋರಾಳ ನೃತ್ಯ ನೋಡಿದಳು. ಸೆರ್ಗೆಯ್ ದ್ಯೆಗಿಲೆವ್ ಉದ್ಗರಿಸಿದ. "ಇಸಡೋರಾಳಿಂದ ರಶಿಯದ ಶಾಸ್ತ್ರೀಯ ನೃತ್ಯ ಪರಂಪರೆ ಎಂದೆಂದಿಗೂ ಮೇಲೇಳಲಾಗದಂಥ ಪೆಟ್ಟು ತಿಂದಿತು!" ಅರಸ ಪೀಟರ್ ಲೀವೆನ್ "ಇಸಡೋರಾ ತನ್ನ ನರ್ತನದಲ್ಲಿ ಸಂಗೀತದ ಅರ್ಥವನ್ನು ಉಳಿಸಿಕೊಂಡಿದ್ದಾಳೆ. ಮೊಟ್ಟ ಮೊದಲ ಬಾರಿಗೆ ಸಂಗೀತಕ್ಕೆ ತಕ್ಕಂತೆ ನರ್ತಿಸದೆ, ಸಂಗೀತವನ್ನೇ ನರ್ತಿಸಿದ ನರ್ತಕಿ ಇವಳು" ಎಂದು ಹೊಗಳಿದ.

ಇಸಡೋರಾಳದು ಅಸ್ತವ್ಯಸ್ತ ಬದುಕಾಗಿತ್ತು. ಈ ಹಿಂದೆಯೇ ಒಂದು ಮಗುವಿಗೆ ಜನ್ಮ ನೀಡಿದ್ದ ಇಸಡೋರಾ, ಹೊಲಿಗೆ ಯಂತ್ರ ತಯಾರಿಕಾ ಸಂಸ್ಥೆಯ ಪ್ಯಾರಿಸ್ ಸಿಂಗರ್‌ನನ್ನು ಮೋಹಿಸಿದಳು. ಇವನಿಂದಲೂ ಅವಳಿಗೆ ಮಗುವಾಯಿತು. ಆದರೆ ಸಿಂಗರ್ ಆಗಲೇ ಬೇರೆ ಹೆಣ್ಣಿನೊಂದಿಗೆ ವಿವಾಹವಾಗಿದ್ದ.

ತನ್ನ ಇಬ್ಬರೂ ಮಕ್ಕಳನ್ನು ಇಸಡೋರಾ ಬಹುವಾಗಿ ಪ್ರೀತಿಸುತ್ತಿದ್ದಳು. ಒಮ್ಮೆ ಕಾರಿನಲ್ಲಿ ಬರುತ್ತಿರುವಾಗ ಅಪಘಾತಕ್ಕೀಡಾಗಿ ಮಕ್ಕಳಿಬ್ಬರೂ ಮರಣಹೊಂದಿದರು. ಆ ರಾತ್ರಿ ಮಕ್ಕಳ ಶವವನ್ನು ನೋಡುತ್ತ ತನ್ನ ನರ್ತನ ಕೋಣೆಯಲ್ಲಿ ಕುಳಿತಿದ್ದ ಇಸಡೋರಾಳ ಸುತ್ತ ಅಸಂಖ್ಯಾತ ಜನ. ಹೊರಗೆ ಪೊದೆಗಳನ್ನೆಲ್ಲ ಬಿಳಿಯ ಹೂಗಳಿಂದ ಮುಚ್ಚಿದ್ದರು. ಶವ ಸಂಸ್ಕಾರದ ವೇಳೆಯಲ್ಲಿ ಇಸಡೋರಾ ಹೇಳಿದಳು. "ಕಣ್ಣೀರು ಬೇಡ. ಸಾವನ್ನು ಸುಂದರವಾಗಿ ಕಾಣಲು ನನ್ನಲ್ಲಿ ಧೈರ್ಯವಿದೆ. ಮಕ್ಕಳನ್ನು ಕಳೆದುಕೊಂಡ ಜಗತ್ತಿನ ತಾಯಂದಿರಿಗೆಲ್ಲ ನೆರವಾಗುವ ಧೈರ್ಯ ನನ್ನಲ್ಲಿದೆ!"

ಇಸಡೋರಾ ಮತ್ತು ಎಸೆನಿನ್‌ರ ಪ್ರಣಯ ಪ್ರಸಂಗ ಅತ್ಯಂತ ಹೃದಯಸ್ಪರ್ಶಿಯಾದುದು. ಸೋವಿಯತ್ ದೇಶದ ಪ್ರಸಿದ್ಧ ಕವಿ ಸೆರ್ಗೆಯ್ ಎಸೆನಿನ್ ಇಸಡೋರಾಳಿಗಿಂತ ಹದಿನೇಳು ವರ್ಷ ಚಿಕ್ಕವ. ಆದರೆ ಇಬ್ಬರೂ ಪರಸ್ಪರ ಗಾಢವಾಗಿ ಪ್ರೇಮಿಸಿದರು. ಎಸೆನಿನ್ ಒಬ್ಬ ಮಹಾ ಕವಿಯಂತೆ ಒಬ್ಬ ಮಹಾ ಕುಡುಕನೂ ಆಗಿದ್ದ.



ಸ್ವಲ್ಪ ಕಾಲದಲ್ಲೇ ಇಸಡೋರಾಳನ್ನು ಹಿಂಸಿಸಲು ಆರಂಭಿಸಿದ. ದೈಹಿಕ, ಮಾನಸಿಕ ಹಿಂಸೆಯಿಂದ ಇಸಡೋರಾ ಕಂಗಾಲಾದಳು. ಒಮ್ಮೆ ಅವಳನ್ನು ಕೊಂದೇ ಹಾಕಲು ಪ್ರಯತ್ನಿಸಿದ. ಬರ್ಲಿನ್‌ನಲ್ಲಿ ಒಂದು ರಾತ್ರಿ ಇಸಡೋರಾ ತನ್ನ ಸತ್ತ ಮಕ್ಕಳ ಚಿತ್ರವನ್ನು ನೋಡುತ್ತ, ಅಳುತ್ತ ಕುಳಿತಿದ್ದಾಗ ಎಸೆನಿನ್ ಕಂಠಪೂರ್ತಿ ಕುಡಿದು ಬಂದು ಅವಳ ಕೈಲಿದ್ದ ಚಿತ್ರವನ್ನು ಒಲೆಗೆಸೆದು ಹೊರನಡೆದ. ಲೆನಿನ್‌ಗ್ರಾಡಿನ ಹೋಟೆಲೊಂದರಲ್ಲಿ ಕೈಗೆ ಚಾಕು ಹಾಕಿಕೊಂಡ ಎಸೆನಿನ್ ತನ್ನದೇ ರಕ್ತದಲ್ಲಿ ಕೊನೆಯ ಪದ್ಯ ಬರೆದ:

**"ವಿದಾಯ ಗೆಳತಿ, ವಿದಾಯ!**
**ನೀನಿನ್ನೂ ನನ್ನ ಹೃದಯದಲ್ಲಿದ್ದೀಯಾ!"**

ಎಸೆನಿನ್ ಕಾವ್ಯದ ಐದು ಸಂಪುಟಗಳಿಂದ ಬಂದ ಗೌರವ ಧನದಿಂದ ಸೋವಿಯತ್ ನ್ಯಾಯಾಲಯವು, ಇಸಡೋರಾಳಿಗೆ ಮೂರು ಲಕ್ಷ ರೂಬೆಲ್ ನೀಡಿತು. ಆಗ ಇಸಡೋರಾ ಹಣದ ಮುಗ್ಗಟ್ಟಿನಿಂದ ಬಳಲುತ್ತಿದ್ದರೂ ಆ ಹಣವನ್ನು ಎಸೆನಿನ್‌ನ ತಾಯಿ ತಂಗಿಯರಿಗೆ ಕೊಟ್ಟುಬಿಟ್ಟಳು.

೧೯೨೭ ರ ಒಂದು ದಿನ ಫ್ರಾನ್ಸಿನ ನೈಸ್‌ನಲ್ಲಿ ಕಾರನ್ನು ಹತ್ತುವಾಗ, ಸಾವಿರಾರು ಹೃದಯಗಳಲ್ಲಿ ಆಂದೋಲನವೆಬ್ಬಿಸಿದ್ದ ಇಸಡೋರಾಳ ಕೆಂಪು ಶಾಲು ಅವಳ ಜೀವಕ್ಕೆ ಮಾರಕವಾಯಿತು. ಆ ಶಾಲು ಕಾರಿನ ಮುಂದಿನ ಚಕ್ರದಲ್ಲಿ ಸಿಲುಕಿಕೊಂಡು ಕ್ಷಣಾರ್ಧದಲ್ಲಿ ಇಸಡೋರಾಳ ಕುತ್ತಿಗೆ ಮುರಿಯಿತು.

ಅಮೇರಿಕ ಮತ್ತು ಯುರೋಪಿನ ನೃತ್ಯ ಕಲೆಯ ಮೇಲೆ ಇಸಡೋರಾ ಬೀರಿದ ಪ್ರಭಾವ ಅಪಾರ. ಸ್ವಚ್ಛಂದ ನೃತ್ಯವೆಂಬುದನ್ನು ಇಂದು ಕಾಣಲು ಸಾಧ್ಯವಾದರೆ ಅದಕ್ಕೆ ಅವಳ ಪ್ರಭಾವವೂ ಕಾರಣ. ಇಸಡೋರಾಳ ನೃತ್ಯದಂತೆ ಅವಳ ಬದುಕೂ ಈಗಿನ ಅಮೇರಿಕನ್ ಯುವಜನಾಂಗವನ್ನು ಬಹುವಾಗಿ ಆಕರ್ಷಿಸಿದೆ. ✡



**ಖಾದರ್ ನಮ್ಮ ಆಫೀಸಿನಲ್ಲಿ ರಾತ್ರಿ ಪಾಳಿಯ ನೌಕರ. ಮೂಲತಃ ಲಕ್ನೋದವನು. ಆದರೆ ಸುಮಾರು ೧೦ ವರ್ಷಗಳಿಂದ ಬೆಂಗಳೂರಿನಲ್ಲೇ ವಾಸ. ಕನ್ನಡದಲ್ಲೇ ಮಾತನಾಡುತ್ತಾನೆ. ಆದರೆ ಲಿಂಗ, ವಚನ, ಕಾಲ, ಯಾವ ವ್ಯಾಕರಣದ ಅಂಶವನ್ನೂ ಗಮನಿಸಲಾರ.**

**ಅಂದು ಬೆಳಿಗ್ಗೆ ಸುಮಾರು ೬ ಗಂಟೆಯ ಸಮಯ. ನಾನು ಬೆಳಗಿನ ತಿರುಗಾಟವನ್ನು ಮುಗಿಸಿಕೊಂಡು ಬರುತ್ತಿದ್ದೆ. ಇವನು ರಾತ್ರಿಯ ಕೆಲಸ ಮುಗಿಸಿಕೊಂಡು ಬರುತ್ತಿದ್ದ. ಹಾಗೆಯೇ ಮಾತನಾಡಿದೆ. "ಏನು ಖಾದರ್ ಯಾವ ಕಡೆ ಹೋಗುತ್ತಿದ್ದೀಯಾ?" ಎಂದೆ. ಅದಕ್ಕೆ ಅವನು "ಮನೆಗೆ ಹೋಗುತ್ತಿದ್ದೇನೆ ತಾಯಿ. ಊಟ ಮಾಡುವುದಕ್ಕೆ" ಎಂದನು.**

**ನನಗೋ ಆಶ್ಚರ್ಯ. ಈ ಖಾದರ್ ಯಾವ ಪಾರಣೆ ಆಚರಿಸುತ್ತಾನೆ ಎಂದು. ನಾನು ತಟ್ಟನೆ ಕೇಳಿದೆ. "ಬೆಳಗ್ಗೆ ೬ ಗಂಟೆಗೆ ಎಂತಹ ಊಟವಯ್ಯಾ ಇಂದು?" ಅದಕ್ಕೆ ಅವನು "ತಿಂಡಿಯನ್ನು ಊಟ ಮಾಡುವುದಕ್ಕೆ ಹೋಗುತ್ತಿದ್ದೇನೆ ತಾಯಿ, ನಮಸ್ಕಾರ" ಎಂದು ಹೇಳಿ ಸರಸರನೆ ಹೊರಟೇ ಹೋದನು.**

**ಈ ಖಾದರನ ಊಟ ನನಗೆ ಅರಗಲೇ ಇಲ್ಲ. ಈ ಪದ ಪ್ರಯೋಗಕ್ಕೆ ಕನ್ನಡ ವೈಯಾಕರಣಿಗಳು ಏನನ್ನುತ್ತಾರೆ? ಇದು ತಪ್ಪೋ ಸರಿಯೆ?**

**–ಶಾರದಾ ಶಾಮಣ್ಣ**

# ಪರಿಸರ ಕಾರ್ಯಕರ್ತನಾಗಿ ಎರಡು ವರ್ಷ

**ಪಾಂಡುರಂಗ ಹೆಗಡೆ**

ಈ ವರದಿ ನನ್ನನ್ನು ನಾನು ಅರಿತು ಕೊಳ್ಳುವ, ನನ್ನ ಕೆಲಸಗಳ ಅವಲೋಕನ ಮಾಡುವ ಒಂದು ಪ್ರಯತ್ನ. ಜನವರಿ ೧೯೮೩ರಲ್ಲಿ ಕರ್ನಾಟಕದಲ್ಲಿ, ವಿಶೇಷವಾಗಿ ಪಶ್ಚಿಮಘಟ್ಟಗಳಲ್ಲಿ ನಾನು ಪರಿಸರದ ಬಗ್ಗೆ ಕೆಲಸ ಮಾಡಲು ನಿರ್ಧರಿಸಿದೆ. ಅದೇ ವರ್ಷ ಚಿಪ್ಕೋ (ಅಪ್ಪಿಕೋ) ಆಂದೋಳನ ಆರಂಭವಾಗಿ ಅಲ್ಲಿಂದ ನಾನು ಪರಿಸರ ಕಾರ್ಯಕರ್ತನಾದೆ. ಈ ವರದಿ ಜನವರಿ ೧೯೮೩ ರಿಂದ ಫೆಬ್ರುವರಿ ೧೯೮೫ ರ ವರೆಗಿನ ನನ್ನ ಅನುಭವಕ್ಕೆ ಬದ್ಧವಾಗಿದೆ. ನಾನಿಲ್ಲಿ ಮುಂದಿನ ಮಕ್ಕಳ ಪರಿಸರ ರಕ್ಷಿಸುವ ಚಳುವಳಿಗೆ ಸಂಬಂಧಿಸಿದಂತೆ ನನ್ನ ಸೋಲು-ಗೆಲವುಗಳನ್ನು ಹೇಳುವ ಪ್ರಯತ್ನ ಮಾಡಿದ್ದೇನೆ. ಮತ್ತು ಇದನ್ನು ಇಡೀ ಭಾರತದ ಪರಿಸರ ಸಮತೋಲನ ಚಿತ್ರಕ್ಕೆ ಹೋಲಿಸಿ ನೋಡುವ ಇರಾದೆ ನನಗಿದೆ. ಈ ಪ್ರಯತ್ನ ವಸ್ತುಬದ್ಧವಾಗಿದ್ದು, ಈ ಕುರಿತು ಟೀಕೆ, ಟಿಪ್ಪಣಿ ಮತ್ತು ಸಲಹೆಗಳನ್ನು ಹಾರ್ದಿಕವಾಗಿ ಸ್ವಾಗತಿಸುತ್ತೇನೆ.

## ಹಿನ್ನೆಲೆ

ದಿಲ್ಲಿ ವಿಶ್ವವಿದ್ಯಾಲಯದ ಸಾಮಾಜಿಕ ಕಾರ್ಯದ ವಿಭಾಗದಲ್ಲಿ ನನ್ನ ಸ್ನಾತಕೋತ್ತರ ಪದವಿ ಬಗ್ಗೆ ಅಭ್ಯಾಸ ಮಾಡುತ್ತಿರುವ ಸಮಯದಲ್ಲಿ ನನಗೆ ಚಿಪ್ಕೋ ಧುರೀಣ ಸುಂದರಲಾಲ ಬಹುಗುಣರ ಸಂಪರ್ಕವಾಯಿತು. ಚಿಪ್ಕೋ ಚಳವಳಿಯಲ್ಲಿ ಭಾಗ ವಹಿಸಲು ನಾನು ಹಿಮಾಲಯಕ್ಕೆ ಹೋದೆ. ಇದು ನನ್ನ ಸ್ನಾತಕೋತ್ತರ ಅಭ್ಯಾಸದ ಒಂದು ಅಂಗವಾಗಿತ್ತು. ೧೯೭೯ರಲ್ಲಿ ನಾನು ವಿಶ್ವವಿದ್ಯಾಲಯಕ್ಕೆ ಮೊದಲಿಗನಾಗಿ ನನ್ನ ಸ್ನಾತಕೋತ್ತರ ಪದವಿ ಗಳಿಸಿದೆ. ಇದರೊಂದಿಗೆ ನಾನು ನೌಕರಿ ಹುಡುಕುವವರ ಸಂತೆಯಲ್ಲಿ ಸೇರಿದೆ. ನಾನು ಅವುಗಳ ಏಳ್ಗೆಗಾಗಿ ಹಳ್ಳಿಗಳಲ್ಲಿ ದುಡಿಯಲು ನಿರ್ಧರಿಸಿದೆ. ಈ ಹಂಬಲದಿಂದ ನಾನು ಮಧ್ಯಪ್ರದೇಶದ ದಾಮೋಹ ಎಂಬ ಜಿಲ್ಲೆಗೆ ಬಂದೆ. ಅಲ್ಲಿಯ ಸ್ವಯಂಸೇವಾ ಸಂಸ್ಥೆಯಾದ ಗ್ರಾಮೀಣ ಶ್ರಮಿಕ ಕೇಂದ್ರವನ್ನು ಸೇರಿದೆ.

ದಾಮೋಹದಲ್ಲಿಯ ಮುಖ್ಯ ಕೆಲಸ



ಭೂರಹಿತ ಕೂಲಿಕಾರರ ಮಧ್ಯೆ ಇದ್ದುಕೊಂಡು ಅವರನ್ನು ಸಂಘಟಿಸಿ ಅವರು ತಮ್ಮ ಹಕ್ಕುಗಳಿಗಾಗಿ ಹೋರಾಡುವಂತೆ ಮಾಡುವುದಾಗಿತ್ತು. ಕೆಲವು ಹಳ್ಳಿಗಳಲ್ಲಿ ನಾವು ಯಶಸ್ಸು ಕಂಡರೂ ಹೆಚ್ಚಿನ ಜನರ ಮೇಲೆ ಇದರ ಪರಿಣಾಮವಾಗಲಿಲ್ಲ. ಈ ಜಿಲ್ಲೆ ಮೇಲಿಂದ ಮೇಲೆ ಬರಗಾಲಕ್ಕೀಡಾಗುತ್ತಿತ್ತು. ಇಂಥ ಪರಿಸ್ಥಿತಿಯಲ್ಲಿ ಜನರಿಗೆ ತಿಳುವಳಿಕೆ ಕೊಟ್ಟು ಅವರನ್ನು ಸಂಘಟಿಸಿದರೆ ಅವರು ತಮ್ಮ ಬಡತನದ ಸಮಸ್ಯೆಯನ್ನು ಬಗೆಹರಿಸಿಕೊಳ್ಳಬಹುದು ಎಂಬುದು ನಮ್ಮ ನಂಬಿಗೆಯಾಗಿತ್ತು (ಹೆಚ್ಚಾಗಿ ಗ್ರಾಮೀಣ ವಿಕಾಸದ ಪ್ರಯಾಸಗಳು ಇದೇ ನಂಬಿಗೆಯನ್ನೇ ಆಧಾರವಾಗಿಟ್ಟುಕೊಂಡಿರುತ್ತವೆ). ಬಡಜನರ ಕೈಯಲ್ಲಿ ಪ್ರಭುತ್ವವಿದ್ದರೆ ಆರ್ಥಿಕ ನ್ಯಾಯ ತನ್ನಿಂದ ತಾನೇ ಸ್ಥಾಪಿತವಾಗುತ್ತದೆಂಬುದೇ ನಮ್ಮ ವಿಚಾರ. ಆದರೆ ಬಡ ಜನರನ್ನು ಹಣ್ಣು ಮಾಡುವ ಬರಗಾಲದಂಥ ಪ್ರಕೃತಿ ವಿಕೋಪ ಪ್ರತಿ ವರ್ಷವೂ ಬರುತ್ತಿತ್ತು. ಸಂಘಟಿತ ಕಾರ್ಮಿಕರು ಆಹಾರಕ್ಕಾಗಿ ಕೆಲಸ ಕೊಡಬೇಕೆಂದು ಸರಕಾರದೊಡನೆ ಹೊಡೆದಾಡಿದರು. ಇದರಿಂದ ಬರಗಾಲವೇನೂ ತಪ್ಪಲಿಲ್ಲ. ನಾವು ರೋಗದ ಮೂಲ ಕಾರಣವನ್ನು ಬಿಟ್ಟು ರೋಗದ ಹೊರ ಲಕ್ಷಣಗಳನ್ನು ಮಾತ್ರ ವಾಸಿ ಮಾಡುವುದರಲ್ಲಿ ತೊಡಗಿದ್ದೆವು. ಹಳ್ಳಿಯ ಬಡತನ ಮತ್ತು ಏಳ್ಗೆಗಾಗಿ ಕೆಲಸ ಮಾಡುವಾಗ ಹಳ್ಳಿಯ ಬಗೆಗೆ ಸಮಗ್ರ ದೃಷ್ಟಿಯು (ಪರಿಸರದ ಸಮಸ್ಯೆಯೂ ಸೇರಿದಂತೆ) ಅವಶ್ಯಕತೆಯಿದೆ. ಸಾಮಾಜಿಕ ನ್ಯಾಯದ ಜೊತೆಗೆ ಪ್ರಕೃತಿ ಸಂಪತ್ತಿನ ರಕ್ಷಣೆ ಮಹತ್ವದ್ದಾಗಿದೆ.

ಮಧ್ಯಪ್ರದೇಶದ ಹಳ್ಳಿಗಳಲ್ಲಿ ಮೂರು ವರ್ಷ ಕೆಲಸ ಮಾಡಿದ ಮೇಲೆ ಹೊರಗಡೆಯಿಂದ ಹೋಗಿ ಕೆಲಸ ಮಾಡುವವನ ಮಿತಿ ನನ್ನ ಅರಿವಿಗೆ ಬಂತು. ಅಲ್ಲಿಯ ಸ್ಥಳೀಯ ಬುಂದೇಲಿ ಭಾಷೆಯನ್ನು ನಾನು ಕಲಿತು ಹಳ್ಳಿಗರೊಡನೆ ಬೆರೆತೆ. ಆದರೂ ಅವರ ಸಾಂಸ್ಕೃತಿಕ ಜಗತ್ತಿನ ನನ್ನ ಅರಿವು ತೀರ ಮಿತವಾಗಿತ್ತು. ದಾಮೋಹದ ಬಡ ಜನರನ್ನು ಸಂಘಟಿಸಬೇಕೆಂಬ ನಿಖರವಾದ ತಿಳುವಳಿಕೆ ನಮಗಿದ್ದರೂ, ಅವರೊಡನಿದ್ದೂ ನಮ್ಮಿಂದ ಆ ಜನರ ಹೃದಯವನ್ನು ಮುಟ್ಟಲಾಗಲಿಲ್ಲ. ಕಾರಣ ಅಲ್ಲಿಯ ಯುವಕರನ್ನೇ ಸಂಘಟನೆಯ ಕೆಲಸಕ್ಕೆ ತೊಡಗಿಸುವುದು ಯೋಗ್ಯವೆಂದು ನಾನು ನಿರ್ಧಾರ ಮಾಡಿದೆ. ಗ್ರಾಮೀಣ ಜನರೊಡನೆ ಕಾರ್ಯ ಮಾಡುವ ಅನುಭವದೊಂದಿಗೆ ನಾನು ೧೯೮೨, ಡಿಸೆಂಬರಿನಲ್ಲಿ ದಾಮೋಹಕ್ಕೆ ವಿದಾಯ ಹೇಳಿದೆ.

೧೯೮೨ರ ಡಿಸೆಂಬರಿನಲ್ಲಿ ನಾನು ಸುಂದರಲಾಲ್ ಬಹುಗುಣರನ್ನು ಕೂಡಿಕೊಂಡು ಕಾಶ್ಮೀರ–ಕೋಹಿಮಾ ಚಿಪ್ಕೋ ಪಾದಯಾತ್ರೆಯಲ್ಲಿ ಭಾಗವಹಿಸಿದೆ. ಭೂತಾನದಲ್ಲಿ ನಾವಿಬ್ಬರೂ ಕೂಡಿ ಅಲ್ಲಿಯ ದುರ್ಗಮ ಭಾಗಗಳಲ್ಲಿ ಸಂಚರಿಸಿದೆವು. ಕರ್ನಾಟಕದಲ್ಲಿ ಪರಿಸರದ ಬಗ್ಗೆ ಕೆಲಸ ಮಾಡುವ ನನ್ನ ಯೋಜನೆಯ ಕುರಿತು ಅವರೊಡನೆ ನಾನು ಚರ್ಚೆ ನಡೆಸಿದೆ. ಚಿಪ್ಕೋ ಸಂದೇಶವನ್ನು ಜನರಿಗೆ ಮುಟ್ಟಿಸುವಲ್ಲಿ ಪಾದಯಾತ್ರೆಯ ಮಹತ್ವವನ್ನು ನಾನು ಅರಿತೆ. ಭೂತಾನದ ದೂರದ ಹಳ್ಳಿಗಾಡುಗಳಲ್ಲಿ ವಾಸಿಸುವ ರೈತರಿಂದ ನಾವು ಬಹಳಷ್ಟನ್ನು ಕಲಿತೆವು.

೧೯೮೩ ರ ಜನವರಿ ಮೊದಲನೇ ವಾರದಲ್ಲಿ ನಾನು ಬೆಂಗಳೂರನ್ನು ತಲಪಿದೆ. ನನ್ನ ಮುಂದಿನ ಯೋಜನೆಯ ಕುರಿತು ನನ್ನ ವಿಚಾರ ಅಸ್ಪಷ್ಟವಾಗಿತ್ತು. ಆದರೂ ನನ್ನ ಕೆಲಸ ಅರಣ್ಯ ಮತ್ತು ಜನರ ಸಮಸ್ಯೆಗಳಿಗೆ ಸಂಬಂಧಿಸಿದ್ದೆಂದು ನನಗೆ ಗೊತ್ತಿತ್ತು. ಮೊದಲೆರಡು ತಿಂಗಳು ಬೆಂಗಳೂರಲ್ಲಿ ಪಶ್ಚಿಮ ಘಟ್ಟದ ಬಗ್ಗೆ ಕೆಲಸ ಮಾಡುವವರನ್ನು ಸಂಪರ್ಕಿಸುತ್ತ ಕಳೆದೆ, ಸಮಾನ ಮನೋಧರ್ಮದವರೊಡನೆ ಚರ್ಚಿಸಹತ್ತಿದೆ. ಯಾವುದೇ ಸಂಸ್ಥೆಗಳ ನೆರವಿಲ್ಲದೆ ನನ್ನಷ್ಟಕ್ಕೆ ನಾನು ಕೆಲಸ ಮಾಡುವ ವಿಷಯವನ್ನು ಜನರಿಗೆ ತಿಳಿಸಿ ಹೇಳುವುದು ಕಷ್ಟವಾಗಿತ್ತು. ಯಾವುದೇ ಆರ್ಥಿಕ ನೆರವಿಲ್ಲದ ನಾನು ಸ್ವತಂತ್ರ ಬರಹಗಾರನಾಗಿ ಹಣ ಗಳಿಸಬೇಕೆಂಬ ಯೋಜನೆ ಹಾಕಿಕೊಂ

ಇದ್ದೆ. ನನ್ನ ಸಾಹಸದ (ದುಸ್ಸಾಹಸ) ಕುರಿತು ನನ್ನ ಗೆಳೆಯರು ಅನುಮಾನ ವ್ಯಕ್ತಪಡಿಸಿದರು. ನಾನು ಧೈರ್ಯ ಕುಂದದೆ ನೆಲದಲ್ಲಿ ನಿಂತು ಕೆಲಸ ಮಾಡುವ ಯೋಜನೆ ಹಾಕಿದೆ. ಕಾರವಾರದಿಂದ ಹೊರಟು ಕಾಳಿನದಿ ದಂಡೆಗುಂಟ ನಡೆಯುತ್ತ ಗೋವಾದಲ್ಲಿಯ ಕಾಳಿಯ ಉಗಮ ಸ್ಥಳವನ್ನು ತಲಪುವ ಯೋಜನೆ ಹಾಕಿಕೊಂಡೆ.

## ಒಂಟಿ ಪಾದಯಾತ್ರೆ

ಕಾರವಾರ ಉತ್ತರದ ಜಿಲ್ಲಾ ಕೇಂದ್ರ. ಇದೊಂದು ಕರಾವಳಿ ಪಟ್ಟಣವಾಗಿದ್ದು ತನ್ನ ಸುಂದರವಾದ ಸಮುದ್ರ ತೀರಕ್ಕಾಗಿ ಪ್ರಸಿದ್ಧ-ವಾಗಿದೆ. ಕಾರವಾರದಿಂದ ೬ ಕಿಲೋಮೀಟರ್ ದೂರದ ಬಿಣಗಾದಲ್ಲೆ ಒಂದು ಕಾಸ್ಟಿಕ್ ಸೋಡಾ ಕಾರ್ಖಾನೆಯಿದೆ. ಅಲ್ಲಿಯ ಮೀನುಗಾರರನ್ನು ನಾನು ಭೇಟಿಯಾದೆ. ಇವರು ಕಾರ್ಖಾನೆಯಿಂದ ಹೊರಬೀಳುವ ಕೊಳೆಯಿಂದ ತೊಂದರೆಗೀಡಾಗಿ-ದ್ದರು. ಈ ಕಾರ್ಖಾನೆ ೮೦೦ ಜನರಿಗೆ ಕೆಲಸ ಕೊಟ್ಟು ೧೦,೦೦೦ ಮೀನುಗಾರರನ್ನು ನಿರ್ಗತಿಕರನ್ನಾಗಿ ಮಾಡಿತ್ತು.

ನಾನು ಕಾರವಾರದಿಂದ ಕಾಳಿ ನದಿ ದಂಡೆ ಗುಂಟ ಪಾದಯಾತ್ರೆ ಪ್ರಾರಂಭಿಸಿದೆ. ಹಳ್ಳಿಗರೊಡನೆ ಮಾತನಾಡಿ ಅವರೊಡನೆ ಉಳಿದೆ. ಕೊನೆಗೆ ಕಾಳಿ ನದಿಯ ಉಗಮಸ್ಥಳವಾದ ಡಿಗ್ಗಿ ಘಟ್ಟ ತಲಪಿದೆ. ಈ ಪಾದಯಾತ್ರೆಯಿಂದ ನನಗೆ ಜಿಲ್ಲೆಯಲ್ಲಿ ನಡೆಯುತ್ತಿರುವ ಅಭಿವೃದ್ಧಿ ಕೆಲಸಗಳ ಮೇಲು ನೋಟ ಸಿಕ್ಕಿತು. ನೂರರಲ್ಲಿ ಎಂಭತ್ತರಷ್ಟು ಅರಣ್ಯದಿಂದ ತುಂಬಿರುವ ಉತ್ತರ ಕನ್ನಡ ಜಿಲ್ಲೆಯು ಹಿಂದುಳಿದ ಪ್ರದೇಶವೆಂದು ಪರಿಗಣಿಸಲ್ಪಟ್ಟಿತ್ತು. ಈ ಹಿಂದುಳಿಯುವಿಕೆಯನ್ನು ತೊಲಗಿಸಲು ಮೂರು 'ಪಿ'ಗಳು ಬಂದವು. ಮೊದಲನೆಯದು ಪ್ಲೈವುಡ್ ಕಾರ್ಖಾನೆ. ಇದು ಈ ಜಿಲ್ಲೆಯ ಅರಣ್ಯ ಸಂಪತ್ತನ್ನು ಲೂಟಿ ಮಾಡುವ ಇರಾದೆ ಹೊಂದಿತ್ತು. ಎರಡನೇ 'ಪಿ' ಎಂದರೆ ಪೇಪರ್ ಮಿಲ್, ಕಾಗದ ಕಾರ್ಖಾನೆ. ಇಲ್ಲಿನ ಬಿದಿರನ್ನು ಧ್ವಂಸಗೊಳಿಸಲು ವೆಸ್ಟ್‌ಕೋಸ್ಟ್ ಪೇಪರ್ ಕಾರ್ಖಾನೆಯು ಸ್ಥಾಪನೆಯಾಯಿತು. ಮೂರನೇ 'ಪಿ' ಎಂದರೆ ಈಗಿತ್ತಲಾಗಿ ಬಂದ 'ಪವರ್'. ಕಾಳೀ ನದಿಯ ನೀರಿನಿಂದ ವಿದ್ಯುತ್ತನ್ನು ಪಡೆಯಲು ಕಾಳೀ ನದಿಗೆ ಅಣೆಕಟ್ಟನ್ನು ಕಟ್ಟಲಾಗುತ್ತಿದೆ. ನಾನು ಸುಪಾದಲ್ಲಿನ ಮುಖ್ಯ ಅಣೆಕಟ್ಟನ್ನು ನೋಡಿದೆ. ಅಣೆಕಟ್ಟಿನಿಂದ ೪೭ ಹಳ್ಳಿಗಳು ಮುಳುಗಡೆಯಿಂದ ಸ್ಥಳಾಂತರಗೊಂಡಿವೆ. ಸುಮಾರು ಹತ್ತು ಸಾವಿರ ಎಕರೆಗಳಷ್ಟು ಅರಣ್ಯವನ್ನು ಚೊಕ್ಕಟವಾಗಿ ಕಡಿಯಲಾಗಿದೆ. ಸುಂದರವಾದ ಕಾಳೀ ನದಿ ಸತ್ತಿದೆ. ಕಾಗದ ಕಾರ್ಖಾನೆಯಿಂದ ಹೊರಬೀಳುವ ಕೊಳಕು ನೀರು ಜೀವಂತ ನದಿಯನ್ನು ಕೊಂದು ಹಾಕಿದೆ. ಈ ಮೇಲೆ ಹೇಳಿದ ಮೂರು 'ಪಿ'ಗಳು ಅನಾಗರಿಕತೆಯನ್ನು ತೊಲಗಿಸಲು ಬಂದು ಪ್ರಕೃತಿಯ ಸಮತೋಲನವನ್ನು ಕೆಡಿಸಿವೆ. ೧೯೫೦ ರಿಂದ ೧೯೮೦ರ ವರೆಗೆ ಇಲ್ಲಿಯ ಅರಣ್ಯ ಶೇಕಡಾ ೮೧ ರಿಂದ ಶೇಕಡಾ ೨೫ಕ್ಕೆ ಇಳಿದಿದೆ. ಕಾಗದ ಕಾರ್ಖಾನೆ ಮತ್ತು ಪ್ಲೈವುಡ್ ಕಾರ್ಖಾನೆಗಳು ೪೦,೦೦೦ ಜನರಿಗೆ ಕೆಲಸ ಕೊಟ್ಟು ೭ ಲಕ್ಷ ಜನರ ಜೀವನ ಕ್ರಮದ ಮೇಲೆ ಕೆಟ್ಟ ಪರಿಣಾಮವನ್ನುಂಟುಮಾಡಿವೆ. ಸ್ಥೂಲಸ್ತರದಲ್ಲಿ ಇದು ದಕ್ಷಿಣ ತಪ್ಪಲಿನ ಮಳೆಯ ಗತಿಯ ಮೇಲೂ ದುಷ್ಪರಿಣಾಮ ಬೀರಿದೆ. ಅತ್ಯಂತ ಆಘಾತದ ಸಂಗತಿಯೆಂದರೆ ಕಾಳಿಯ ಉಗಮ ಸ್ಥಾನದಲ್ಲಿ ಡಿಗ್ಗಿ ಹಳ್ಳಿಯ ದಟ್ಟ ಅಡವಿಯಲ್ಲಿ ಹುಟ್ಟಿ ಹರಿಯುವ ಸಣ್ಣ ಹೊಳೆಗೆ ಸುತ್ತ ಮುತ್ತಲಿನ ಬಹಳಷ್ಟು ತೊರೆಗಳು ಬಂದು ಕೂಡಿ ಆಗಿರುವ ಕಾಳಿ ನದಿ ಇಂದು ಬತ್ತಿ ಹೋಗುತ್ತಿದೆ. ಆ ಇಡೀ ಪ್ರದೇಶವೂ ಗಣಿಗಳಿಂದ ಹೊರಹಾಕಿದ ಹಾಳು ಮಣ್ಣಿನಿಂದ ತುಂಬಿಹೋಗಿದೆ. ಅಲ್ಲಿ ನಡೆದಿರುವ ಗಣಿ ಕೆಲಸಗಳ ಪರಿಣಾಮವಾಗಿ ತೊರೆ ಝರಿಗಳೆಲ್ಲ ಬತ್ತಿ ಹೋಗಿವೆ.

ಪಾದಯಾತ್ರೆ ಅಭಿವೃದ್ಧಿ ಕಾರ್ಯಕ್ರಮಗಳ ಆಳ ಮತ್ತು ಒಳಗುಟ್ಟು ಏನೆಂಬುದನ್ನು ಬಯಲು ಮಾಡಿತು. ಅರಣ್ಯ ಸಂಪತ್ತಿನ ಬಳಕೆ ಹೇಗಾಗಿದೆಯೆಂದರೆ ಇದು ಇಲ್ಲಿಯ ನಿವಾಸಿಗಳ ಜೀವನವನ್ನು ಅಪಾಯಕ್ಕೀಡುಮಾಡಿದೆ. ದಿನ-ದಿನವೂ ಹೊಸತನ್ನು ಕೊಡಬಲ್ಲಂಥ ಅರಣ್ಯವನ್ನು ತಿರುಗಿ ಏನನ್ನೂ ಕೊಡಲಾರದಂಥ ವಸ್ತುವನ್ನಾಗಿ ರೂಪಾಂತರಿಸಲಾಗಿದೆ. ಇದು ಬಡ ಜನರ ಜೀವನ ಗತಿಯ ಮೇಲೆ ಬೀರುವ ಪರಿಣಾಮ ಗಂಭೀರವಾದದ್ದು. ಮ್ಯಾಂಗನೀಜ್ ಗಣಿಯಿಂದ ವಿದೇಶೀ ವಿನಿಮಯ ಮತ್ತು ಅಣೆಕಟ್ಟಿನಿಂದ ವಿದ್ಯುತ್ತು ದೊರೆತರೂ ಈ ಪರಿಕ್ರಮದಲ್ಲಿ ಬಡ ಜನರು ತಮ್ಮ ಭೂಮಿಯ ಮೇಲಿನ ಹಕ್ಕನ್ನು ಕಳೆದುಕೊಂಡು ಅನಾಥರಾಗಿದ್ದಾರೆ. ಬಡ ಜನರ ಈ ದುಸ್ಥಿತಿಯನ್ನು ನೋಡಿ ಪರಿಸರಕ್ಕಾಗಿ ಕೆಲಸ ಮಾಡುವ ನನ್ನ ನಿರ್ಧಾರ ಇನ್ನಷ್ಟು ಗಟ್ಟಿಯಾಯಿತು.

ಉತ್ತರ ಕನ್ನಡದ ಸಿರ್ಸಿ ತಾಲೂಕಿನ ನನ್ನ ಹಳ್ಳಿಗೆ ನಾನು ಹಿಂದಿರುಗಿದೆ. ನನ್ನೊಳಗಿನ ತುಮುಲ ಅಸಹನೀಯವಾಗಿತ್ತು. ನನ್ನ ಅನುಭವ ಮತ್ತು ಗೊಂದಲಗಳು ನನ್ನನ್ನು ಏನಾದರೂ ಮಾಡುವಂತೆ ಪ್ರೇರಿಸುತ್ತಿತ್ತು. ಆದರೆ ನಾನು ಹಣ ಮತ್ತು ವಿಚಾರ ಎರಡೂ ಇಲ್ಲದ ದಿವಾಳಿಖೋರನಾಗಿದ್ದೆ. ಇದೇ ಸಮಯಕ್ಕೆ ಸುಂದರ್‌ಲಾಲ್ ಬಹುಗುಣರು ಸಿರ್ಸಿಗೆ ಬಂದರು. ಕಡಿಯಲು ಗುರುತು ಹಾಕಿದ ಮರ, ಗಿಡಗಳನ್ನು ರಕ್ಷಿಸಬೇಕೆಂಬ ವಿಚಾರದಲ್ಲಿದ್ದ ಬಗಳೇಗಪ್ಪೆ ಯುವಕ ಯುವತಿ ಮಂಡಳಗಳು ಬಹುಗುಣರನ್ನು ತಮ್ಮ ಹಳ್ಳಿಗೆ ಕರೆದವು. ಈ ಹಳ್ಳಿಗಳ ಜನರು ಚಿಪ್ಕೋ ಮಾದರಿಯಲ್ಲಿ ಚಳವಳಿ ಮಾಡಬೇಕೆಂದುಕೊಂಡ ವಿಷಯ ನಮಗೆ ಗೊತ್ತಿರಲಿಲ್ಲ. ಕರ್ನಾಟಕದ ತುಂಬೆಲ್ಲ ಈ ಪ್ರಜ್ಞೆ ಹರಡಲಿದೆಯೆಂಬುದನ್ನು ನಾವು ಎಣಿಸಿರಲಿಲ್ಲ.

## ದಕ್ಷಿಣ ಭಾರತದಲ್ಲಿ ಅಪ್ಪಿಕೋ ಆಂದೋಲನ

೧೯೮೩ರ ಸಪ್ಟೆಂಬರ್ ಎಂಟರಂದು ಉತ್ತರ ಕನ್ನಡದ ಸಿರ್ಸಿ ತಾಲೂಕಿನ ಸಾಲ್ಕಣಿ ಸಮೀಪದ ಕಳಾಸೆ ಎಂಬಲ್ಲಿ ಯುವಕ-ಯುವತಿಯರೆಲ್ಲ ಸೇರಿ ಅಪ್ಪಿಕೋ ಆಂದೋಲನ ಪ್ರಾರಂಭಿಸಿದರು. ಯಾವುದೇ ಮುಂದಾಳತ್ವವಿರದ, ಘೋಷಣೆಯಿಲ್ಲದ ಆಂದೋಲನವಾಗಿತ್ತು, ಇದು. ಜನ ಅಡವಿಗೆ ಹೋಗಿ ಕಡಿಯಬೇಕೆಂದಿರುವ ಮರಗಳನ್ನು ಅಪ್ಪಿಕೊಂಡರು. ನನಗಿದು ಗೊತ್ತಾದದ್ದು ಕೆಲ ದಿನಗಳ ನಂತರ ಪತ್ರಿಕೆಗಳ ಮೂಲಕ. ಅನಂತರ ನಾನು ಕಳಾಸೆ ಅಡಿವಿಗೆ ಹೋದೆ. ಹಳ್ಳಿಗಳನ್ನು ತಿರುಗಿದೆ. ಸ್ಥಳಿಕ ರಾಜಕಾರಣದ ಪರಿಚಯವಿರುವ ನಾನು ಅಪ್ಪಿಕೋವನ್ನು ರಾಜಕಾರಣಿಗಳು ತಮ್ಮ ಲಾಭಕ್ಕಾಗಿ ಬಳಸುವರೆಂಬುದನ್ನು ಗ್ರಹಿಸಿದೆ. ಇಂತಹ ಸನ್ನಿವೇಶದಲ್ಲಿ ನನ್ನ ಪ್ರವೇಶವಾಗಿ ಅಪ್ಪಿಕೋಕ್ಕೆ ರಚನಾತ್ಮಕ ಸ್ವರೂಪ ನೀಡಲು, ಮಾರ್ಗದರ್ಶನ ನೀಡತೊಡಗಿದೆ. ೧೯೮೩ರ ಡಿಸೆಂಬರ್ ಹೊತ್ತಿಗೆ ಅಪ್ಪಿಕೋ ಸಿರ್ಸಿ-ಸಿದ್ದಾಪುರಗಳ ಪ್ರದೇಶದಲ್ಲಿ ಹಬ್ಬಿತು. ೧೯೮೪ರಲ್ಲಿ ಶಿವಮೊಗ್ಗಾ ಜಿಲ್ಲೆಯ ಸಾಗರದಲ್ಲೂ ಅಪ್ಪಿಕೋ ಆರಂಭವಾಯಿತು. ೧೯೮೫ರ ಸಮಯಕ್ಕೆ ಅಪ್ಪಿಕೊ ಉತ್ತರ ಕನ್ನಡ, ಶಿವಮೊಗ್ಗಾ ಮತ್ತು ದಕ್ಷಿಣ ಕನ್ನಡಗಳಲ್ಲಿ ಆಳವಾಗಿ ಬೇರು ಬಿಟ್ಟಿತು.

ಈ ಆಂದೋಲನ ಹಬ್ಬಲು ಮುಖ್ಯ ಕಾರಣವೆಂದರೆ ಅರಣ್ಯ ನೀತಿ. ಅರಣ್ಯ ಆಡಳಿತದ ಪ್ರಮುಖ ಉದ್ದೇಶ ಅರಣ್ಯಾಧಾರಿತ ಉದ್ದಿಮೆಗಳಿಗೆ ಕಚ್ಚಾವಸ್ತುಗಳನ್ನು ಒದಗಿಸಿ ಅದರಿಂದ ಗರಿಷ್ಠ ಪ್ರಮಾಣದ ಆದಾಯವನ್ನು ಪಡೆಯುವುದಾಗಿದೆ. ಇದಕ್ಕಾಗಿ ನಮ್ಮಲ್ಲಿಯ ಪ್ರಾಕೃತಿಕ ಕಾಡುಗಳನ್ನು ಸವರಿ ವ್ಯಾಪಾರಿ ವೃಕ್ಷಗಳಾದ ಸಾಗವಾನಿ ಮತ್ತು ನೀಲಗಿರಿ ಗಿಡಗಳನ್ನು ಬೆಳೆಸ

ವಾಗುತ್ತಿದೆ. ಸೂಕ್ಷ್ಮ ಪ್ರಮಾಣದ ಹವಾಮಾನ ಬದಲಾವಣೆಗಳಾಗಿ ಮಳೆ ಬೆಳೆಗಳ ಮೇಲೆ ವಿಪರೀತ ಪರಿಣಾಮವುಂಟಾಗಿದೆ. ಸರಕಾರದ ಅರಣ್ಯ ನೀತಿ: ನಮ್ಮ ಜನರ ಸಮಸ್ಯೆಗಳನ್ನು ಅಲಕ್ಷಿಸಿ ತಾನು ಹಿಡಿದಿರುವ ದಾರಿ ವೈಜ್ಞಾನಿಕವಾದದ್ದೆಂದು ಸಾರುತ್ತದೆ. ವೈಜ್ಞಾನಿಕವೆಂದು ಕರೆದುಕೊಳ್ಳುವ ಅರಣ್ಯೀಕರಣದಿಂದ ಪ್ರಾಕೃತಿಕ ಅಡವಿಗಳು ನಾಶವಾಗಿವೆ. ಮತ್ತು ನವೀಕರಣ ಶಕ್ತಿಯುಳ್ಳ ಪ್ರಕೃತಿಯನ್ನು ನವೀಕರಿಸಲಾಗದ ವಸ್ತುವನ್ನಾಗಿ ಪರಿವರ್ತಿಸಲಾಗಿದೆ. ಇಂಥ ಅರಣ್ಯ ನೀತಿಯ ಬಗ್ಗೆ ಜನರಲ್ಲಿ ಬಹು ದಿನಗಳಿಂದ ಜಿಗುಪ್ಸೆ ಬೆಳೆಯುತೊಡಗಿತ್ತು. ಮಲೆನಾಡಿನ ಹಳ್ಳಿಗಳ ಜನರಲ್ಲಿ ಈ ಭಾವನೆ ಅರೆ ಪ್ರಜ್ಞಾವಸ್ಥೆಯಲ್ಲಿತ್ತು. ಈ ಎಲ್ಲ ಭಾವನೆಗಳನ್ನು ಮತ್ತು ಕಷ್ಟಗಳನ್ನು ಜನ ಅಪ್ಪಿಕೋದ ಮೂಲಕ ವ್ಯಕ್ತ ಪಡಿಸಿದರು.

## ಅಪ್ಪಿಕೋವನ್ನು ಹತ್ತಿಕ್ಕಲು

೪.೩ ವೈಜ್ಞಾನಿಕವೆಂದು ಕರೆದುಕೊಳ್ಳಲಾಗುವ ಅರಣ್ಯೀಕರಣವನ್ನು ಜನಸಾಮಾನ್ಯರು ಪ್ರತಿಭಟಿಸುವ ಪಣ ತೊಟ್ಟರು. ಮೇಲ್ವರ್ಗದ ಅಧಿಕಾರಿಗಳಿಗೆ ಇದೊಂದು ಬೆದರಿಕೆಯಾಗಿತ್ತು. ಈ ಜನಾಂದೋಲನವನ್ನು ಹತ್ತಿಕ್ಕಲು ಉನ್ನತ ಅರಣ್ಯಾಧಿಕಾರಿಗಳು ಅಪ್ಪಿಕೋವನ್ನು ಅವೈಜ್ಞಾನಿಕವೆಂದು ಘೋಷಿಸಿದರು. ಎರಡನೆಯ ಆರೋಪವೆಂದರೆ, ಈ ಆಂದೋಲನ ಅಭಿವೃದ್ಧಿಯ ವಿರೋಧಿಯೆಂದು ಈ ಚಳವಳಿ ರಾಜಕೀಯ ಉದ್ದೇಶದಿಂದ ಕೂಡಿದೆಯೆಂದು ಹೇಳುತ್ತ, ಅವರು ಜನರ ಧ್ವನಿಯನ್ನು ಅಡಗಿಸಲು ಪ್ರಯತ್ನಿಸಿದರು. ಈ ಎಲ್ಲ ಪ್ರಯತ್ನಗಳಿಂದ ಅಪ್ಪಿಕೋ ಮತ್ತಷ್ಟು ಗಟ್ಟಿಯಾಯಿತಲ್ಲದೆ ಇನ್ನೂ ಅನೇಕ ಅರಣ್ಯ ಕ್ಷೇತ್ರಗಳಿಗೆ ಹಬ್ಬಿತು. ಈ ಜನಾಂದೋಲನದ ವಿರುದ್ಧ ಬರೆಯಲು ಅರಣ್ಯ ಇಲಾಖೆ ಒಬ್ಬ ಪ್ರಸಿದ್ಧ ಪರಿಸರ ತಜ್ಞನನ್ನು ಬಳಸಿಕೊಂಡಿತು. ಜನರೇ ನೇರವಾಗಿ ಅರಣ್ಯ ರಕ್ಷಣೆಗೆ ಮುಂದೆ ಬಂದಿದ್ದು ಬಹುಶಃ ಈ ಪರಿಸರ ತಜ್ಞರಿಗೆ ರುಚಿಸಿರಲಾರದು.

## ರಚನಾತ್ಮಕ ದೃಷ್ಟಿ

ಜನವಿರೋಧಿ ಅರಣ್ಯ ನೀತಿಯನ್ನು ವಿರೋಧಿಸಲು ಜನರೇ ಸ್ವಯಂಪ್ರೇರಣೆಯಿಂದ ಅಪ್ಪಿಕೋ ಆರಂಭಿಸಿದರು. ಅಪ್ಪಿಕೋ ಮೂಲತಃ ಹುಟ್ಟಿದ್ದು ಅರಣ್ಯ ನಾಶವನ್ನು ತಡೆಯಲು. ಈ ನಕಾರಾತ್ಮಕ ಸ್ವರೂಪವನ್ನು ಹೋಗಲಾಡಿಸಲು ಅಪ್ಪಿಕೋ, ಜನಪ್ರಜ್ಞೆ ಬೆಳೆಸುವ ಮತ್ತು ಅರಣ್ಯ ಸಂಪತ್ತನ್ನು ಮಿತವಾಗಿ ಬಳಸುವ ಕಾರ್ಯಕ್ರಮಗಳನ್ನು ಹಾಕಿಕೊಂಡಿತು. ಹಳ್ಳಿಯ ಯುವಕರು ಬೀಜ ಸಂಗ್ರಹಣಾ ಕಾರ್ಯ ಆರಂಭಿಸಿ ತಾವೇ ನರ್ಸರಿ ಮಾಡತೊಡಗಿದರು. ಬೋಳು ಗುಡ್ಡೆಗಳ ಮೇಲೆ ಗಿಡಗಳನ್ನು ನೆಟ್ಟರು. ಇಷ್ಟೇ ಅಲ್ಲದೆ ಅರಣ್ಯದ ಮೇಲೆ ಜನರ ಅವಲಂಬನವನ್ನು ಕಡಿಮೆ ಮಾಡಲು ಅಪ್ಪಿಕೋ ಕಾರ್ಯಕರ್ತರು ಒಲೆ ಹಾಕಲಾರಂಭಿಸಿದರು. ಸಗಣಿ ಅನಿಲ ಬಳಸುವ ಕುರಿತು ಜನರಿಗೆ ತಿಳಿಹೇಳಿದರು. ಹಳ್ಳಿ ಹಳ್ಳಿಗಳಲ್ಲಿ ಜನಸಂಪರ್ಕ ಸಭೆ ಶಿಬಿರಗಳನ್ನು ಏರ್ಪಡಿಸಿ ಅರಣ್ಯವನ್ನು ಉಳಿಸುವ ಬೆಳೆಸುವ ಮತ್ತು ಬಳಸುವ ಕುರಿತು ಚರ್ಚಿಸಿದರು. ಇಂಥ ರಚನಾತ್ಮಕ ಕಾರ್ಯಕ್ರಮಗಳೇ ಅಪ್ಪಿಕೋ ಗಟ್ಟಿಯಾಗಿ ಉಳಿಯಲು ಕಾರಣ. ಅರಣ್ಯ ಮತ್ತು ಅಭಿವೃದ್ಧಿಯ ಕುರಿತು ಜನರ ದೃಷ್ಟಿಯನ್ನು ಬದಲಾಯಿಸಲು ಇವೆಲ್ಲ ಶಾಶ್ವತ ಕಾರ್ಯಕ್ರಮಗಳಾದವು. ಅಪ್ಪಿಕೋದ ಮುಖ್ಯ ಉದ್ದೇಶ ಪ್ರಕೃತಿ ಮತ್ತು ಮನುಷ್ಯನ ಮಧ್ಯೆ ಸಾಮರಸ್ಯವನ್ನು ತಂದು ಅಭಿವೃದ್ಧಿ ಸಾಧಿಸುವುದು.

## ಈ ಜನಾಂದೋಲನ ಸಾಧಿಸಿದ್ದೇನು?

ರಾಜ್ಯದ ತುಂಬೆಲ್ಲ ಮತ್ತು ಜನಸಾಮಾನ್ಯರಲ್ಲಿ ಪ್ರಜ್ಞೆ ಹುಟ್ಟಲು ಕಾರಣ ಅಪ್ಪಿಕೋ ಆಂದೋಲನ ಎಂಬುದು ಸ್ಪಷ್ಟ. ಜನರ ಹೃದಯವನ್ನು ತಲುಪುವಲ್ಲಿ ಅಪ್ಪಿಕೋ

ನಾಕಷ್ಟು ಯಶಸ್ಸು ಗಳಿಸಿದೆ. ಈ ಪ್ರಜ್ಞೆ ಹಳ್ಳಿಯ ಹೆಣ್ಣು ಮಕ್ಕಳು ಮತ್ತು ಇತರರಲ್ಲಿ ಗೀತೆಗಳು ಮತ್ತು ಜಾನಪದ ಪದ್ಯಗಳನ್ನು ಬರೆಯಲು ಪ್ರೇರಣೆ ನೀಡಿತು. ಅಪ್ಪಿಕೋವನ್ನು ವಸ್ತುವನ್ನಾಗಿ ಮಾಡಿಕೊಂಡು ನಾಟಕಗಳು ಬರೆಯಲ್ಪಟ್ಟವು. ಅಪ್ಪಿಕೋ ಸಂದೇಶವನ್ನು ಪ್ರಚುರಪಡಿಸಲು ಯಕ್ಷಗಾನವನ್ನೂ ಬಳಸಿಕೊಳ್ಳಲಾಯಿತು. ಯಕ್ಷಗಾನದ ಮಟ್ಟಿನಲ್ಲಿ ಅಪ್ಪಿಕೋ ಪದ್ಯಗಳು ರಚನೆಯಾದವು. ಮೊತ್ತ ಮೊದಲ ಬಾರಿಗೆ ಹಳ್ಳಿಗರು ಪ್ರಕೃತಿಯ ಪ್ರಾಮುಖ್ಯವನ್ನು ಚಿತ್ರಿಸುವ ಬೀದಿ ನಾಟಕಗಳನ್ನು ನೋಡಿದರು. ಸ್ವಲ್ಪದರಲ್ಲಿ ಹೇಳುವುದಾದರೆ ಕರ್ನಾಟಕದಲ್ಲಿ ಪರಿಸರ ಪ್ರಜ್ಞೆ ಬೆಳೆಯಲು ಅಪ್ಪಿಕೋ ಪ್ರೇರಣೆ ನೀಡಿತು.

ಸದ್ಯದ ಜನಾಂದೋಲನದಲ್ಲಿ ಮತ್ತು ಚಳವಳಿಯಲ್ಲಿ ಜನ ತಮ್ಮ ಹಕ್ಕುಗಳಿಗೆ ಒತ್ತು ಕೊಡುತ್ತಾರೆ. ಸಾಮಾನ್ಯವಾಗಿ ಯಾವುದೇ ಚಳವಳಿಯೂ ತನ್ನ ಕರ್ತವ್ಯಗಳ ಕುರಿತು ಅಂತರಂಗ ವಿಶ್ಲೇಷಣೆಗೆ ತೊಡಗುವುದಿಲ್ಲ. ಹಕ್ಕುಗಳಿಗಾಗಿ ಹೋರಾಡುವಾಗ ತಮ್ಮ ಕರ್ತವ್ಯಗಳ ಕುರಿತೂ ಯೋಚಿಸಬೇಕು. ಜನರ ಕರ್ತವ್ಯಗಳ ಕುರಿತೂ ಅಪ್ಪಿಕೋ ಒತ್ತಿಹೇಳುತ್ತಿದೆ. ಏರುತ್ತಿರುವ ಜನಸಂಖ್ಯೆ ಮತ್ತು ಜನರ ತಪ್ಪು ರೂಢಿಗಳಾದ ಬೆಟ್ಟ-ಬೇಣಗಳನ್ನು ಸುಡುವದು, ಮಳೆಗಾಲದಲ್ಲಿ ಸೊಪ್ಪು ಕಡಿಯುವದು ಮುಂತಾದ ಕಾರಣಗಳಿಂದಾಗಿ ಅರಣ್ಯ ನಾಶದಲ್ಲಿ ಜನರ ಪಾತ್ರವೂ ಇಲ್ಲದ್ದಿಲ್ಲ. ಜನರಿಂದಾಗುವ ಇಂಥ ತಪ್ಪುಗಳ ಬಗ್ಗೆ ಅಪ್ಪಿಕೋ ಜನರಿಗೆ ತಿಳಿಸಿ ಹೇಳಿದೆ, ಹೇಳುತ್ತಿದೆ. ಮರಗಳನ್ನು ಕಡಿಯಬಾರದೆಂದು ಸರಕಾರಕ್ಕೆ ಒತ್ತಾಯ ತರುವ ಜನ ಮೊದಲು ತಾವು ಹಸಿ ಮರಗಳನ್ನು ಕಡಿಯುವುದನ್ನು ನಿಲ್ಲಿಸಬೇಕೆಂದು ಅಪ್ಪಿಕೋ ಜನರನ್ನು ಕೇಳಿಕೊಂಡಿದೆ. ನಾವು ಏನನ್ನು ಕೇಳುತ್ತಿರುವೆವೋ ಅದನ್ನು ನಾವು ಮೊದಲು ಮಾಡಿ ತೋರಿಸಬೇಕು. ಇಲ್ಲಿ ಬೇಕಾಗಿರುವುದು ಹೃದಯ ಪರಿವರ್ತನೆ, ಪ್ರಕೃತಿಯೊಂದಿಗೆ ಸಾಮರಸ್ಯ ಸಾಧಿಸುವುದು.

ಆದರೆ ಈ ಆಂದೋಲನದಿಂದ ಅರಣ್ಯ ನೀತಿಯಲ್ಲಿ ಬದಲಾವಣೆಯಾಗಲಿಲ್ಲ, ವ್ಯಾಪಾರೀ ಧೋರಣೆಯಿಂದ ಪಶ್ಚಿಮ ಘಟ್ಟದಲ್ಲಿನ ಅರಣ್ಯದಲ್ಲಿ ಹಸಿರು ಮರಗಳನ್ನು ಕಡಿಯಬಾರದೆಂದು ನಮ್ಮ ಬೇಡಿಕೆಯಾಗಿತ್ತು. ಹಸಿರು ಮರಗಳನ್ನು ಕಡಿಯುವುದು ಬಂದಾಗಿದ್ದು ಸಿರ್ಸಿ ಅರಣ್ಯ ವಿಭಾಗದಲ್ಲಿ ಮಾತ್ರ. ಅದ್ದರಿಂದ ನಾವು ಸಾಧಿಸಿರುವ ಯಶಸ್ಸು ಸಣ್ಣದು. ಮರಗಳನ್ನು ಸಂಪೂರ್ಣ ಕಡಿದು ಹಾಕಿ ಅಲ್ಲಿ ಒಂದೇ ಜಾತಿಯ ಗಿಡಗಳನ್ನು ನೆಡುವ ಕಾರ್ಯ ಹಾಗೆಯೇ ಮುಂದವರಿದಿದೆ. ನಾವು ಸಾಧಿಸಿರುವದು ತೀರಾ ಅತ್ಯಲ್ಪ. ಅರಣ್ಯವನ್ನು ಗಾಳಿ, ನೀರು ಮತ್ತು ಕೃಷಿಗಾಗಿ ಮಣ್ಣನ್ನು ತಯಾರಿಸುವ ಕಾರ್ಖಾನೆಯೆಂದು ತಿಳಿದು ವರ್ತಿಸಬೇಕೆಂಬ ನಮ್ಮ ಬೇಡಿಕೆ ಅಲಕ್ಷಿಸಲ್ಪಟ್ಟಿದೆ. ಅರಣ್ಯವನ್ನು ಉದ್ದಿಮೆಗಳಿಗೆ ಬೇಕಾಗುವ ಕಚ್ಚಾ ವಸ್ತುಗಳನ್ನು ಒದಗಿಸುವ ಹಾಗು ಪಟ್ಟಣಗಳಿಗೆ ಕಟ್ಟಿಗೆ ಪೂರೈಸುವ ಉಗ್ರಾಣವೆಂಬುದಾಗಿ ಸರಕಾರ ತಿಳಿದಹಾಗಿದೆ.

## ಪರಿಸರ ದೃಶ್ಯ

ಕೇಂದ್ರ ಹಾಗೂ ಕೆಲವು ರಾಜ್ಯಗಳಲ್ಲಿ ಪರಿಸರ ಇಲಾಖೆಯೆಂಬುದೊಂದಿದೆ. ಈ ಇಲಾಖೆಗಳು ಸರಕಾರೀ ಅಧಿಕಾರಿಗಳ ಕೈಗೊಂಬೆಗಳಂತಿದ್ದು ಚೈತನ್ಯಶೂನ್ಯವಾಗಿವೆ. ಇವುಗಳ ಬಳಿ ಇರುವ ನಿಧಿಯ ಹೆಚ್ಚಿನ ಭಾಗ ಆಡಳಿತಕ್ಕೆ ಮತ್ತು ಸಂಶೋಧನೆಗೆ ಖರ್ಚಾಗುತ್ತಿದೆ. ಈ ಇಲಾಖೆಗಳು ಜನರ ಆಂದೋಲನಕ್ಕೆ ಯಾವುದೇ ಸಹಾಯ ಮಾಡುವುದಿಲ್ಲ. ಮಣ್ಣಿನ ಮಕ್ಕಳ ಹಂತದಲ್ಲಿ ನಡೆಯುವ ಪರಿಸರ ರಕ್ಷಣೆಯ ಚಳವಳಿಯಿಂದ ಧೈರ್ಯಪಡೆಯುವುದರ ಬದಲು, ಇವು ಇಂಥ ಚಳವಳಿಗಳನ್ನು ಅಲಕ್ಷಿಸುತ್ತವೆ. ಈ ಇಲಾಖೆಗಳ ಪರಿಸರ ನೀತಿ ಸಹ ವಾಸ್ತವಕ್ಕೆ ದೂರವಾಗಿದೆ. ತಮ್ಮದೇ ಆದ ದಂತ ಗೋಪುರದಲ್ಲಿ ಕುಳಿತು ಜನರ ಭವಿಷ್ಯವನ್ನು ನಿರ್ಧರಿಸುವ

ಜನ ಇವರು.

ಪರಿಸರದ ಬಗ್ಗೆ ಕೆಲಸ ಮಾಡುವ ಎರಡನೆಯ ಗುಂಪೆಂದರೆ ಸರಕಾರೇತರ ಸಂಸ್ಥೆಗಳು. ಇತ್ತಿತ್ತಲಾಗಿ ಈ ಸರಕಾರೇತರ ಪರಿಸರ ಸಂಸ್ಥೆಗಳು ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಬೇರು ಬಿಟ್ಟಿವೆ. ಈ ಸಂಸ್ಥೆಗಳ ಪ್ರಮುಖ ಲಕ್ಷಣಗಳೆಂದರೆ ಇವು ಪಟ್ಟಣಗಳಲ್ಲಿ ತಳವೂರಿದಂಥವು, ಪಟ್ಟಣದ ಮಧ್ಯಮ ಮೇಲು ವರ್ಗದ ಜನರಿಂದ ಪ್ರಾರಂಭಿಸಲ್ಪಟ್ಟು ಅವರಿಂದಲೇ ನಡೆಸಲ್ಪಡುವಂಥವು. ಈ ಜನ ದೊಡ್ಡ ದೊಡ್ಡ ಶಬ್ದಗಳನ್ನು ಬಳಸಿ ವಿದ್ಯಾವಂತರು ಮರುಳಾಗುವಂತೆ ಒಳ್ಳೊಳ್ಳೆ ವರದಿಗಳನ್ನು ಬರೆಯುತ್ತಾರೆ. ಬಹುತೇಕ ಸಂಸ್ಥೆಗಳು ವಿದೇಶೀ ಸಂಸ್ಥೆಗಳಿಂದ ಹಣ ಪಡೆಯುತ್ತವೆ. ಇವು ತಯಾರಿಸುವ ಸಂಶೋಧನಾ ಬರಹಗಳು ಜನಸಾಮಾನ್ಯರ ಪರಿಸರ ಆಂದೋಲನದ ಅಂತ್ಯಕ್ರಿಯೆ ಮಾಡುತ್ತವೆ. ಬಹಳಷ್ಟು ಸಂಸ್ಥೆಗಳು ಬದುಕಲು ಹೋರಾಡುವ ಪರಿಸರ ಆಂದೋಲನದ ಮೇಲೆ ಜೀವಿಸುತ್ತಾರೆ. ಈ ಸಂಸ್ಥೆಗಳಿಗೆ ಹಳ್ಳಿಗಳ ಪರಿಚಯ ಕಡಿಮೆ. ಸಮಾಜದಲ್ಲಿಯ ವ್ಯಾಪಾರೀ ಧೋರಣೆ ಪರಿಸರದ ಸನ್ನಿವೇಶವನ್ನು ಆಕರ್ಷಿಸಿದೆ. ಭಾರತದಲ್ಲಿ ಈ ಗುಂಪಿನ ಬಹಳಷ್ಟು ಪರಿಸರ ಸಂಸ್ಥೆಗಳು ಜನಸಾಮಾನ್ಯರ ಚಳವಳಿಯ ಮುಖವಾಣಿಗಳ ಪಾತ್ರ ವಹಿಸಿವೆ. ಬಹಳಷ್ಟು ಸಲ ಇವು ಜನಾಂದೋಲನವನ್ನು ತಮ್ಮ ಹಿಡಿತಕ್ಕೆ ತೆಗೆದುಕೊಂಡು ಈ ಆಂದೋಲನದ ಬೆಳವಣಿಗೆಯನ್ನೇ ಹಾಳು ಮಾಡಿದ್ದುಂಟು. ಸರಕಾರೇತರ ಪರಿಸರ ಸಂಸ್ಥೆಗಳ ಕುರಿತು ಸಾಮಾನ್ಯವಾಗಿ ನನ್ನ ಅನುಭವ ಇದು. ಇದಕ್ಕೆ ಅಪವಾದಗಳಿರಬಹುದು, ಜನರ ಆಂದೋಲನದ ಬೆಳವಣಿಗೆಯನ್ನು ಕೆಡಿಸದೆ ಅದಕ್ಕೆ ಸಹಾಯ ಮಾಡುವ ಸಂಸ್ಥೆಗಳೂ ಇವೆ.

ಈ ಮೇಲಿನ ಪರಿಸರ ಸ್ವರೂಪಕ್ಕೆ ವಿರುದ್ಧವಾಗಿರುವುದು ಜನರ ಪರಿಸರ ದೃಷ್ಟಿ. ಜೀವನಕ್ಕಾಗಿ ಹೋರಾಡುವ ಜನ ಅರಣ್ಯನಾಶದ ಬಗ್ಗೆಯಾಗಲಿ, ನದಿ ಸಮುದ್ರಗಳ ನೀರು ಕೆಡುವ ವಿಚಾರದಲ್ಲಾಗಲಿ, ತಳೆಯುವ ಪರಿಸರ ದೃಷ್ಟಿಯೇ ಬೇರೆ. ಈ ಚಳವಳಿಗಳಲ್ಲಿ ಭಾಗವಹಿಸಿದ ಜನ ಜೀವನದಲ್ಲಿ ಕಷ್ಟಗಳನ್ನುಂಡವರು. ಇವರೆಲ್ಲ ಹೋರಾಡುವುದು ಅಭಿವೃದ್ಧಿಯ ಹೆಸರಿನಲ್ಲಿ ನಡೆಯುವ ಕಾರ್ಯಕ್ರಮಗಳ ವಿರುದ್ಧವಾಗಿ, ಇವರದು ಸಮಗ್ರ ದೃಷ್ಟಿ. ಜೀವನದ ಒಳಸಂಬಂಧಗಳ ಅರಿವುಳ್ಳ ಇವರು ಅಭಿವೃದ್ಧಿಯ ಸ್ವರೂಪದಲ್ಲಿಯ ಬದಲಾವಣೆಗಾಗಿ ಹೋರಾಡುತ್ತಾರೆ. ಪ್ರಕೃತಿಯ ಸಮತೋಲನವನ್ನು ಹಾಳುಮಾಡದ ಅಭಿವೃದ್ಧಿಯನ್ನು ಬಯಸುತ್ತಾರೆ. ಹೆಚ್ಚಿನ ಸಂದರ್ಭಗಳಲ್ಲಿ ಜನರ ಈ ದೃಷ್ಟಿ ನಿರಾಕರಿಸಲ್ಪಡುತ್ತದೆ. ಇವರನ್ನು ಪ್ರತಿಗಾಮಿಗಳೆಂದು ಕರೆಯಲಾಗುತ್ತದೆ.

ಮೊದಲು ಹೇಳಿದ ಎರಡು ಪರಿಸರ ಗುಂಪುಗಳು ಸಮಸ್ಯೆಯನ್ನು ಬಿಂಬಿಸಲು ಈಗ ಹೊಸದೊಂದು ಘೋಷಣೆಯನ್ನು ಸೃಷ್ಟಿಸಿವೆ. ಇವರ ಕಟ್ಟ ಕಡೆಯ ಉತ್ತರವೇನೆಂದರೆ ಪರಿಸರ ಅಭಿವೃದ್ಧಿ. ಪರಿಸರವನ್ನು ಅಭಿವೃದ್ಧಿ ಪಡಿಸಬಹುದಾದ ವಸ್ತುವೆಂದು ಭಾವಿಸಿ, ಪರಿಸರ ಸಮತೋಲನವನ್ನು ಒಂದು ಪ್ರತ್ಯೇಕ ಅಸ್ತಿತ್ವವೆಂದು ಪರಿಗಣಿಸಲಾಗುತ್ತಿದೆ. ಈ ತರದ ಪರಿಸರ ಅಭಿವೃದ್ಧಿ ಕಲ್ಪನೆ, ಜೀವನದ ಪ್ರತಿಯೊಂದು ಮುಖವನ್ನೂ ಒಳಗೊಳ್ಳುವ ವಿಶಾಲ ಸ್ವರೂಪದ ಕಲ್ಪನೆಯನ್ನು ಅಲ್ಲಗಳೆಯುತ್ತದೆ. ಇದೊಂದು ಅಪಸರದ ಕಲ್ಪನೆ. ಇದು ಪರಿಸರದಲ್ಲಿರುವ ಜೀವಿಗಳ ಪರಸ್ಪರ ಸಂಬಂಧಗಳನ್ನು ಅಲ್ಲಗಳೆಯುತ್ತದೆ. ಈ ಪರಿಸರದ ಅಭಿವೃದ್ಧಿಯು ಜನ ಅಭಿವೃದ್ಧಿಯ ಹೆಸರಿನಲ್ಲಿ ನಡೆಯುವ, ತನ್ಮೂಲಕ ದೇಶದ ಬಡವರ್ಗದ ಜನರನ್ನು ಗೋಳಿಗೀಡುಮಾಡುವ ಕಾರ್ಯಕ್ರಮಗಳನ್ನು ಪ್ರಶ್ನಿಸುವುದಿಲ್ಲ. ದೌರ್ಭಾಗ್ಯದಿಂದ ಪರಿಸರದ ಬಗೆಗಿನ ಈ ಏಮ್ಮುಖ ದೃಷ್ಟಿಯೇ ನಿರ್ಣಯ ತೆಗೆದುಕೊಳ್ಳುವ ಜನರ ಮಧ್ಯೆ ಜನಪ್ರಿಯತೆ ಗಳಿಸುತ್ತದೆ.

## ವೈಯಕ್ತಿಕ ವಿಷಯಗಳು

ನನ್ನದು ಜನರನ್ನು ಸಂಘಟಿಸುವ,

ಅಪ್ಪಿಕೋ ವಿಚಾರಧಾರೆಗಳನ್ನು ಪ್ರಚುರ ಪಡಿಸುವ, ಜನರು ಕ್ರಿಯಾಶೀಲರಾಗುವಂತೆ ಮಾಡುವ ಪಾತ್ರ. ಅಪ್ಪಿಕೋವನ್ನು ಹಲವಾರು ಅಂಗಸಂಸ್ಥೆಗಳುಳ್ಳ ಒಂದು ಕೇಂದ್ರ ಸಂಸ್ಥೆಯನ್ನಾಗಿ ಕಟ್ಟುವುದರಲ್ಲಿ ನನಗೆ ನಂಬಿಗೆಯಿಲ್ಲ. ನನ್ನ ಕೆಲಸವೆಂದರೆ ಜನರನ್ನು ಪ್ರೇರೇಪಿಸುವುದು. ಪರಿಸರದ ಬಗ್ಗೆ ಕಾಳಜಿಯುಳ್ಳ ಜನರನ್ನು ಕಲೆ ಹಾಕುವುದು. ಇಂಥ ಜನರಾಗಲಿ, ಗುಂಪುಗಳಾಗಲೀ ತಾವೇ ನಿರ್ಣಯ ತೆಗೆದುಕೊಳ್ಳಲು ಸ್ವತಂತ್ರರು. ಪರಿಸರದ ಬಗೆಗೆ ಕಳವಳವುಳ್ಳ ಗುಂಪುಗಳಲ್ಲಿ ವಿಶ್ವಾಸವನ್ನು ತುಂಬಿ ಅವರು ತಮ್ಮ ಸಮಸ್ಯೆಗಳನ್ನು ತಾವೇ ಬಗೆಹರಿಸಬೇಕೆಂಬುದೇ ನನ್ನ ವಿಚಾರ. ಇದು ಕೆಲಸಗಳ ವಿಕೇಂದ್ರೀಕರಣಕ್ಕೆ ದಾರಿಮಾಡಿಕೊಡುತ್ತದೆ. ಈ ವಿಕೇಂದ್ರೀಕೃತ ಗುಂಪುಗಳು ಆರಂಭಿಸಿದ ಯಾವುದೇ ಚಳುವಳಿ ಹೆಚ್ಚು ಕಾಲ ಬಾಳುವದಲ್ಲದೆ ಇದು ನೀಡುವ ಪರಿಣಾಮವೂ ಶಾಶ್ವತವಾಗಿರುತ್ತದೆ.

ಈ ಎರಡು ವರ್ಷಗಳ ನನ್ನ ಕೆಲಸದಲ್ಲಿ ನಾನು ಸೋಲು ಗೆಲವು ಎರಡನ್ನೂ ಕಂಡಿದ್ದೇನೆ. ಒಟ್ಟಾರೆ ಜನರಲ್ಲಿ ಪರಿಸರದ ಬಗ್ಗೆ ಪ್ರಜ್ಞೆ ಹುಟ್ಟಿದೆಯಾದರೂ ಇದು ಕೃತಿಗಿಳಿಯುವ ವಿಷಯದಲ್ಲಿ ನನಗೆ ಅನುಮಾನವಿದೆ. ಒಂದು ಗ್ರಾಮದಲ್ಲಿ ಮಾತ್ರ ನರ್ಸರಿ ಪ್ರಾರಂಭಿಸಿದ್ದಾರೆ. ಕೆಲವೇ ಹಳ್ಳಿಗಳ ಜನ ಗಿಡ ನೆಡುವ ಕೆಲಸ ಮಾಡಿದ್ದಾರೆ. ಗಿಡಮರಗಳನ್ನು ನೋಡುವ ಜನರ ದೃಷ್ಟಿಯೇನೋ ಬದಲಾಗಿದೆ. ಗಿಡಗಳು ಹುಟ್ಟಿ ಬೆಳೆಯಲು ತಾವು ಅರಣ್ಯವನ್ನು ಆದಷ್ಟು ಕಡಿಮೆ ರೀತಿಯಲ್ಲಿ ಅವಲಂಬಿಸಬೇಕೆಂಬ ಭಾವನೆ ಜನರಲ್ಲಿ ಬೆಳೆಯುತ್ತಿದೆ. ಜನರು ಸ್ವ-ಇಚ್ಛೆಯಿಂದ ಅಸ್ತ್ರ ಒಲೆ ಹಾಕುವ ಕಾರ್ಯಕರ್ತರನ್ನು ಕರೆಯುತೊಡಗಿದ್ದಾರೆ. ಈ ಎಲ್ಲ ಸಾಧನೆಗಳು ನನಗೆ ಸಮಾಧಾನ ತಂದರೂ ಕಣ್ಣಿಗೆ ಎದ್ದುಕಾಣದ ಇಂಥ ಕೆಲಸಗಳನ್ನು ಅಳೆಯುವುದು ಕಷ್ಟ. ಎರಡು ವರ್ಷದಲ್ಲಾದ ಈ ಪರಿಸರ ದೃಷ್ಟಿಯಲ್ಲಿಯ ಬದಲಾವಣೆಯನ್ನು ಗುರುತಿಸುವದೂ ಸುಲಭವಲ್ಲ. ಜನರ ಮನೋಧರ್ಮವನ್ನು ಬದಲಿಸುವುದೂ ಒಂದು ರಚನಾತ್ಮಕ ಕೆಲಸವೇ ಎಂದು ನನ್ನ ಅನಿಸಿಕೆ. ಏಕೆಂದರೆ, ದೃಷ್ಟಿಯಲ್ಲಿ ಬದಲಾವಣೆಯಾದಾಗ ಅದಕ್ಕನುಗುಣವಾದ ಕ್ರಿಯೆ ಹುಟ್ಟಿಯೇ ಹುಟ್ಟುತ್ತದೆ.

ಅಪ್ಪಿಕೋದಲ್ಲಿ ನನ್ನನ್ನು ನಾನು ತೊಡಗಿಸಿಕೊಂಡಿದ್ದು ಅತಿಯಾಯಿತೇನೋ ಎಂದು ಅನಿಸುತ್ತಿದೆ. ಯಾಕೆಂದರೆ ಅಪ್ಪಿಕೋ ಮತ್ತು ನಾನು ಒಂದೇ ಎಂದು ಜನ ಭಾವಿಸಿದ್ದಾರೆ. ಒಬ್ಬನೇ ವ್ಯಕ್ತಿಯ ಮೇಲೆ ಅಪ್ಪಿಕೋ ಅವಲಂಬಿಸುವದು ಅಪಾಯಕಾರಿ. ಈಗಲಾದರೂ, ನಾನಿಲ್ಲದಿದ್ದರೂ ಅಪ್ಪಿಕೋ ಕೆಲಸ ನಡೆಯುವ ಕ್ಷೇತ್ರವೆಂದರೆ ಸಿರ್ಸಿ ವಿಭಾಗ ಮಾತ್ರ. ಇದಕ್ಕೆ ನಾನು ಕೆಲಸ ಮಾಡುವ ರೀತಿಯೂ ಕಾರಣವಾಗಿರಬಹುದು. ಹೀಗೆಯೇ ಮುಂದುವರಿದರೆ ಪಾಂಡುರಂಗ ಗುರುವಾಗುವ ಸಂಭವವಿದೆ. ಅಡಿಯಲ್ಲಿ ಹುಲ್ಲನ್ನು ಸಹ ಬೆಳೆಯಗೊಡದ ಅಶ್ವತ್ಥ ವೃಕ್ಷವಾಗುವ ಸಂಭವವಿದೆ.

೬.೪ ಅಪ್ಪಿಕೋದಲ್ಲಿ ಕೆಲಸ ಮಾಡುವುದರಿಂದ ಬಡ ಜನರಿಗೆ ಸಹಾಯವಾಗುವುದು ಹೇಗೆ ಎಂದು ಬಹಳಷ್ಟು ಜನ ನನ್ನನ್ನು ಕೇಳಿದ್ದಾರೆ. ಅರಣ್ಯದ ಸುತ್ತಮುತ್ತ ಇರುವ ಜನ ತಮ್ಮ ಜೀವನಕ್ಕಾಗಿ ಅರಣ್ಯವನ್ನೇ ಅವಲಂಬಿಸಿದ್ದಾರೆ. ಬಹಳಷ್ಟು ಹಳ್ಳಿಗಳಲ್ಲಿ ಬೆತ್ತ ಬಿದಿರುಗಳನ್ನು ಹೆಣೆಯುವ ಜನ ಇದ್ದಾರೆ. ಔಷಧ ಸಸ್ಯಗಳನ್ನು ಸಂಗ್ರಹಿಸಿ ಕೊಡುವವರಿದ್ದಾರೆ. ಅರಣ್ಯನಾಶ ಅವರ ಜೀವನ ಗತಿಯನ್ನೇ ಹಾಳು ಮಾಡಿದೆ. ಅವರ ಜೀವನಕ್ಕೆ ಆಧಾರವಾದ ಅಡವಿಯನ್ನು ಉಳಿಸಲು ಪ್ರಯತ್ನಿಸುವುದರ ಮೂಲಕ ಈ ಬಡ ಜನತೆಗೆ ನನ್ನಿಂದ ಸಹಾಯವಾದೀತೆಂದು ನನ್ನ ನಂಬಿಗೆ. ಅಡವಿಯ ನಾಶದಿಂದ ಸರಾಗವಾಗಿ ಸಿಗುವ ನೀರು ಇಲ್ಲವಾಗಿ ಮಾಡಿಗೆ ಹೊದಿಸಲು ಹುಲ್ಲು ಸಹ ದೊರಕದೆ ಪರದಾಡು-

ತ್ತಿರುವ ಜನರ ಜೀವನದ ಪ್ರತ್ಯಕ್ಷ ಅನುಭವ ನನಗಿದೆ. ಪ್ರಕೃತಿಯ ಮಡಿಲಲ್ಲಿ ವಾಸಿಸುವ ಈ ಮಣ್ಣಿನ ಮಕ್ಕಳಿಗೆ (ಜೀವನ ನಿರ್ವಹಣೆಗಾಗಿ) ಅರಣ್ಯದ ಹುಟ್ಟುವಳಿಗಳ ಮೇಲೆ ಹಕ್ಕಿದೆ ಎಂಬುದು ನನ್ನ ಸ್ಪಷ್ಟವಾದ ವಿಚಾರ. ಆದರೆ ಈಗಾಗುತ್ತಿರುವುದೇನು? ಅರಣ್ಯ ಶ್ರೀಮಂತರ ಪ್ರತಿಷ್ಠಿತರ ಭೋಗದ ವಸ್ತುವಾಗಿ ಪರಿಣಮಿಸಿದೆ.

ಒಂದು ವ್ಯವಸ್ಥಿತವಾದ ಸಾಮಾಜಿಕ ಜೀವನ ಪದ್ಧತಿಯಲ್ಲಿ ಸುರಕ್ಷಿತ ಜೀವನ ಸಾಗಿಸುತ್ತಿರುವ ಜನರಿಗೆ ನನ್ನ ಎರಡು ವರ್ಷಗಳ ಸಂಚಾರಿ ಜೀವನವೆಂಬುದು ಕಲ್ಪನೆಗೂ ನಿಲುಕದ ವಿಷಯ. ಜನರಿಗೆ ನನ್ನ ಕೆಲಸವನ್ನು ಅರ್ಥಮಾಡಿಕೊಳ್ಳುವುದು ಕಷ್ಟ. ಅವರಿಗೆ ನಾನೊಬ್ಬ ಹುಚ್ಚನಂತೆ ತೋರಬಹುದು. ಇಷ್ಟೆಲ್ಲ ಮಾಡಿದ್ದು ಚುನಾವಣೆಯ ತಯಾರಿಗಾಗಿ ಎಂದು ಜನ ಭಾವಿಸಿದರು. ಆದರೆ ನಾನೊಬ್ಬ ರಾಜಕೀಯೇತರ ತಟಸ್ಥ ವ್ಯಕ್ತಿಯೆಂದು ಅವರಿಗೆ ಈಗ ತಿಳಿದಿದೆ. ನಾವ್ಯಾವುದೇ ವ್ಯವಸ್ಥೆಯೊಂದಿಗೆ ಹೊಂದಾಣಿಕೆ ಮಾಡಿಕೊಳ್ಳಲಾಗದ ನಾನೊಬ್ಬ ವಿಚಿತ್ರ ಮಾದರಿಯ ತಳಿ.

ಇಂಥ ಕೆಲಸದಲ್ಲಿ ತೊಡಗುವ ಮೊದಲು ನಾನು ಸ್ವತಂತ್ರ ಬರಹಗಾರನಾಗಿ ಹಣ ಗಳಿಸಬೇಕೆಂದು ಯೋಚಿಸಿದ್ದೆ. ಆರಂಭದಲ್ಲಿ ಯಶಸ್ಸು ಕಂಡರೂ ಈಗ ಪತ್ರಿಕಾ ಬರಹಗಾರನಾಗಿ ನಾನು ಗಳಿಸುತ್ತಿಲ್ಲ. ಸಂಶೋಧನಾ ಪ್ರಬಂಧಗಳನ್ನು ಬರೆಯಬೇಕೆಂಬ ಹಂಬಲವಿದ್ದರೂ, ನನ್ನ ಕಾರ್ಯಕ್ಷೇತ್ರ ವಿಸ್ತಾರವಾಗಿರುವ ಕಾರಣ ನನಗೆ ಕುಳಿತು ಬರೆಯಲು ವೇಳೆಯಿಲ್ಲ. ನನ್ನ ಮೂಲಭೂತ ಅವಶ್ಯಕತೆಗಳನ್ನು ಪೂರೈಸುವಷ್ಟಾದರೂ ಆರ್ಥಿಕ ಸಾಮರ್ಥ್ಯ ನನಗಿರಬೇಕು. ನಾನಿನ್ನೂ ಆ ಸಾಮರ್ಥ್ಯ ಗಳಿಸಿಲ್ಲ. ಸದ್ಯ ಜನರ ದೇಣಿಗೆಯಿಂದ ಅಪ್ಪಿಕೋ ಪುಸ್ತಕಗಳನ್ನು ಮಾರಿ ಬಂದ ಹಣದಿಂದ ನನ್ನ ಖರ್ಚು ನೀಗುತ್ತಿದೆ. ಈ ಎರಡು ವರ್ಷ ನಾನು ಬದುಕಿದ್ದು ಜನರ ವಿಶ್ವಾಸ, ಆದರ, ಆತಿಥ್ಯಗಳಿಂದ. ಒಂದು ವೇಳೆ ನಾನು ಮದುವೆಯಾದರೆ? ಈ ಎಲ್ಲ ವಿಷಯಗಳ ಕುರಿತು ನಾನಿನ್ನೂ ಗಂಭೀರವಾಗಿ ವಿಚಾರ ಮಾಡಿಲ್ಲ. ನಾನು ನನ್ನ ಕೆಲಸ ಮುಂದುವರಿಸಬೇಕಾದರೆ ಆರ್ಥಿಕ ಅಭದ್ರತೆಯಿಂದ ಹೊರ ಬರಬೇಕು ಎಂಬುದು ಮಾತ್ರ ನನಗೆ ಗೊತ್ತು.

## ಭವಿಷ್ಯದತ್ತ ಒಂದು ನೋಟ

೧೯೮೩ ರಲ್ಲಿ ನಾನು ಈ ಕೆಲಸ ಆರಂಭಿಸುವಾಗ ನಾನು ಏನು ಮಾಡಬೇಕೆಂಬುದರ ಬಗ್ಗೆ ನನ್ನ ವಿಚಾರ ಅಸ್ಪಷ್ಟವಾಗಿತ್ತು. ಈಗ ಅಪ್ಪಿಕೋ !ಆಂದೋಲನದ ನನ್ನ ವಿಚಾರಗಳಿಗೆ ಸ್ಪಷ್ಟ ರೂಪವನ್ನು ಕೊಟ್ಟಿದೆ. ನನ್ನ ಪಾತ್ರವನ್ನು ನಾನು ವಿಶ್ಲೇಷಿಸಿಕೊಳ್ಳುವಾಗ ನನಗೆ ಅನಿಸಿದ್ದೇನೆಂದರೆ ನಾನು ಕೆಲಸ ಮಾಡುವ ರೀತಿ ಬದಲಾಗಬೇಕು. ಮತ್ತು ಜನ ಪರಸರದ ಬಗ್ಗೆ ಕೆಲಸ ಮಾಡಲು ಸ್ವಯಂಪ್ರೇರಣೆಯಿಂದ ಮುಂದೆ ಬರಲು ಅನುವು ಮಾಡಿ ಕೊಡಬೇಕು. ಇಲ್ಲಿಯ ವರೆಗೆ ನಾನು ನನ್ನನ್ನು ಆಂದೋಲನದಲ್ಲಿ ಬಿಡುವಿಲ್ಲದೆ ತೊಡಗಿಸಿಕೊಂಡಿದ್ದೆ. ಆದರೆ ಇನ್ನು ಮುಂದೆ ಪರಿಸರವನ್ನು ಹಾಳು ಮಾಡದ ಪರ್ಯಾಯವಾದ ಅಭಿವೃದ್ಧಿ ಹೇಗೆಂಬುದನ್ನು ನಿಜ ಜೀವನದಲ್ಲಿ ತೋರಿಸಿ ಕೊಡಬೇಕಾಗಿದೆ. ಉಪದೇಶಿಸುವುದು ಸುಲಭ. ಪಾಲಿಸುವದು ಕಷ್ಟ. ಇದನ್ನು ಸಾಧಿಸಲು ನಾನು ಹಳ್ಳಿಯಲ್ಲಿ ನೆಲೆಗೊಳ್ಳಬೇಕು. ನಂತರ ಪ್ರಕೃತಿ ಸಂಪತ್ತನ್ನು ಉಪಯೋಗಿಸುವ ಹಕ್ಕು ಬಡ ಜನತೆಗೆ ಸಿಗುವಂತೆ ಮಾಡಬೇಕು. ಅಲ್ಲದೆ ಪ್ರಕೃತಿಯೊಂದಿಗೆ ಸಾಮರಸ್ಯವನ್ನು ಸಾಧಿಸಬೇಕು. ❁



## ರಾಷ್ಟ್ರ ನಿರ್ಮಾಣಕ್ಕೆ ಶ್ರಮಿಸಿದ ಕುಟುಂಬವಿದು

# ಜೋರಾಸ್ಯಾಂಕೋದ ಟಾಗೋರರು

**ಪ್ರೊ. ಸೋಮ್ಯೇನ್ ಸೋಮ್**

ಕಲಕತ್ತಾದ ಉತ್ತರಕ್ಕಿರುವ ಜನನಿಬಿಡ ಚಿತ್ಪುರ್ ಜೋರಾಸ್ಯಾಂಕೊ ವಸತಿಯ ಒಂದು ಒಳ ಮಾರ್ಗ ವಿಶಾಲ ಹಸಿರು ಹುಲ್ಲಿನ ಪಟ್ಟಿಯನ್ನು ಪ್ರವೇಶಿಸುತ್ತದೆ. ಈ ಹಸಿರಿನ ಕೊನೆಯಂಚಿನಲ್ಲಿ, ೧೭೮೪ರಲ್ಲಿ ನಿಲೋಮಣಿ ಟಾಗೋರು ಕಟ್ಟಿಸಿದ, ಕೆಂಪು ಇಟ್ಟಿಗೆಯ ಭವ್ಯ ಸೌಧ ಎದ್ದು ತೋರುತ್ತದೆ. ರಾಜಕುಮಾರ ದ್ವಾರಕಾನಾಥ (೧೭೯೪-೧೮೪೬) ರಿಂದ ಮುಂದಿನ ಐದು ಪೀಳಿಗೆಗಳು ಈ ಮನೆಯಲ್ಲಿಯೇ ಜನಿಸಿವೆ. ಈ ಮನೆತನದ ವಿಚಾರಗಳು, ಮುಂದಾಳುತ್ವ ಆಧುನಿಕ ಭಾರತದ ಪ್ರತಿಷ್ಠೆಯನ್ನು ವರ್ಧಿಸಿವೆ.

ಸಾಮಾಜಿಕ ಸುಧಾರಣೆ, ಸ್ವಾತಂತ್ರ್ಯ ಆಂದೋಲನ, ರಾಷ್ಟ್ರೀಯ ಐಕ್ಯ, ಶಿಕ್ಷಣ, ಸಾಹಿತ್ಯ, ಕಲೆ, ಸಂಸ್ಕೃತಿ, ರಾಷ್ಟ್ರ ಪ್ರಗತಿಯ ವಿಚಾರಗಳು ಮತ್ತು ಭಾರತದ ಪುನರುತ್ಥಾನ ಕಾರ್ಯದಲ್ಲಿ ಟಾಗೋರರು ಅಗ್ರಗಣಿಗಳಾಗಿದ್ದರು.

ರಾಜಕುಮಾರ ದ್ವಾರಕಾನಾಥರು ಟಾಗೋರ ಕುಟುಂಬದ ಪ್ರಥಮ ಧೀರೋದಾತ್ತ ವ್ಯಕ್ತಿ. ಇವರು ಪರ್ಶಿಯನ್. ಅರೇಬಿಕ್, ಇಂಗ್ಲೀಷ್ ಭಾಷೆಗಳ ಉದ್ದಾಮ ಪಂಡಿತರೂ ಧರ್ಮ ನಿರಪೇಕ್ಷ ಶಿಕ್ಷಣದ ಪ್ರತಿಪಾದಕರೂ ಆಗಿದ್ದರು. ಕಲಕತ್ತಾದ ವೈದ್ಯಕೀಯ ಮಹಾ ವಿದ್ಯಾಲಯವನ್ನು ಸ್ಥಾಪಿಸುವಲ್ಲಿ ಶ್ರಮಿಸಿದರಲ್ಲದೇ ವೈದ್ಯಕೀಯದಲ್ಲಿ ಉಚ್ಚ ಶಿಕ್ಷಣ ಪಡೆಯಲು ಇಂಗ್ಲಂಡಿಗೆ ಕಳುಹಿಸಲ್ಪಟ್ಟ ಮೊದಲ ಇಬ್ಬರು ಭಾರತೀಯ ವಿದ್ಯಾರ್ಥಿಗಳ ವೆಚ್ಚವನ್ನು ತಾವೇ ನೋಡಿಕೊಂಡರು.

ರಾಜಾರಾಮ ಮೋಹನರಾಯರ ಸನಿಹದ ಸಹಕಾರಿಗಳಾಗಿದ್ದ ಇವರು ಸಾಮಾಜಿಕ ಅನಿಷ್ಟಗಳ ವಿರುದ್ಧ ಹೋರಾಟ ನಡೆಸಿ 'ಸತಿ ಪದ್ಧತಿಯನ್ನು' ಕೊನೆಗಾಣಿಸುವಲ್ಲಿ ಯಶಸ್ವಿಯಾದರು. ೧೮೩೫ರಲ್ಲಿ ಪತ್ರಿಕಾ ಕಾಯ್ದೆಯನ್ನು ರದ್ದು ಮಾಡಿಸುದು ದ್ವಾರಕಾನಾಥರ ವೈಯಕ್ತಿಕ ವಿಜಯ. ಒಂದು ವಾಣಿಜ್ಯ ಬ್ಯಾಂಕು, ಒಳನಾಡು ದೋಣಿಸಾರಿಗೆ ಮತ್ತು ಸಕ್ಕರೆ ಕಾರಖಾನೆಗಳನ್ನು ಸ್ಥಾಪಿಸಿದ ಪ್ರಥಮ ಭಾರತೀಯನೆಂಬ ಕೀರ್ತಿಯೂ

ದ್ವಾರಕಾನಾಥರದೆ. ಅವರು ಸ್ಥಾಪಿಸಿದ ಬಂಗಾಲ ಕಲ್ಲಿದ್ದಲು ಸಂಸ್ಥೆ ಭಾರತದಲ್ಲಿ ಕಲ್ಲಿದ್ದಲು ಉದ್ಯಮಕ್ಕೆ ನಾಂದಿಯಾಯಿತು. ಪ್ರಗತಿಪರ ವಿಚಾರದಿಂದ ಸಾಮಾಜಿಕ ಕಾರ್ಯಗಳಲ್ಲಿ ತೊಡಗುವವರಿಗೆಲ್ಲ ದ್ವಾರಕಾನಾಥ ತಮ್ಮ ಅಭಯ ಹಸ್ತ ನೀಡುತ್ತಿದ್ದರು.

## ಮಹರ್ಷಿ ದೇವೇಂದ್ರನಾಥ

ದ್ವಾರಕಾನಾಥರ ಹಿರಿಯ ಮಗ ಮಹರ್ಷಿ ದೇವೇಂದ್ರನಾಥ (೧೮೧೭-೧೯೦೫) ಅಪೂರ್ವ ನೈತಿಕ ಗುಣಗಳ ವ್ಯಕ್ತಿಯಾಗಿದ್ದರು. ರಾಜಾ-ರಾಮ ಮೋಹನರಾಯರ ನಂತರ ಬ್ರಹ್ಮೋ ಸಮಾಜದ ಆಧ್ಯಾತ್ಮಿಕ ನೇತೃತ್ವ ವಹಿಸಿಕೊಂಡರು. ಬ್ರಹ್ಮೋ ಸಮಾಜದ ನಂಬಿಗೆಗಳಿಗೆಲ್ಲ ವೇದ ಮತ್ತು ಉಪನಿಷತ್ತುಗಳ ತತ್ವಗಳನ್ನಾಧರಿಸಿ ವ್ಯಾಖ್ಯೆ ನೀಡುತ್ತಿದ್ದರು. ಸಮಾಜ ಪ್ರಕಟಿಸುತ್ತಿದ್ದ 'ತತ್ವ ಬೋಧಿನಿ ಪತ್ರಿಕಾ' ದೇವೇಂದ್ರನಾಥರ ಮಾರ್ಗದರ್ಶನದಲ್ಲಿ ಸಾಮಾಜಿಕ ಸುಧಾರಣೆಯನ್ನು ಮುಖ್ಯ ಧ್ಯೇಯವನ್ನಾಗಿಟ್ಟುಕೊಂಡ ಪತ್ರಿಕೆಯಾಯಿತು.

ಪಾಶ್ಚಿಮಾತ್ಯ ಸಂಸ್ಕೃತಿಯ ಪ್ರಭಾವಕ್ಕೊಳಗಾಗಿ ದಿಗ್ಭ್ರಮೆಗೊಂಡ ಭಾರತದ ಯುವ ಪೀಳಿಗೆಯಲ್ಲಿ ಹೊಸ ಸ್ಥೈರ್ಯ ತುಂಬಿದರು. ಉಪನಿಷತ್ತುಗಳ ದ್ವೈವಿವಾದವನ್ನು ಪ್ರಚುರಗೊಳಿಸಿ ಭಾರತದ ಪುರಾತನ ಸಂಸ್ಕೃತಿಯ ಚೈತನ್ಯವನ್ನು ಅರುಹಿದರು. ದೇವೇಂದ್ರನಾಥರು ಪರ್ಶಿಯನ್ ಸಾಹಿತ್ಯದ ಬಗೆಗೆ ಅಧಿಕಾರ ವಾಣಿಯಿಂದ ಮಾತನಾಡಬಲ್ಲವರಾಗಿದ್ದರು. ಮುಸ್ಲಿಮ್ ಮಿತ್ರರೆಲ್ಲ ಅವರನ್ನು ಪ್ರೀತಿಯಿಂದ 'ಹಫೀಜ-ಎ-ಹಫೀಜ' ಎಂದು ಕರೆಯುತ್ತಿದ್ದರು.

ಜಗದ್ವಿಖ್ಯಾತ ಶೈಕ್ಷಣಿಕ, ಕಲಾತ್ಮಕ ಸಾಂಸ್ಕೃತಿಕ ಕೇಂದ್ರವಾಗಿ ಬೆಳೆದಿರುವ 'ಶಾಂತಿನಿಕೇತನ' ಸ್ಥಾಪಿಸಲ್ಪಟ್ಟಿದ್ದು ಮಹರ್ಷಿ ದೇವೇಂದ್ರನಾಥರಿಂದಲೆ.

## ದೇವೇಂದ್ರನಾಥ

ಮಹರ್ಷಿ ದೇವೇಂದ್ರನಾಥರ ಹಿರಿಯ ಮಗ ದೇವೇಂದ್ರನಾಥ (೧೮೪೦-೧೯೨೬) ಸತ್ಪುರುಷರ ಸಾಲಿಗೆ ಸೇರಿದವರು. ಅವರನ್ನು ಮಹಾತ್ಮಾ ಗಾಂಧೀಜಿ 'ಬರೋ ದಾದಾ'(ಹಿರಿಯಣ್ಣ) ಎಂದೇ ಕರೆಯುತ್ತಿದ್ದರು. ತತ್ವಜ್ಞಾನಿ ಕವಿಯಾಗಿದ್ದ ಅವರು ಬಂಗಾಲಿ ಭಾಷೆಗೆ ಶೀಘ್ರಲಿಪಿ ಪದ್ಧತಿಯನ್ನು ಅಳವಡಿಸಿದ್ದರು. 'ಸಾಧನಾ' ಎಂಬ ಕೌಟುಂಬಿಕ ಮಾಸಿಕವನ್ನೂ ದೇವೇಂದ್ರನಾಥ ಪ್ರಾರಂಭಿಸಿದರು. ನಂತರ ಟಾಗೋರ ಕುಟುಂಬ 'ಭಾರತಿ' ಮತ್ತು 'ಬಾಲಕ' ಎಂಬ ಇನ್ನೆರಡು ನಿಯತಕಾಲಿಕಗಳನ್ನು ಪ್ರಕಟಿಸಲಾರಭಿಂಸಿತು. ದೇವೇಂದ್ರನಾಥರ ಮಕ್ಕಳು, ಮೊಮ್ಮಕ್ಕಳು, ಈ ಪತ್ರಿಕೆಗಳ ಮೂಲಕ ತಮ್ಮ ಸಾಹಿತ್ಯ ಪ್ರತಿಭೆಯನ್ನು ವ್ಯಕ್ತಪಡಿಸುತ್ತಿದ್ದರು.

## ಮೊದಲ ಐ.ಸಿ.ಎಸ್. ಅಧಿಕಾರಿ

ಮಹರ್ಷಿ ದೇವೇಂದ್ರನಾಥರ ದ್ವಿತೀಯ ಪುತ್ರ ಸತ್ಯೇಂದ್ರನಾಥ (೧೮೪೨-೧೯೨೩) ಆಗಿನ ಭಾರತೀಯ ನಾಗರಿಕ ಸೇವೆಯ ಪರೀಕ್ಷೆಯಲ್ಲಿ ಯಶಸ್ವಿಯಾದ ಪ್ರಥಮ ಭಾರತೀಯ. ಸತ್ಯೇಂದ್ರನಾಥ (ಮತ್ತು ದೇವೇಂದ್ರನಾಥರ ಅಕ್ಕನ ಮಗ ಗಣೇಂದ್ರನಾಥರು) ನವಗೋಪಾಲ ಮಿತ್ರಾರ ಸಹಕಾರದೊಂದಿಗೆ ರಾಷ್ಟ್ರೀಯ ಉದ್ಯಮಗಳಿಗೆ ಪ್ರೋತ್ಸಾಹ ನೀಡಲು, ೧೮೬೭ ರಲ್ಲಿ ಪ್ರಥಮ ರಾಷ್ಟ್ರೀಯ ಮೇಳವನ್ನು ಪ್ರಾರಂಭಿಸಿದರು. ಇದು ಹದಿಮೂರು ವರ್ಷಗಳ ವರೆಗೆ ವಿಜೃಂಭಿಸಿ, ಮುಂದೆ ರಾಷ್ಟ್ರೀಯ ಕಾಂಗ್ರೆಸ್ಸಿಗೆ ದಾರಿ ಮಾಡಿಕೊಟ್ಟಿತು. ೧೮೬೭ ರಲ್ಲಿ ಮೇಳದ ಪ್ರಾರಂಭೋತ್ಸವಕ್ಕಾಗಿ ಸತ್ಯೇಂ-ದ್ರನಾಥರು ರಾಷ್ಟ್ರಭಕ್ತಿಯ ಗೀತೆಯೊಂದನ್ನು ರಚಿಸಿದರು. ಅದು ಅತ್ಯಂತ ಜನಪ್ರಿಯವಾಯಿತು.

ಸಾಮಾಜಿಕ ನಿಷೇಧಗಳಿಂದ ಭಾರತೀಯ ಮಹಿಳೆ ಮುಕ್ತಳಾಗಬೇಕೆಂಬ ವಿಚಾರದಲ್ಲಿ ಸತ್ಯೇಂದ್ರನಾಥರಿಗೆ ಅಪಾರ ನಂಬುಗೆಯಿತ್ತು.

ಪರದಾ ಪದ್ಧತಿಯನ್ನು ತ್ಯಜಿಸಿ ಸಾಮಾಜಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಮತ್ತು ಮಹಿಳಾ ಶಿಕ್ಷಣಕ್ಕಾಗಿ ಇಂಗ್ಲೆಂಡಿಗೆ ಹೋಗಿ ಬರಲು ತಮ್ಮ ಪತ್ನಿ ಜ್ಞಾನನಂದಿನಿಯನ್ನು ಅವರು ಹುರಿದುಂಬಿಸಿದರು. ಇಡೀ ಸಮಾಜ ಇದರಿಂದ ಕುಪಿತಗೊಂಡಿತು. ಮಕ್ಕಳ ಸಾಹಿತ್ಯ ಕ್ಷೇತ್ರದಲ್ಲಿ ಜ್ಞಾನನಂದಿನಿಯ ಕೊಡುಗೆ ಅಪಾರ.

ದೇವೇಂದ್ರನಾಥರ ಐದನೇ ಮಗ, ಜ್ಯೋತಿರಿಂದ್ರನಾಥ (೧೮೪೯–೧೯೨೫) ಒಬ್ಬ ಸಂಗೀತ ಸಂಯೋಜಕ. ಪಾಶ್ಚಿಮಾತ್ಯ ಮತ್ತು ಭಾರತೀಯ ಸಂಗೀತವನ್ನು ಮೇಳೈಸಿ, ತನ್ನದೇ ಆದ ಹೊಸ ಮಾರ್ಗವನ್ನು ಪ್ರಾರಂಭಿಸಿ, ಚಿಕ್ಕ ತಮ್ಮ ರವೀಂದ್ರರ ಹಾಡುಗಳಿಗೆ ಅವರು ಸಂಗೀತ ನಿಯೋಜಿಸುತ್ತಿದ್ದರು. ಸಂಸ್ಕೃತ-ಫ್ರೆಂಚ್ ಪರಿಣಿತರಾಗಿದ್ದ ಜ್ಯೋತಿರಿಂದ್ರನಾಥ ೧೭ ಸಂಸ್ಕೃತ ನಾಟಕಗಳನ್ನು ಬಂಗಾಲಿ ಭಾಷೆಗೆ ಭಾಷಾಂತರಿಸಿದರಲ್ಲದೇ ಫ್ರೆಂಚ್ ನಾಟಕಗಳನ್ನೂ ಬಂಗಾಲಿ ಭಾಷೆಗೆ ಒಗ್ಗಿಸಿಕೊಂಡರು. ಬಂಗಾಲಿ ಭಾಷೆಯಲ್ಲಿ ಕೆಲ ಸ್ವತಂತ್ರ ನಾಟಕಗಳನ್ನೂ ರಚಿಸಿದ್ದಾರೆ. ಪಾತ್ರ ನಿರೂಪಣೆಯಲ್ಲಿ ಇವರದು ಸಿದ್ಧಹಸ್ತ. ನೌಕಾ ನಿರ್ಮಾಣವೂ ಸೇರಿದಂತೆ ಅನೇಕ ರಾಷ್ಟ್ರೀಯ ಉದ್ಯಮಗಳನ್ನು ಪ್ರಾರಂಭಿಸುವಲ್ಲಿ ಇವರು ಮೊದಲಿಗರು.

## ರವೀಂದ್ರನಾಥ

ದೇವೇಂದ್ರನಾಥರ ಸಂತತಿಯಲ್ಲಿ ಎಂಟನೆಯವರಾದ ರವೀಂದ್ರನಾಥ ಟಾಗೋರರ (೧೮೬೧–೧೯೪೧) ಪರಿಚಯ ಅನವಶ್ಯಕ. ಸಾಹಿತ್ಯ, ಸಂಗೀತ, ವರ್ಣಚಿತ್ರ ರಚನೆಯಲ್ಲಿ ಸಹಜ ಪಾಂಡಿತ್ಯ ಅವರಿಗಿತ್ತು. ಭಾರತ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನದಲ್ಲಿ ರಾಷ್ಟ್ರಪ್ರೇಮವನ್ನೇ ಬಡಿದೆಬ್ಬಿಸುವ 'ವಂದೇ ಮಾತರಂ' ಹಾಡಿಗೆ ಸಂಗೀತ ನಿಯೋಜಿಸಿದರು. ರವೀಂದ್ರನಾಥರ ಹಾಡುಗಳನ್ನು ಅವರ ಮರಣಾನಂತರ ಎರಡು ರಾಷ್ಟ್ರಗಳು ತಮ್ಮ ರಾಷ್ಟ್ರಗೀತೆಯನ್ನಾಗಿ ಸ್ವೀಕರಿಸಿವೆ. ೧೯೦೫ರಲ್ಲಿ ನಡೆದ ಬಂಗಾಲ ವಿಭಜನೆಯನ್ನು ಪ್ರತಿಭಟಿಸಲು, ರವೀಂದ್ರನಾಥರು ಬ್ರಿಟಿಶ್ ಸರಕುಗಳ ಮತ್ತು ರಾಷ್ಟ್ರೀಯ ಶಿಕ್ಷಣ ಮಂಡಳಿ ರಚನೆಯ ಬಹಿಷ್ಕಾರವನ್ನು ಸಂಘಟಿಸಿದ್ದರು. ತಮ್ಮ ಜೀವಮಾನದಲ್ಲಿ ರಚಿಸಿದ ರಾಷ್ಟ್ರ ಭಕ್ತಿಯ ಗೀತೆಗಳು. ಆಗಿನ ರಾಷ್ಟ್ರೀಯ ಭಾವನೆಗಳನ್ನು ಪ್ರತಿಬಿಂಬಿಸುತ್ತಿವೆ. ರಾಷ್ಟ್ರೀಯ ಐಕ್ಯತೆಗಾಗಿ ಮತ್ತು ಸಾಮರಸ್ಯದ ಧೃಢೀಕರಣಕ್ಕಾಗಿ ರಕ್ಷಾಬಂಧನವನ್ನು ಅವರು ಪ್ರಾರಂಭಿಸಿದರು.

ಶಾಂತಿನಿಕೇತನದಲ್ಲಿ ಅವರು ಪ್ರಾರಂಭಿಸಿದ ಶಾಲೆ, ಪ್ರಸಿದ್ಧ ಶಿಕ್ಷಣಕೇಂದ್ರವಾಗಿದೆ. ಇಲ್ಲಿ ಪ್ರಪಂಚದ ಎಲ್ಲೆಡೆಯಿಂದ ಪಂಡಿತರು, ಕಲಿಸಲು ಹಾಗೂ ಕಲಿಯಲು ಬರುತ್ತಾರೆ. ಇಲ್ಲಿಂದಲೇ ರಾಷ್ಟ್ರದ ತುಂಬ ಒಂದು ಹೊಸ ಕಲಾ ಪ್ರವಾಹ ಪ್ರವಹಿಸಿತು. ಸಮಾಜದ ಅನೇಕ ಕ್ಷೇತ್ರಗಳಲ್ಲಿ ಸಾಮಾಜಿಕ ಪುನರುತ್ಥಾನ ಕಾರ್ಯದಲ್ಲಿ ಶಾಂತಿನಿಕೇತನದ ವಿದ್ಯಾರ್ಥಿಗಳು ತಮ್ಮ ಸಾಮರ್ಥ್ಯವನ್ನು ತೋರಿದ್ದಾರೆ. ಈ ಶಾಲೆಯನ್ನು ೧೯೨೧ರಲ್ಲಿ ರಾಷ್ಟ್ರದ ವಿಶ್ವವಿದ್ಯಾಲಯ ಮಟ್ಟಕ್ಕೆ ಏರಿಸಲಾಯಿತು. ಮಾನವನ ವೈಯಕ್ತಿಕ ಬೆಳವಣಿಗೆಗಾಗಿ ಪ್ರಚಲಿತವಿದ್ದ ವಸಾಹತು ಶಿಕ್ಷಣ ಪದ್ಧತಿಯ ಬದಲು ಹೊಸ ಶಿಕ್ಷಣ ಪದ್ಧತಿಯನ್ನು ಈ ಶಾಲೆ ಒದಗಿಸಿತು.

## ನೊಬೆಲ್ ಪಾರಿತೋಷಕ ವಿಜೇತ

ರವೀಂದ್ರನಾಥ ರಚಿಸಿದ 'ಗೀತಾಂಜಲಿ' ಕವಿತಾ ಸಂಗ್ರಹಕ್ಕೆ ೧೯೧೩ರಲ್ಲಿ ಸಾಹಿತ್ಯಕ ವಿಷಯದ ನೊಬೆಲ್ ಬಹುಮಾನವನ್ನು ನೀಡಲಾಯಿತು. ಏಶಿಯದ ಪ್ರಜೆಗೆ ಮೊದಲ ಬಾರಿಗೆ ದೊರೆತ ನೊಬೆಲ್ ಬಹುಮಾನ ಇದಾಗಿದೆಯಲ್ಲದೆ ಇದನ್ನು ಭಾರತೀಯ ಸಾಹಿತ್ಯಕ್ಕೆ ಸಿಕ್ಕ ಜಾಗತಿಕ ಮನ್ನಣೆ ಎಂದು ಪರಿಗಣಿಸಲಾಗಿದೆ.

ಜಾಲಿಯನ್ ವಾಲಾಬಾಗ ದುರಂತದ ನಂತರ ರವೀಂದ್ರರು ನಾಲ್ಕು ವರ್ಷಗಳ ಮೊದಲು

ತಮಗೆ ನೀಡಲಾಗಿದ್ದ 'ನೈಟ್' ಪದವಿಯನ್ನು ತ್ಯಜಿಸಿ "ನೀವು ತೆಗೆದುಕೊಂಡಿರುವ ಅಮಾನುಷ ಕ್ರಮಗಳು ನಮ್ಮ ಅಸಹಾಯಕತೆಯನ್ನು ಹೊರಗೆಡವಿವೆ. ನೀವು ನೀಡಿರುವ ಗೌರವದ ಪದಕಗಳು ನಮ್ಮ ಅಪಮಾನದ ಸಮಯದಲ್ಲಿ ನಾಚಿಕೆಯಿಂದ ಕಣ್ಣು ಕುಕ್ಕಿಸುತ್ತವೆ" ಎಂದು ವೈಸರಾಯರಿಗೊಂದು ಪತ್ರ ಬರೆದರು.

## ಶ್ರೀನಿಕೇತನ

ರವೀಂದ್ರನಾಥರ ರಚನಾತ್ಮಕ ವಿಚಾರಧಾರೆ ೧೯೨೧ ರಲ್ಲಿ ಗ್ರಾಮೀಣಾಭಿವೃದ್ಧಿಯತ್ತ ಹರಿದು ಶ್ರೀನಿಕೇತನದ ಸ್ಥಾಪನೆಗೆ ಕಾರಣವಾಯಿತು. ಇದೇ ಮುಂದೆ ರಾಷ್ಟ್ರದ ಸಮುದಾಯದ ಅಭಿವೃದ್ಧಿ ಕಾರ್ಯಗಳಿಗೆ ರೂಪರೇಷೆಯಾಯಿತು. ಅವರು ಪ್ರಪಂಚವನ್ನು ಸುತ್ತಿದರಲ್ಲದೇ ಗಣ್ಯರನ್ನು ಭೇಟಿಯಾಗಿ, ಭಾಷಣಗಳನ್ನು ನೀಡಿದರು. "ರವೀಂದ್ರನಾಥರು ಸಾಂಸ್ಕೃತಿಕ ರಾಯಭಾರಿಯಾಗಿ ಭಾರತದ ಸಂದೇಶವನ್ನು ಪ್ರಪಂಚಕ್ಕೆಲ್ಲ ಸಾರುವುದರಿಂದ ಅವರು ದೇಶಕ್ಕೆ ಅತಿ ದೊಡ್ಡ ಸೇವೆ ಸಲ್ಲಿಸಿದಂತಾಗುತ್ತದೆ." ಎಂದು ಲೋಕಮಾನ್ಯ ಬಾಲಗಂಗಾಧರ ತಿಲಕರು ರವೀಂದ್ರರಿಗೆ ತಮ್ಮ ಸಕ್ರಿಯ ಬೆಂಬಲ ನೀಡಿದ್ದರು. ರೊಮೇನ್ ರೋಲಾ, ಬರ್ಟ್ರಾಂಡ್ ರಸೆಲ್, ಅಲ್ಬರ್ಟ್ ಐನ್‌ಸ್ಟೈನ್, ಸಿಲ್ವಿನ್ ಲೇವಿ ಮುಂತಾದ ಪ್ರಪಂಚ ಪ್ರಮುಖರೊಂದಿಗೆ ರವೀಂದ್ರರಿಗೆ ಉಂಟಾದ ಸ್ನೇಹದಿಂದ ಭಾರತೀಯರ ಆಶೋತ್ತರಗಳಿಗೆ ಅಮೂಲ್ಯ ಸಂಪತ್ತೇ ದೊರೆತಂತಾಯಿತು.

ರವೀಂದ್ರರಿಗೆ ಎಪ್ಪತ್ತು ವರ್ಷಗಳಾದಾಗ ಇನ್ನೊಂದು ಆಶ್ಚರ್ಯ ಕಾದಿತ್ತು. ಅತ್ಯಂತ



**ಟಾಗೋರರ ಜೋರಾಸ್ಯಾಂಕೋದ ಭವ್ಯಸೌಧ**

ಶ್ರೇಷ್ಠಮಟ್ಟದ ವರ್ಣಚಿತ್ರಗಳು ಅವರಿಂದ ಹೊರ ಹೊಮ್ಮಿದವಲ್ಲದೆ "ಆಧುನಿಕ ಭಾರತದ ಚಿತ್ರಕಲೆಯ ಮಾರ್ಗದರ್ಶಿ" ಎಂದು ಕರೆಯಲ್ಪಟ್ಟ.

ಸ್ತ್ರೀ-ಪುರುಷರಿಗಾಗಿ ಉಚ್ಚ ಮಟ್ಟದಲ್ಲಿ ನೃತ್ಯ ಮತ್ತು ಸಂಗೀತದ ಶಿಕ್ಷಣವನ್ನು ಪ್ರಾರಂಭಿಸಿ ಅನೇಕ ಪ್ರದರ್ಶನ ನಡೆಸಿದರು. ಶಾಸ್ತ್ರೀಯ ಸಂಗೀತ ಮತ್ತು ನೃತ್ಯಗಳನ್ನು ಪುನರುಜ್ಜೀವನಗೊಳಿಸಿ ಅದಕ್ಕೆ ಸಾಮಾಜಿಕ ಮನ್ನಣೆ ದೊರಕಿಸುವುದಕ್ಕೆ ಶ್ರಮಿಸಿದವರಲ್ಲಿ ರವೀಂದ್ರನಾಥರು ಮೊದಲಿಗರು. ನಿಸರ್ಗದೊಂದಿಗೆ ಇರುವ ಮಾನವನ ಸಹಜ ಸಂಬಂಧಗಳ ಆಧಾರದ ಮೇಲೆ, ರವೀಂದ್ರರು ಕೆಲ ಉತ್ಸವಗಳನ್ನು ಆರಂಭಿಸಿದನು. ಇವು ಯಾವುದೇ ದೇವತಾರಾಧನೆಯ ಉತ್ಸವಗಳಾಗದೇ ಭಾರತದ ಆದರ್ಶಗಳನ್ನು ಎತ್ತಿ ಹಿಡಿಯುವಂಥವುಗಳಾಗಿದ್ದವು. ವೃಕ್ಷಾರೋಪಣ ಮುಂದೆ ವನಮಹೋತ್ಸವವಾಯಿತು. ಹಲಾಕರ್ಷಣ, ಕೃಷಿ ಪ್ರಾರಂಭದ ದ್ಯೋತಕವಾಗಿತ್ತು. ಇದರಂತೆ ವಸಂತೋತ್ಸವ! ವರ್ಷ ಮಂಗಳ ಉತ್ಸವಗಳು.

ಮಾನವತಾವಾದಿ ರವೀಂದ್ರನಾಥರು, ೧೯೩೯ರಲ್ಲಿ ಪ್ರಾರಂಭವಾದ ಜಾಗತಿಕ ಸಮರವನ್ನು "ಮನುಕುಲದ ಬಿಕ್ಕಟ್ಟು ಮತ್ತು ಮಾನವೀಯ ಮೌಲ್ಯಗಳ ಕುಸಿತ" ಎಂದರು.

## ಸ್ವರ್ಣಕುಮಾರಿ

ದೇವೇಂದ್ರನಾಥರ ಪುತ್ರಿ ಸ್ವರ್ಣಕುಮಾರಿ (೧೮೫೬-೧೯೩೨) 'ಭಾರತಿ' ಪತ್ರಿಕೆಯ ಸಂಪಾದಕಿಯಾಗಿ, ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸಿಗೆ ಸೇವೆ ಸಲ್ಲಿಸಿದ ಪ್ರಥಮ ಮಹಿಳೆ. ಆವರ ಮಗಳು ಸರಳಾ (೧೮೭೨-೧೯೪೫) ಸಂಸ್ಕೃತ, ಇಂಗ್ಲಿಷ್ ಭಾಷೆಗಳಲ್ಲಿ ತಜ್ಞರಾಗಿದ್ದು, ಸ್ವಾತಂತ್ರ್ಯ ಹೋರಾಟದಲ್ಲಿ ಪ್ರಮುಖ ಪಾತ್ರ ವಹಿಸಿದ್ದರು. ಭಾರತವನ್ನೆಲ್ಲ ಸುತ್ತಿ ದೇಶಕ್ಕಾಗಿ ಹೋರಾಡಲು ಯುವಕರನ್ನು ಹುರಿದುಂಬಿಸಿದರು. ಅವರು ಕೆಲ ರಾಷ್ಟ್ರಭಕ್ತಿ ಗೀತಗಳನ್ನು ರಚಿಸಿದರಲ್ಲದೇ ಪುರಾತನ ಸಾಹಸಕಲೆ ಮತ್ತು ಶ್ರಮ ಸಂಸ್ಕೃತಿಯನ್ನು ಪುನುರುಜ್ಜೀವನಗೊಳಿಸಲು "ವೀರಾಷ್ಟಮಿ "ಉತ್ಸವ ಪ್ರಾರಂಭಿಸಿದರು.

ದ್ವಾರಕಾನಾಥರ ಮರಿಮಗ ಗಿರೀಂದ್ರನಾಥರು ಭಾರತೀಯ ಸಂಸ್ಕೃತಿಗೆ ದೊಡ್ಡ ಕಾಣಿಕೆ ನೀಡಿದ್ದಾರೆ. ಗಗನೇಂದ್ರನಾಥ (೧೮೬೭-೧೯೩೮) ಸಾಮಾಜಿಕ ಕಾರ್ಯಕರ್ತ, ಸಂಘಟಕ, ವರ್ಣಚಿತ್ರಕಾರ ಮತ್ತು ಶ್ರೇಷ್ಠ ನಟನಾ ಚತುರರಾಗಿದ್ದರು. ಜಾಲಿಯನವಾಲಾಬಾಗ ದುರಂತವನ್ನು ಪ್ರತಿಭಟಿಸಲು ಅವರು "ಪಂಜಾಬದಲ್ಲಿ ಶಾಂತಿ ಸ್ಥಾಪಿಸಲಾಯಿತು" ಎಂಬ ವ್ಯಂಗ್ಯ ಚಿತ್ರದ ಮೂಲಕ ತಮ್ಮ ನೋವನ್ನು ವ್ಯಕ್ತಪಡಿಸಿದರು. ಧಾರ್ಮಿಕ ಅನಿಷ್ಟಗಳು, ಶೋಷಣೆ,




"ಹೊರಗಡೆ ರಸ್ತೆಯಲ್ಲಿ ನಿಂತಿದ್ದ ಲಾರಿಯ ಟೈರು ಸಿಡಿದ ಶಬ್ದ ಅಷ್ಟೇ ಸಾರ್.!"

ಸಾಮಾಜಿಕ ರೂಢಿಗಳು, ವಸಾಹತುಶಾಹಿಯ ದಬ್ಬಾಳಿಕೆ, ಮುಂತಾದ ದುಷ್ಟ ಪರಂಪರೆಗಳ ವಿರುದ್ಧ ಹೋರಾಡಲು, ತಮ್ಮ ಕುಂಚದ ಮೂಲಕ ಪ್ರಯತ್ನಿಸಿದ ಪ್ರಥಮ ಭಾರತೀಯ ಅವರು. ಬಂಗಾಲ ದೇಶಿ ನೇಯ್ಗೆಗೆ ಜೀವ ದಾನ ಮಾಡಿ, ಭಾರತೀಯ ಗುಡಿ ಕೈಗಾರಿಕೆಯ ವಸ್ತುಗಳನ್ನು ಮಾರುಕಟ್ಟೆಗೆ ತಂದುದಕ್ಕಾಗಿ ಅವರಿಗೆ ನಾವು ಕೃತಜ್ಞರಾಗಿರಬೇಕು. ಅವರೂ ಅವರ ತಮ್ಮ ಅವನೀಂದ್ರನಾಥರೂ (೧೮೭೧–೧೯೫೧) ಭಾರತೀಯ ಪೌರಸ್ತ್ಯ ಕಲೆಯ ಸಂಘದ ಸಂಸ್ಥಾಪಕರಾಗಿದ್ದಾರೆ. ಈ ಸಂಘ ದೃಕ್ ಕಲೆಗಳ ಬಗೆಗೆ ಭಾರತೀಯರ ವಿಚಾರಗಳನ್ನು ರೂಪುಗೊಳಿಸಿತು.

## ಅವನೀಂದ್ರನಾಥ

ಭಾರತೀಯ ಕಲೆಯ ಪಿತಾಮಹ ಅವನೀಂದ್ರ ನಾಥರು ಶ್ರೇಷ್ಠ ಬರೆಹಗಾರರೂ ಹೌದು, ಸರಳ ಪದಪ್ರಯೋಗದ ಹೊಸ ಪದ್ಧತಿಯನ್ನು ಪ್ರಾರಂಭಿಸಿದರು. ದೇಶದ ಬುದ್ಧಿ ಜೀವಿಗಳನ್ನು ಪುನಃ ಭಾರತದ ಕಲಾ ಕಕ್ಷೆಗೆ ಎಳೆದು ತರುವ ಯತ್ನ ಮಾಡಿದರಲ್ಲದೇ, ಬಂಗಾಲ ವರ್ಣಚಿತ್ರ ಶಾಲೆಯನ್ನು ಪ್ರಾರಂಭಿಸಿದರು. ಅವರ ಮಹೋನ್ನತ ಶಿಷ್ಯವರ್ಗದಲ್ಲಿ ನಂದಲಾಲ್ ಬೋಸ ಕ್ಷಿತೀಂದ್ರನಾಥ ಮುಜುಮದಾರ, ಅಸಿತ ಕುಮಾರ ಹಲ್ದಾರ. ಮತ್ತು ಕರ್ನಾಟಕದ ಕೆ. ವೆಂಕಟಪ್ಪ ಸೇರಿದ್ದಾರೆ.

ಅವರ ತಂಗಿ ಸುನಯನಿ (೧೮೭೦–೧೯೬೨) ಭಾರತೀಯ ಅತಿ ಶ್ರೇಷ್ಠ ವರ್ಣಚಿತ್ರಕಾರ-ರಾಗಿದ್ದು ಜಾನಪದ ಕಲಾಪ್ರಕಾರವನ್ನು ಆಧುನಿಕ ಅಭಿವ್ಯಕ್ತಿಗೆ ಅಳವಡಿಸಿಕೊಂಡಿದ್ದರು. ಸತ್ಯೇಂದ್ರ ನಾಥರ ಪುತ್ರಿ ಇಂದಿರಾ (೧೮೭೩–೧೯೬೦) ಸಂಗೀತ ಸಾಹಿತ್ಯಗಳಲ್ಲಿ ಪ್ರವೀಣೆಯಾಗಿದ್ದರು.

ಟಾಗೋರ ಕುಟುಂಬದ ಇನ್ನಿತರ ಸದಸ್ಯರಲ್ಲಿ ದಿನೇಂದ್ರನಾಥ (೧೮೮೨–೧೯೩೬) ಉತ್ತಮ ಸಂಗೀತಗಾರ ಹಾಗೂ ಸಂಗೀತರಚಕರಾಗಿದ್ದರು. ದೇವೇಂದ್ರನಾಥರ ಮೊಮ್ಮಕ್ಕಳಾದ ಬಾಲೇಂದ್ರ ನಾಥ (೧೮೭೦–೧೮೯೯) ಮತ್ತು ಸುಧೀಂದ್ರ-ನಾಥರು (೧೮೬೯-೧೯೨೯) ಖ್ಯಾತಲೇಖಕರು. ಸುರೇಂದ್ರನಾಥರು (೧೮೭೨–೧೯೪೦) ಬಂಗಾಲಿ ಭಾಷೆಯಲ್ಲಿ ಮಹಾಭಾರತವನ್ನು ರಚಿಸಿದರು. ಜೀವ ವಿಮಾ ವ್ಯವಹಾರದಲ್ಲಿಯೂ ಇವರು ಉತ್ತಮ ಸಾಧನೆ ಮಾಡಿದರು. ರವೀಂದ್ರನಾಥ ಪುತ್ರ ರಥೀಂದ್ರನಾಥರು (೧೮೮೮–೧೯೬೧) ಅಮೇರಿಕದಲ್ಲಿ ವಿಸ್ತೃತ ಕೃಷಿ ವಿಜ್ಞಾನ ಶಿಕ್ಷಣ ಪಡೆದು ತಮ್ಮ ತಂದೆಯ ಕನಸಾಗಿದ್ದ ಗ್ರಾಮೀಣ ಪುನಾರಚನೆಯ ಕಾರ್ಯಕ್ರಮದಲ್ಲಿ ಸದ್ದು ಗದ್ದಲ ವಿಲ್ಲದೇ ಕಾರ್ಯನಿರತರಾಗಿದ್ದರು. ರಥೀಂದ್ರ-ನಾಥ ಮತ್ತು ಅವರ ಪತ್ನಿ ಪ್ರತಿಮಾ (೧೮೯೫–೧೯೬೯) ವರ್ಣಚಿತ್ರಕಾರರಷ್ಟೇ ಅಲ್ಲ ಅನೇಕ ಕ್ಷೇತ್ರಗಳಲ್ಲಿ ಮೇಲ್ಮೆ ಸಾಧಿಸಿದ ದಂಪತಿಗಳು.

ಸುಭಗೇಂದ್ರನಾಥ ಟಾಗೋರ, (೧೯೧೨–೧೯೮೫). ಹೇಮೇಂದ್ರನಾಥರ ಪುತ್ರ ಸಾಮಾನ್ಯ ವಾಗಿ ಇವರನ್ನು 'ಸುಭೋ' ಎಂದು ಕರೆಯು-ಲಾಗುತ್ತಿತ್ತು. ಚಿತ್ರಕಲೆ, ಹಾಗೂ ಕವಿತೆಗಳಲ್ಲಿ ನಾವೀನ್ಯವನ್ನವರು ತಂದರು. ಸುಭೋ "ಕಲಕತ್ತಾ ಗುಂಪು" (೧೯೪೩) ಎಂಬ ಆಧುನಿಕ ಚಿತ್ರಕಾರರ ಗುಂಪನ್ನು ಸ್ಥಾಪಿಸಿದ್ದರು.

ಗುರುದೇವ ಟಾಗೋರರು, ನಿಸರ್ಗದ ವಿಚಿತ್ರವೂ ಅಲ್ಲ, ಇತಿಹಾಸದ ಅಘಟಿತವೂ ಅಲ್ಲ. ಅವರು ಏನು ಮಾಡಿದರು, ಏನು ಸಾಧಿಸಿದರು ಎಂಬುದನ್ನು ಅರಿಯಲು, ಪುರಾತನ ಜೊರಾಸ್ಯಾಂಕೊ ಮನೆತನವನ್ನೇ ಅರಿಯಬೇಕಾಗುವುದು. ಕ್ಷುಲ್ಲಕ ಪ್ರವೃತ್ತಿ ಅವರಿಗೆ ಬಹುದೂರ. ಆದರೆ, ವೈಶಾಲ್ಯ ಟಾಗೋರರ ಮನೆತನದ ಸಹಜ ಪರಂಪರೆ. ❀

(ಭಾರತ ಸರಕಾರದ ಪ್ರೆಸ್ ಇನ್ಫರ್ಮೇಶನ್ ಬ್ಯೂರೊ ಕೃಪೆ)



# ನಿಮ್ಮ ಶಬ್ದಭಾಂಡಾರ ಬೆಳೆಯಲಿ

## ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅನಮೂಲ್ಯವಾಗಿದೆ

ಪ್ರತಿ ತಿಂಗಳೂ ಇಲ್ಲಿ ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆ ಮೇಲೆ ಅದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

೧. **ನಿಮಿತ್ತ**
(ಅ) ನೆವ (ಆ) ಭಕ್ತಿ (ಇ) ಕಣ್ಣು ಮಿಟುಕಿಸುವುದು (ಈ) ಶತ್ರು

೨. **ಪ್ರಜ್ಞಾವಾದ**
(ಅ) ಎಚ್ಚರಿಕೆ (ಆ) ಅಜ್ಞಾನ (ಇ) ದೊಡ್ಡವರ ಮಾತು (ಈ) ವಿವೇಕದ ಮಾತು

೩. **ದ್ವೈಧ**
(ಅ) ಪ್ರಪಂಚ ಮತ್ತು ದೇವರು ಬೇರೆ ಎಂಬ ನಂಬಿಕೆ (ಆ) ಇಕ್ಕಟ್ಟು (ಇ) ಇಮ್ಮಡಿ (ಈ) ಯಜುರ್ವೇದ

೪. **ಆಧಾನ**
(ಅ) ತೆಗೆದುಕೊಳ್ಳುವುದು (ಆ) ಕ್ರಮ (ಇ) ಇರಿಸುವಿಕೆ (ಈ) ಎಣಿಸುವುದು

೫. **ಬಖೈರು**
(ಅ) ಕೊನೆ (ಆ) ಚಾರಿತ್ರಿಕ ದಾಖಲೆ (ಇ) ಬಡತನ (ಈ) ಗಡಂಗು

೬. **ನೆರ**
(ಅ) ಮರ್ಮಸ್ಥಾನ (ಆ) ಸಹಾಯ (ಇ) ಡೊಂಕಿಲ್ಲದ್ದು (ಈ) ಪ್ರಾರಂಭ

೭. **ನೆರಕೆ**
(ಅ) ಮರೆವು (ಆ) ಆಚೇ ಮನೆ (ಇ) ಎಚ್ಚರಿಕೆ (ಈ) ತಟ್ಟಿ

೮. **ಶ್ರಾಯ**
(ಅ) ಮನೆ (ಆ) ಸಂಪತ್ತು (ಇ) ಋತು (ಈ) ಭ್ರಾಂತಿ

೯. **ಅಯನ**
(ಅ) ಕನ್ನಡಿ (ಆ) ಕಣ್ಣು (ಇ) ಅಪ್ಪಟ (ಈ) ಸಾಗುವಿಕೆ

೧೦. **ಮುನ್ನೀರು**
(ಅ) ಉಚ್ಚೆ (ಆ) ಜೊಲ್ಲು (ಇ) ಸಮುದ್ರ (ಈ) ಹೊಳೆ

೧೧. **ತಾವಕ**
(ಅ) ಪದಕ (ಆ) ನಿನ್ನದಾದ (ಇ) ಅಂಧಕಾರ (ಈ) ಅವಸರ

೧೨. **ನೆಗಳ್ತೆ**
(ಅ) ಉತ್ಕರ್ಷ (ಆ) ಹಿಡಿತ (ಇ) ಸಂಬಂಧ (ಈ) ಕೀಲು



# 'ಶಬ್ದ ಭಾಂಡಾರ'ದ ಸರಿಯಾದ ಅರ್ಥಗಳು

೧. **ನಿಮಿತ್ತ** (ಅ) ನೆವ, ಹೆಸರಿಗಷ್ಟೇ ಒಂದು ಕೆಲಸಕ್ಕೆ ಕಾರಣವಾಗಿರುವುದು. ಉದಾ;— ನಿಮಿತ್ತ ಮಾತ್ರಕ್ಕೆ ನೀನು ಯುದ್ಧ ಮಾಡು. [ಸಂ.]

೨. **ಪ್ರಜ್ಞಾವಾದ** (ಈ) ವಿವೇಕದ ಮಾತು; ವಿಚಾರಪರ (ಭಾವನಾಪರವಲ್ಲ) ವಾದ ಸಾಧನೆ; ತೋರಿಕೆಯ ವಿಚಾರವಾದ; ಇಂಗ್ಲೀಷಿನಲ್ಲಿ Rationalisationಗೆ ಸಮ. ಉದಾ;— ನಿಜವಾದ ವಿವೇಕ-ವಲ್ಲ, ಬರೆ ಪ್ರಜ್ಞಾವಾದ. [ಸಂ. ಪ್ರಜ್ಞಾ=ತಿಳಿವಳಿಕೆ + ವಾದ = ಮಾತು]

೩. **ದ್ವೈಧ** (ಅ) ಇಕ್ಕಟ್ಟು, ಹಾಗೋ ಹೀಗೋ ಎಂಬ ಸಂದಿಗ್ಧ ಮನೋಭಾವ. ಉದಾ:— ದ್ವೈಧದಲ್ಲಿ ಬಿದ್ದನು. [ಸಂ. ದ್ವಿ = ಎರಡು + ಧಾ = ವಿಧ]

೪. **ಆಧಾನ** (ಇ) ಇರಿಸುವಿಕೆ, ಇಡುವಿಕೆ, ಉದಾ:— ಗರ್ಭಾಧಾನ ಎಂದರೆ ಗರ್ಭ ವನ್ನುಂಟು ಮಾಡುವುದು. [ಗರ್ಭ = ಬಸಿರು + ಆಧಾನ = ಇಡುವಿಕೆ]

೫. **ಬಖೈರು** (ಅ) ಚಾರಿತ್ರಿಕ ದಾಖಲೆ ಪತ್ರ ಚರಿತ್ರೆಗಾಗಿ ಬರೆದಿಟ್ಟ ವಾಸ್ತವಿಕ ದಾಖಲೆ [ಮರಾಠಿ, ಬಖರ]

೬. **ನೆರ** (ಅ) ಮರ್ಮಸ್ಥಾನ, ದುರ್ಬಲ ಸ್ಥಾನ, ಆಯಕಟ್ಟು, ಉದಾ:— ನೆರ ನೋಡಿ ಪೆಟ್ಟು ಹಾಕಬೇಕು. [ದೇಶ್ಯ]

೭. **ನೆರಕೆ** (ಈ) ತಟ್ಟಿ, ಬಿದಿರಿನಿಂದ ಮಾಡಿದ ಪರದೆ. ಉದಾ:— ಬಾಗಿಲಿಗೆ ನೆರಕೆಯ ಮರೆ ಇತ್ತು. [ದೇಶ್ಯ–ತಮಿಳು —ನಿರೈಚ್ಚಲ್]

೮. **ಶ್ರಾಯ** (ಇ) ಋತು, ಮೋಸಮ್, ಯಾವುದೊಂದು ಪದಾರ್ಥ ಧಾರಾಳವಾಗಿ ಉತ್ಪತ್ತಿಯಾಗುವ ಕಾಲ. ಉದಾ:— ಮಾವಿನ ಹಣ್ಣಿನ ಶ್ರಾಯ. [ಸಂ. ?]

೯. **ಅಯನ** (ಈ) ಸಾಗುವಿಕೆ, ಮಾರ್ಗ; ಸೂರ್ಯನ ದಕ್ಷಿಣ ಮತ್ತು ಉತ್ತರಾಭಿಮುಖ ಯಾತ್ರೆಯ ಅವಧಿಗಳು; ಅರ್ಧ ವರ್ಷ; ರಥೋತ್ಸವ. [ಸಂ. ಅಯನ = ಸಾಗುವಿಕೆ]

೧೦. **ಮುನ್ನೀರು** (ಇ) ಸಮುದ್ರ, ಕಡಲು. ಉದಾ:— ಮುನ್ನೀರ ನೀರು ಕುಡಿಯ-ಲಾದೀತೆ. [ದೇಶ್ಯ—ಮುನ್ = ಮೂರು —ಮಳೆ, ನದಿ ಮತ್ತು ಸಮುದ್ರದ್ದೇ ಸೇರಿದ + ನೀರು]

೧೧. **ತಾವಕ** (ಅ) ನಿನ್ನದಾದ (ಕಾವ್ಯದಲ್ಲಿ ಮಾತ್ರ ಪ್ರಯೋಗ) ಉದಾ:—ತಾವಕನು ನಾನು. [ಸಂ. ತವ = ನಿನ್ನ—ಎಂಬುದ ರಿಂದ]

೧೨. **ನೆಗಳ್ತೆ** (ಅ) ಉತ್ಕರ್ಷ, ಪ್ರಸಿದ್ಧಿ ಕೀರ್ತಿ (ಕಾವ್ಯದಲ್ಲಿ). ಉದಾ:—ನೆಗಳ್ತೆ ಪಡೆದ ಸಾಹಸ. [ದೇಶ್ಯ—ನೆಗಳ್ = ಮಾಡು, ಕೀರ್ತಿ ಪಡೆ—ಇಂದ]

## ನಿಮ್ಮ ಶಬ್ದ ಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಅರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದ ಶಕ್ತಿಯ ತರಗತಿಗಳನ್ನು ತಿಳಿಯಿರಿ.

| | | |
|---|---|---|
| ೬–೮ | ಸರಿಯಿದ್ದರೆ | ... ಸಾಧಾರಣ |
| ೯–೧೦ | „ | ... ಉತ್ತಮ |
| ೧೧–೧೨ | „ | ... ಅತ್ಯುತ್ತಮ |

ರಾಬರ್ಟ್ ಬಾರ್‌ನ ಇಂಗ್ಲೀಷ್ ಕಥೆ

# ಸೇಡು

ಅನುವಾದ: **ಕೆ. ಎಲ್. ವಿದ್ಯಾಗೌರಿ**

ಈ ಪ್ರಪಂಚದಲ್ಲಿ ಪ್ರತಿಯೊಬ್ಬ ಪುರುಷನಿಗೂ ಒಬ್ಬಳು ಸರಿಯಾದ ಹೆಂಡತಿ ಸೃಷ್ಟಿಯಾಗಿಯೇ ಇರುತ್ತಾಳೆ. ಆದರೆ, ಆ ಸರಿಯಾದ ವ್ಯಕ್ತಿ ಸರಿಯಾದ ಕಾಲಕ್ಕೆ ಸಿಕ್ಕುವುದಿಲ್ಲ. ಹೀಗಾಗಿ ಯಾರು ಯಾರೋ ಇನ್ನು ಯಾರು ಯಾರನ್ನೋ ಮದುವೆಯಾಗ ಬೇಕಾಗುತ್ತದೆ. ಪ್ರತಿ ಗಂಡಿಗೂ ಸೃಷ್ಟಿಯಾದ ಸರಿಯಾದ ಹೆಂಡತಿ ಎಷ್ಟೋ ವೇಳೆ ಅವರ ಜೀವನವಿಡೀ ಸಿಗುವುದೇ ಇಲ್ಲ. ಈ ಕಾರಣಕ್ಕಾಗಿಯೇ ವಿಚ್ಛೇದನಗಳು ಆಗುವುದು. ಮದುವೆ ಎಂದರೆ ಹೊಂದಿಕೊಂಡು ಹೋಗುವುದು ಎಂದೇ ಅರ್ಥ. ಆದರೆ ಇಬ್ಬರು ವಿರುದ್ಧ ಸ್ವಭಾವದ ವ್ಯಕ್ತಿಗಳು ಮದುವೆಯಾದರೆ, ತೊಂದರೆ ಬಂದಿತೆಂದೇ ಅರ್ಥ.

ಶ್ರೀಮತಿ ಮತ್ತು ಶ್ರೀ ಬಾಡ್‌ಮನ್‌ರ ಮದುವೆ ಆದದ್ದೂ ಇದೇ. ಅವರಿಬ್ಬರೂ ವಿರುದ್ಧ ಸ್ವಭಾವದವರಾದ್ದರಿಂದ ಹೊಂದಾಣಿಕೆ ಸಾಧ್ಯವೇ ಇಲ್ಲದಂಥ ಮಟ್ಟಕ್ಕೆ ಬಂದು ಬಿಟ್ಟಿದ್ದರು. ಒಬ್ಬರನ್ನೊಬ್ಬರು ದ್ವೇಷಿಸುವಲ್ಲಿಗೆ ಬಂದು ತಲುಪಿದ್ದರು. ಆದರೆ ಅವರ ವಿವಾಹ ವಿಚ್ಛೇದನಕ್ಕೆ ದ್ವೇಷ ಒಂದೇ ಸರಿಯಾದ ಕಾರಣವಾಗಿರಲಿಲ್ಲ. ಆಗಿನ ಕಾಲದ ಇಂಗ್ಲಂಡಿನಲ್ಲಿ ಅವರಿಬ್ಬರ ನಡುವಿನ ಬಂಧನವನ್ನು ಕಿತ್ತೊಗೆಯಲು ಯಾವ ಕಾನೂನೂ ಸಹಾಯಕ್ಕೆ ಬರುತ್ತಿರಲಿಲ್ಲ. ಇಬ್ಬರಲ್ಲಿ ಒಬ್ಬರ ಸಾವು ಮಾತ್ರ ಇದನ್ನು ಮಾಡಬಲ್ಲದ್ದಾಗಿತ್ತು. ಬಾಡ್‌ಮನ್ ಬಡವನಾಗಿದ್ದಿದ್ದರೆ ಹೆಂಡತಿಯನ್ನು ಬಿಟ್ಟು ಓಡಿಹೋಗಬಹುದಾಗಿತ್ತು. ಆದರೆ ದೊಡ್ಡ ದೊಡ್ಡ ವ್ಯವಹಾರಗಳನ್ನೆಲ್ಲಾ ಹೆಂಡತಿಗೋಸ್ಕರ ಬಿಟ್ಟು ಓಡಿಹೋಗುವಷ್ಟು ಮೂರ್ಖನಾಗಿರಲಿಲ್ಲ ಆತ. ಆದರೆ ಅವನು ಏನಾದರೂ ಮಾಡಿ ತನ್ನ ಹೆಂಡತಿಯನ್ನು ಮುಗಿಸಿಬಿಡಬೇಕೆಂಬ ಹಂತಕ್ಕೆ ಬಂದು ತಲುಪಿದ್ದ. ಅವಳನ್ನು ಬುದ್ಧಿಮತಿಕೆಯಿಂದ ಕೊಲೆಮಾಡಿ, ಅವಳ ಸಾವನ್ನು ಆಕಸ್ಮಿಕವೆಂಬಂತೆ ಕಾಣುವ ಹಾಗೆ ಮಾಡಬೇಕೆಂದು ನಿರ್ಧರಿಸಿದ್ದ ಆತ.

ಬಾಡ್‌ಮನ್‌ನ ಹೆಂಡತಿಗೆ ಗಂಡ ತನ್ನನ್ನು

ಎಷ್ಟು ದ್ವೇಷಿಸುತ್ತಾನೆಂದು ತಿಳಿದಿತ್ತು. ಅವಳು ಅವನನ್ನು ಅದಕ್ಕಿಂತಲೂ ಹೆಚ್ಚು ದ್ವೇಷಿಸುತ್ತಿದ್ದಳು. ಆದರೂ ಅವನು ಹೋದಲ್ಲೆಲ್ಲಾ ಅವಳು ಹಿಂಬಾಲಿಸುತ್ತಿದ್ದಳು. ಅವನು ತನ್ನನ್ನು ಕೊಲೆ ಮಾಡಬಹುದೆಂಬ ಸಂಶಯ ಆಕೆಗೆ ಬಂದಿತ್ತೋ ಇಲ್ಲವೋ. ಆದ್ದರಿಂದಲೇ ಬಾಡ್‌ಮನ್ ಅವಳನ್ನು ಕೊಲ್ಲಲು ನಿರ್ಧರಿಸಿದ್ದು.

ಜುಲೈ ತಿಂಗಳಿನಲ್ಲಿ ಒಂದು ದಿನ ತಾನು ಸ್ವಿಟ್ಜರ್‌ಲೆಂಡ್‌ಗೆ ಹೋಗುವುದಾಗಿ ಬಾಡ್‌ಮನ್ ತನ್ನ ಹೆಂಡತಿಗೆ ಹೇಳಿದಾಗ, ಅವಳು ಚಕಾರವೆತ್ತದೆ ಪ್ರಯಾಣಕ್ಕೆ ಅಣಿ ಮಾಡಿಕೊಳ್ಳತೊಡಗಿದಳು. ಅವಳೂ ಬರುವುದನ್ನು ಅವನು ಈ ಸಲ ತಡೆಯಲಿಲ್ಲ.

ಸ್ವಿಟ್ಜರ್‌ಲೆಂಡ್‌ನ ಪರ್ವತವೊಂದರ ತುದಿಯ ಮೇಲೆ ಸಮುದ್ರದ ತುದಿಯಿಂದ ಒಂದೂವರೆ ಮೈಲಿಯಷ್ಟು ಎತ್ತರದಲ್ಲಿ, ಒಂದು ಹೋಟೆಲ್ ಇದೆ. ಅಲ್ಲಿ ಹೋಗುವುದೂ ಕಷ್ಟವೇ. ಆರು ಮೈಲುಗಳಷ್ಟು ಸುತ್ತು ಬಳಸು ದಾರಿಯಲ್ಲಿ ಹೋಗಬೇಕು. ಆ ಹೋಟೆಲಿನ ವರಾಂಡಾದಿಂದ ಸುತ್ತಲಿನ ಬೆಟ್ಟಗಳ ರಮಣೀಯ ದೃಶ್ಯ ಕಾಣಿಸುವುದು. ಅಲ್ಲದೇ, ಅಲ್ಲಿಂದ ಕೆಲವು ಕಾಲು ದಾರಿಗಳಲ್ಲಿ ಹೋದರೆ ಭಯಂಕರವಾದ ಪ್ರಪಾತಗಳೂ ಇವೆ.

ಜಾನ್ ಬಾಡ್‌ಮನ್‌ಗೆ ಈ ಹೋಟೆಲಿನ, ಅಲ್ಲಿನ ಸುತ್ತಮುತ್ತಲ ಪ್ರದೇಶಗಳ ಪರಿಚಯ ಚೆನ್ನಾಗಿತ್ತು. ಅಲ್ಲಿಗೆ ಅವನು ಅನೇಕ ಸಲ ಬಂದಿದ್ದ. ಕೊಲೆಯ ವಿಷಯ ನೆನಪಾದಾಗೆಲ್ಲ ಅವನಿಗೆ ಹೊಳೆಯುತ್ತಿದ್ದದ್ದು, ಈ ಹೋಟೇಲಿನ ಹತ್ತಿರವಿದ್ದ ಅತಿ ಭಯಂಕರವಾದ ಒಂದು ಪ್ರಪಾತ. ಅಲ್ಲಿಗೆ ಬಂದ ಮಾರನೆಯ ಬೆಳಿಗ್ಗೆಯೇ, ನಾಲ್ಕು ಗಂಟೆಗೇ ಎದ್ದು ಅವನು ಅತ್ತ ನಡೆದ. ಆ ಪ್ರಪಾತವನ್ನು ಜನ 'ಹ್ಯಾಂಗಿಂಗ್ ಔಟ್‌ಲುಕ್' ಎಂದು ಕರೆಯುತ್ತಿದ್ದರು. ಅದರ ಹಿಂದಿದ್ದ ಬೆಟ್ಟವೂ ಅತೀ ಕಡಿದಾಗಿದ್ದು, ಭಯಂಕರವಾಗಿತ್ತು. ಹತ್ತಿರ ಜನ ಸಂಚಾರವೇ ಇರಲಿಲ್ಲ. ಹೋಟೆಲ್ ಕೂಡಾ ಆ ಜಾಗಕ್ಕೆ ಕಾಣದಂತೆ ಬೆಟ್ಟದಿಂದ ಮರೆಮಾಡಲ್ಪಟ್ಟಿತ್ತು. ಈ ಪ್ರಪಾತದತ್ತ ಬಗ್ಗಿ ನೋಡುವುದೂ ಸಾಮಾನ್ಯ ಜನರಿಗೆ ಸಾಧ್ಯವಾಗುತ್ತಿರಲಿಲ್ಲ. ಸುಮಾರು ಒಂದು ಮೈಲಿನಷ್ಟು ಕೆಳಗೆ ಕಂದಕದಂತಿತ್ತು ಆ ಪ್ರಪಾತ. ಅಲ್ಲಿಂದ ಬಿದ್ದರಂತೂ ಮೂಳೆಗಳೂ ಸಿಗುವದಿಲ್ಲ. 'ಹೌದು, ಇದೇ ಜಾಗ.' ಬಾಡ್‌ಮನ್ ಅಂದುಕೊಂಡ, 'ನಾಳೆ ಬೆಳಿಗ್ಗೆಯೇ ಸರಿಯಾದ ಕಾಲ.'

ಬಾಡ್‌ಮನ್ ತಾನು ಮಾಡಬೇಕೆಂದಿದ್ದ ಕೆಲಸವನ್ನು ತುಂಬಾ ಚಾಕಚಕ್ಯದಿಂದ ನಿರ್ಧರಿಸಿದ್ದ. ತನ್ನ ಹೆಂಡತಿಯ ಬಗ್ಗೆ ಅವನಿಗೆ ಕರುಣೆಯು ಲವಲೇಶವೂ ಇರಲಿಲ್ಲ.

ಮಾರನೆಯ ಬೆಳಿಗ್ಗೆ ತಿಂಡಿ ತಿಂದ ನಂತರ ಬಾಡ್‌ಮನ್ ಹೆಂಡತಿಯನ್ನು ಕೇಳಿದ: "ನಾನು ಹೀಗೇ ಬೆಟ್ಟದ ತಪ್ಪಲಿನಲ್ಲಿ ಸುತ್ತಾಡಿ ಬರುತ್ತೇನೆ; ನೀನೂ ಬರುತ್ತೀಯಾ?"

"ಹೂಂ ಬರುತ್ತೇನೆ" ಎಂದು ಅವಳು ಅವನೊಂದಿಗೆ ಹೊರಟಳು. ಇಬ್ಬರೂ ಆ ಪ್ರಪಾತವಿದ್ದತ್ತ ಮೌನವಾಗಿ ನಡೆದರು. ಬಾಡ್‌ಮನ್‌ಗೆ ಭಯವೂ ಆಗುತ್ತಿತ್ತು. ತಾನು ಅವಳನ್ನು ಪ್ರಪಾತದಿಂದ ತಳ್ಳುವಾಗ, ಅವಳೂ ತನ್ನನ್ನು ಅತ್ತ ಎಳೆದುಕೊಂಡುಬಿಟ್ಟರೆ ಏನು ಮಾಡುವುದೆಂದೂ ಅವನು ಯೋಚಿಸಿದ್ದ, ಅವಳಿಗೆ ತನ್ನ ಕಾರ್ಯದ ಬಗ್ಗೆ ಏನಾದರೂ ಸುಳಿವು ಸಿಕ್ಕಿರಬಹುದೇ, ಎಂದೂ ಯೋಚಿಸಿದ. ತನ್ನ ಕೆಲಸವನ್ನು ಆದಷ್ಟು ಬೇಗ ಮುಗಿಸಿಬಿಡಬೇಕೆಂದುಕೊಂಡ.

ಆದರೆ ಅವರು ಆ ಪ್ರಪಾತದ ಬಳಿ ಬರುತ್ತಿದ್ದಂತೆಯೇ ಶ್ರೀಮತಿ ಬಾಡ್‌ಮನ್ ಏಕೋ ಹೆದರಿಕೆಯಿಂದ ನಡುಗಿದಳು. ಬಾಡ್‌ಮನ್ ಅದನ್ನು ಕಂಡು, "ಯಾಕೆ ಸುಸ್ತಾಯಿತೆ?" ಎಂದು ಕೇಳಿದ.

"ಜಾನ್, ನೀನು ನನ್ನನ್ನು ಮೊದಲು ಕರುಣೆಯಿಂದ ಕಂಡಿದ್ದಿದ್ದರೆ, ನಮ್ಮಿಬ್ಬರ ನಡುವಿನ ಸಂಬಂಧ ಸರಿಯಾಗಿರುತ್ತಿತ್ತೇನೋ" ಎಂದಳು.

"ಅದನ್ನೆಲ್ಲಾ ಈಗ ಯೋಚಿಸಿ ಫಲವೇನು? ನಮ್ಮಿಬ್ಬರ ನಡುವಿನ ಸಂಬಂಧದ ಬಗ್ಗೆ ಈಗ ಎಷ್ಟು ಮಾತಾಡಿದರೂ ಅಷ್ಟೇ. ನಾನು ನಿನ್ನನ್ನು ದ್ವೇಷಿಸುತ್ತೇನೆಂಬುದು ನಿನಗೂ ಗೊತ್ತಲ್ಲವೇ?" ಎಂದ ಬಾಡ್‌ಮನ್ ಅವಳತ್ತ ನೋಡದೆಯೇ.

ಶ್ರೀಮತಿ ಬಾಡ್‌ಮನ್ ಆ ಕಂದಕದ ಹತ್ತಿರ ಬರುತ್ತಿದ್ದಂತೆ, ಬಿರುಸಿನಿಂದ ಹಿಂದಕ್ಕೂ ಮುಂದಕ್ಕೂ ನಡೆಯುತೊಡಗಿದಳು. ಅವಳ ಗಂಡ ಉಸಿರು ಬಿಗಿ ಹಿಡಿದು ಕಾಯತೊಡಗಿದ.

"ಯಾಕೆ ಹಾಗೆ ಓಡುತ್ತೀಯಾ? ಬಾ, ನನ್ನ ಪಕ್ಕದಲ್ಲಿ ಸುಮ್ಮನೇ ಕುಳಿತುಕೊ" ಎಂದು ಕರೆದ.





**"ಪರಿಹಾರ ಕಾರ್ಯಗಳಿಗೆ ಮಂಜೂರಾದ ಸರ್ಕಾರಿ ಹಣದಲ್ಲಿ ಸೋರಿಕೆ, ಗೃಹ ಮಂಡಳಿ ಮನೆಗಳ ಸೋರಿಕೆ ಕೇಳಿದ್ದೆ. ಈ ಸೋರಿಕೆ ಹೊಸದು."**

---

"ಇಲ್ಲ ಬಾಡ್‌ಮನ್. ನೀನು ನಿನ್ನ ದ್ವೇಷದ ಬಗ್ಗೆ ಮಾತನಾಡಿದೆಯಲ್ಲಾ. ನಾನು ನಿನ್ನನ್ನು ಎಷ್ಟು ದ್ವೇಷಿಸುತ್ತೇನೆಂದು ನಿನಗೆ ಗೊತ್ತೇ? ನಿನಗೆ ನಮ್ಮಿಬ್ಬರ ನಡುವಿನ ಸಂಬಂಧವನ್ನು ಮುರಿಯಬೇಕೆಂಬ ಆಸೆ ಇರಬಹುದು. ಆದರೆ ನೀನು ನನ್ನನ್ನು ಕೊಲೆ ಮಾಡುವಷ್ಟು ಕೀಳು ಮಟ್ಟಕ್ಕೆ ಇಳಿಯುತ್ತೀಯೆಂದು ನಾನು ತಿಳಿದಿಲ್ಲ. ನಿನ್ನ ಕೈಯಿಂದ ಅದು ಆಗದು. ಆದರೆ ನಾನು ನಿನ್ನನ್ನು ಕೊಲ್ಲಬೇಕೆಂದು ನಿರ್ಧರಿಸಿದ್ದೇನೆ. ನಾನು ನಿನ್ನನ್ನು ಎಷ್ಟು ದ್ವೇಷಿಸುತ್ತೇನೆಂದು ತೋರಿಸುತ್ತೇನೆ."

ಬಾಡ್‌ಮನ್ ಈಗ ನಿಜವಾಗಿಯೂ ಹೆದರಿಬಿಟ್ಟ.

ಅವಳು ಹೇಳುವುದನ್ನು ಮುಂದುವರೆಸಿದಳು. "ಹೌದು. ನಾನು ಇಂಗ್ಲೆಂಡಿನ ನನ್ನ ಸ್ನೇಹಿತರಿಗೆಲ್ಲಾ ನೀನು ನನ್ನನ್ನು ಇಲ್ಲಿಗೆ ಕೊಲೆ ಮಾಡಲು ಕರೆದುಕೊಂಡು ಬಂದಿದ್ದೀ ಎಂದು ಇಲ್ಲಿಗೆ ಬರುವ ಮೊದಲೇ ಹೇಳಿದ್ದೇನೆ."

"ಅದನ್ನೆಲ್ಲಾ ಹೇಗೆ ಹೇಳುತ್ತೀ?" ಮೆಲ್ಲಗೆ ಕೇಳಿದ ಬಾಡ್‌ಮನ್.

"ನಿನ್ನನ್ನು ನಾನು ಎಷ್ಟು ದ್ವೇಷಿಸುತ್ತೇನೆಂದರೆ ಹೀಗೇ ನಾನು ನಿನ್ನ ಮೇಲೆ ಸೇಡು ತೀರಿಸಿಕೊಳ್ಳುವುದು. ನಾವು ಇದ್ದ ಹೋಟೆಲಿನ ಜನಕ್ಕೂ ಹೇಳಿದ್ದನೆ—ನೀನು ನನ್ನನ್ನು ಕೊಲ್ಲಲು ಈ ಪ್ರಪಾತದತ್ತ ಕರೆದುಕೊಂಡು ಹೊರಟಿದ್ದೀ ಎಂದು. ಆ ಹೋಟೆಲ್‌ನ ಮ್ಯಾನೇಜರ್ ಇಬ್ಬರನ್ನು ನಮ್ಮ ಹಿಂದೆ ಕಳುಹಿಸಿದ್ದಾನೆ. ಅವರೂ ಇನ್ನೇನು ಬರಬಹುದು. ಅವರು ನಂಬುವಂತೆ ಹೇಳು. ನಾನು ಇಲ್ಲಿಂದ ಆಕಸ್ಮಿಕವಾಗಿ ಬಿದ್ದು ಬಿಟ್ಟೆ ಎಂದು. ಅವರು ನಂಬುವರೇನೋ ನೋಡೋಣ," ಎನ್ನುತ್ತಾ ಶ್ರೀಮತಿ ಬಾಡ್‌ಮನ್ ತನ್ನ ನಿಲುವಂಗಿಯ ಲೇಸನ್ನು ಕಿತ್ತು ಹುಚ್ಚಿಯಂತೆ ಎಸೆದಳು. ಬಾಡ್‌ಮನ್ ದಿಕ್ಕು ತೋಚದೆ, "ಏನು, ಏನು ಮಾಡುತ್ತೀ?" ಎಂದು ಕೇಳುತ್ತಿದ್ದಂತೆಯೇ, ಅವಳು ಆ ಪ್ರಪಾತದತ್ತ ಓಡಿ ಹೋಗಿ ಅಲ್ಲಿಂದ ಕೆಳಕ್ಕೆ ಕಿರಿಚಿಕೊಂಡು ಹಾರಿಬಿಟ್ಟಳು.

ಒಂದು ಕ್ಷಣದ ನಂತರ ಬಾಡ್‌ಮನ್ ದಿಕ್ಕು ತೋಚದೆ ನಿಂತಿದ್ದತ್ತ ಇಬ್ಬರು ಓಡುತ್ತಾ ಬಂದರು. ✡



ಈಕೆಗೆ ಕತ್ತಲೆಯೇ
ಜೀವನಾಧಾರ

# ಕತ್ತಲ ಕಂದಮ್ಮ ಕೇಟಿ



ಮೂಲ : ರಾಬರ್ಟ್ ಹಾಲ್
ಕನ್ನಡಕ್ಕೆ : ಮುರಳೀಧರ ಖಜಾನೆ

ಮುದ್ದಾದ ಕೇಟಿ ತನ್ನ ಬದುಕಿನ ಶೇಷ ಭಾಗವನ್ನು ಕತ್ತಲ ಗರ್ಭದಲ್ಲಿಯೇ ಕಳೆಯಬೇಕು. ಹಾಗೆಂದು ಕೇಟಿ ಕುರುಡೆಂದು ಭಾವಿಸಬೇಡಿ. ಆದರೂ ಕೇಟಿ ಸೂರ್ಯನ ಹೊಂಗಿರಣವನ್ನು ನೋಡುವಂತಿಲ್ಲ. ಅರುಣರಾಗ ಅನುಭವಿಸುವಂತಿಲ್ಲ. ಸಮುದ್ರ ಕಿನಾರೆಯಲ್ಲಿ ಸೂರ್ಯಸ್ನಾನ ಮಾಡುವಂತಿಲ್ಲ. ಬಿಸಿಲು ಮಚ್ಚಿನಮೇಲೆ ಅಮ್ಮನ ತೋಳತೆಕ್ಕೆಯಲ್ಲಿ ಮಲಗಿ ಸುಖಿಸುವಂತಿಲ್ಲ. ಒಟ್ಟಿನಲ್ಲಿ ಕೇಟಿ ಬದುಕಿನ ಯಾವುದೇ ಸೌಂದರ್ಯ ಅನುಭವಿಸುವುದರಿಂದ ವಂಚಿತೆ. ಹಾಗೇನಾದರೂ ಎಚ್ಚರದಪ್ಪಿ ಕೇಟಿಯನ್ನು ಸೂರ್ಯನ ಕಿರಣಗಳಿಗೊಡ್ಡಿದರೆ ಆ ಕಂದಮ್ಮನ ಸಾವು ನೂರಕ್ಕೆ ನೂರರಷ್ಟು ಖಚಿತ.

ಕೇಟಿ ಒಂದು ರೀತಿಯ ವಿಚಿತ್ರವಾದ ಚರ್ಮದ ಕಾಯಿಲೆಯಿಂದ ನರಳುತ್ತಿದ್ದಾಳೆ. ಕೇಟಿಯ ಮೈಯ ಚರ್ಮ ಎಲ್ಲಾ ಬಗೆಯ ಬೆಳಕಿಗೂ ಅತಿ ಸೂಕ್ಷ್ಮವಾಗಿ ಪ್ರತಿಕ್ರಿಯಿಸುತ್ತದೆ. ಇದುವರೆಗೂ ಇಡೀ ಜಗತ್ತಿನಲ್ಲಿ ಇಂಥ ಕಾಯಿಲೆಯ ೫೧ ಪ್ರಕರಣಗಳು ಮಾತ್ರ ವರದಿಯಾಗಿವೆ. ಆದರೆ ಇದಕ್ಕೆ ಮದ್ದು ಮಾತ್ರ ಇನ್ನೂ ಕಂಡುಹಿಡಿಯಲಾಗಿಲ್ಲ.

ಒಂದು ರಸಾಯನಿಕ ಕಿಣ್ವದ ಕೊರತೆ ಕೇಟಿಯನ್ನು ಕತ್ತಲಗರ್ಭಕ್ಕೆ ನೂಕಿದೆ. ಅತಿ ಮೃದುವಾದ ಬೆಳಕಿನಲ್ಲೂ ಕೇಟಿಯ ಚರ್ಮ ಬಹಳ

ವಿಚಿತ್ರವಾಗಿ ಪ್ರತಿಕ್ರಿಯಿಸುತ್ತದೆ. (ಉದಾಹರಣೆಗೆ ಕೇಟಿಗೆ ೨೦ ವರ್ಷವಾಗಿದ್ದರೆ ಆಕೆ ೯೦ ವರ್ಷದ ವೃದ್ಧೆಯಂತೆ ತೋರುತ್ತಾಳೆ. ಚರ್ಮ ಬೆಳಕಿನಲ್ಲಿ ಅಷ್ಟೊಂದು ವೇಗವಾಗಿ ಪ್ರತಿಕ್ರಿಯಿಸುತ್ತದೆ...)

ಚೆಸ್ಟರ್‌ನ ತನ್ನ ಮನೆಯ ಕತ್ತಲ ಕೋಣೆಯೊಂದರಲ್ಲಿ ತನ್ನ ಕಾಯಿಲೆಯ ಬಗ್ಗೆ ಯಾವುದೇ ಅರಿವಿಲ್ಲದ ಕೇಟಿ ಕತ್ತಲಲ್ಲೇ ತಡುವುತ್ತಾ ಆಡಿಕೊಂಡಿದ್ದಾಳೆ.

"ಕೇಟಿಗೆ ಈ ರೀತಿಯ ಕಾಯಿಲೆಯೊಂದಿದೆ ಎಂದರೆ ನಂಬುವುದಕ್ಕೇ ಆಗುವುದಿಲ್ಲ ಅಲ್ಲವೇ? ಏಕೆಂದರೆ ಅವಳು ಅಷ್ಟೊಂದು ಆರೋಗ್ಯಪೂರ್ಣವಾಗಿ ದಷ್ಟಪುಷ್ಟವಾಗಿದ್ದಾಳೆ. ಕೇಟಿಗೆ ಹೊರ ಜಗತ್ತನ್ನು ತೋರಿಸಬೇಕೆಂದು ನನಗಂತೂ ಬಹಳ ಆಸೆ. ಅವಳನ್ನು ಪ್ರಾಮ್‌ನಲ್ಲಿ ಕೂರಿಸಿ ಪಾರ್ಕ್‌ಗಳಲ್ಲಿ ಸುತ್ತಿಸಬೇಕು. ಅಂಗಡಿಗೆ ಕರೆದೊಯ್ದು ಅವಳು ನೋಡಿದ್ದು, ಕೇಳಿದ್ದು ತೆಗೆದುಕೊಡಬೇಕೆಂದು ಆಸೆ, ಆದರೆ ಅದು ಅಸಾಧ್ಯ..." ಎನ್ನುತ್ತಾ ಕೇಟಿಯ ಅಮ್ಮ ಸೋನ್ಯಾ ಕಣ್ಣೀರು ಕ್ಕಿಸಿ ನಿಟ್ಟುಸಿರಿಡುತ್ತಾಳೆ.

ಕೇಟಿಯ ಬುದ್ಧಿ ಮತ್ತು ದೇಹ ಮಾತ್ರ ಯಾವುದೇ ಅಡೆತಡೆಯಿಲ್ಲದೆ ಬೆಳೆಯುತ್ತಲೇ ಇದೆ. ಆದರೆ ಅರಿವಿಲ್ಲದ ಭವಿಷ್ಯತ್ತಿನಿಂದಾಗಿ ತನ್ನ ಮನೆಯ ಕತ್ತಲ ಕೋಣೆಯಲ್ಲಿ ತಾಯಿ ಸೋನ್ಯಾ, ಅಕ್ಕ ಜ್ಯೂಲಿ ಮತ್ತು ಅಜ್ಜ ಅಂಜೇಲರ ಜೊತೆ ಆಕೆ ಕಾಲ ಕಳೆಯಬೇಕಾಗಿ ಬಂದಿದೆ.

"ಈಗ ನಮ್ಮ ಮನೆಯಲ್ಲಿ ನಾವು ತಾಳಿಕೊಳ್ಳಬಹುದಾದಷ್ಟು ಮಾತ್ರ ಕತ್ತಲು. ಕಿಟಕಿಗಳಿಂದಲೂ ಕಿರುಬೆಳಕು ಕೂಡ ಪ್ರವೇಶಿಸುವಂತಿಲ್ಲ. ಈ ಕತ್ತಲಲ್ಲಿ ನಮ್ಮ ಚಲನವಲನ ಮಾತ್ರ ಸಾಧ್ಯ. ಸೂರ್ಯ ಪ್ರಖರವಾಗಿದ್ದ ದಿನ ಪರದೆಯನ್ನು ಇನ್ನಷ್ಟು ಗಟ್ಟಿಯಾಗಿ ಮುಚ್ಚಿರುತ್ತೇವೆ. ಆದರೂ ವಾಚಿನ ರೇಡಿಯಂನಿಂದ ಹೊರಡುವ ಬೆಳಕು, ಟಿ. ವಿ. ಯ ಮಂದ ಬೆಳಕುಗಳೂ ಕೇಟಿಗೆ ತೊಂದರೆಯನ್ನು ಕೊಡಬಲ್ಲವು. ಬೆಳಕು ಸ್ವಲ್ಪ ಪ್ರಖರವಾದ ತಕ್ಷಣ ಕೇಟಿ ಕೆರಳತೊಡಗುತ್ತಾಳೆ, ಅವಳ ಮೂಗು ಒದ್ದೆಯಾಗುವುದೇ ನಮಗೆ ತೋರುವ ಮೊದಲ ಸೂಚನೆ, ನಂತರ ವಾಂತಿಭೇದಿ ಪ್ರಾರಂಭವಾಗುತ್ತದೆ..." ಎನ್ನುತ್ತಾಳೆ ಸೋನ್ಯಾ ನೋವಿನಿಂದ.

ಕೇಟಿಗೆ ಮೂರು ತಿಂಗಳಾದಾಗಲೇ ಸೋನ್ಯಾ ತನ್ನ ಮಗುವಿನ ಭಿನ್ನ ನಡವಳಿಕೆಯನ್ನು ಗುರುತಿಸಿದಳು. ಕೇಟಿಯನ್ನು ಹೊರಗೆ ಕರೆದೊಯ್ದರೆ ತನ್ನ ಮುಖವನ್ನು ಕೆರೆಯಲು ಪ್ರಾರಂಭಿಸುತ್ತಿದ್ದಳು. ನಂತರ ಕಿರುಚಿ ಅಳಲು ಪ್ರಾರಂಭ. ಆಗೆಲ್ಲಾ ಕೇಟಿ ತುಂಬಾ ಮುಂಗೋಪದ ಮಗುವಿರಬೇಕೆಂದು ಸೋನ್ಯಾಳ ಭಾವನೆ. ಆದರೆ ಇದೆಲ್ಲಾ ತೀರ ಅತಿಯಾದಾಗ ಸೋನ್ಯಾ ಕೇಟಿಯನ್ನು ಡಾಕ್ಟರ್ ಬಳಿಗೆ ಕರೆದೊಯ್ದಳು.

ಈ ವೇಳೆಗಾಗಲೇ ಕೇಟಿಯ ಮುಖದ ಮೇಲೆ ಚಾಸುಂಡೆಯಂಥ ಬರೆಗಳು ಬಿದ್ದು ಮುಖದದ್ದರಿಸಿ ಹೋಗಿತ್ತು. ಸಾಧಾರಣ ಡಾಕ್ಟರಿಗೆ ಸಹ ಕೇಟಿಯ ಯಾತನೆ ಅರ್ಥವಾಗಲಿಲ್ಲ. ಅವರು ಸೋನ್ಯಾಳನ್ನು ಗ್ಲಾಸ್ಗೋದ ಡಾ. ಕೆನ್ನೆತ್ ಮೆಕ್ಕಾಲ್‌ರ ಬಳಿಗೆ ಕಳುಹಿಸಿದರು. ಮನುಷ್ಯನ ಚರ್ಮದ ಮೇಲೆ ಬೆಳಕಿನ ಪ್ರಭಾವವನ್ನು ಕುರಿತು ಅಧ್ಯಯನ ಮಾಡಿ ಸಂಶೋಧನೆ ನಡೆಸುತ್ತಿರುವ ಪ್ರಪಂಚದ ಇಬ್ಬರೇ ವೈದ್ಯರಲ್ಲಿ ಡಾ. ಕೆನ್ನೆತ್ ಮೆಕ್ಕಾಲ್ ಒಬ್ಬರು.

ಡಾ. ಕೆನ್ನೆತ್ ಮೆಕ್ಕಾಲ್‌ಗೆ ಕೇಟಿಯ ಅಸಹನೀಯವಾದ ಯಾತನೆಗಳ ಅರಿವಾದರೂ ಯಾವುದೇ ಸಲಹೆ ನೀಡಲು ಸಾಧ್ಯವಾಗಲಿಲ್ಲ. ಆದರೆ ಕೇಟಿಯನ್ನು ಕತ್ತಲ ಕೋಣೆಯಲ್ಲಿಟ್ಟು ರಕ್ಷಿಸುವಂತೆ ಮಾತ್ರ ಸೂಚನೆ ನೀಡಿದರು.

"ಕೇಟಿಯ ನೋವಿನ ಸೂಚನೆಗಳು ಗೊತ್ತಾಗಬೇಕಾದರೆ ಈಗ ಕೇವಲ ಅರ್ಧ ಗಂಟೆ ಸಾಕು. ಕೇಟಿಗೆ ತೊಂದರೆಯಾಗದಂತೆ ಏನು ಮಾಡಬಾರದು, ಏನು ಮಾಡಬೇಕು ಎನ್ನುವುದೆಲ್ಲಾ ಈಗೀಗ ನನಗೆ ಅರ್ಥವಾಗುತ್ತಿದೆ. ದಿನವೂ ಕೇಟಿಗಾಗಿ ಹೊಸ ಹೊಸ ಸಂಗತಿಗಳನ್ನು ಶೋಧಿಸುತ್ತೇವೆ," ಎನ್ನುತ್ತಾಳೆ ಸೋನ್ಯಾ.

ಕೇಟಿಯನ್ನು ವಿಹಾರಕ್ಕೆ ಕರೆದೊಯ್ಯಲೆಂದು ಕೊಂಡ ಹ್ಯಾಮ್. ಸೋನ್ಯಾಳನ್ನು ಕ್ಷಣಕ್ಷಣಕ್ಕೂ ಪ್ರಚೋದಿಸುತ್ತಾ ಕೇಟಿಯನ್ನು ಹೊರಗೆ ಕರೆದೊಯ್ಯುವಂತೆ ಮಾಡುವುದರಿಂದ. ಈ ಸಂಕಟ ತಾಳಲಾರದೆ ಸೋನ್ಯಾ ಅದನ್ನು ಮಾರಿಬಿಡಲು ನಿಶ್ಚಯಿಸಿದ್ದಾಳೆ.

"ಒಂದು ಆಶ್ಚರ್ಯವೆಂದರೆ ಕೆಲವೇ ನಿಮಿಷಗಳಷ್ಟು ನಿರ್ದಿಷ್ಟವಾದ ಬೆಳಕು ಕೇಟಿಯ ಮೇಲೆ ಯಾವ ಪರಿಣಾಮವನ್ನೂ ಉಂಟು ಮಾಡುವುದಿಲ್ಲ. ಒಮ್ಮೆ ನಾನು ಕೇಟಿಯನ್ನು ಎತ್ತಿಕೊಂಡು ನಮ್ಮ ಮನೆಯ ಅಂಗಳದಲ್ಲಿ ಹೊರಗೆ ಹೋದ ಅಜ್ಜಿಗಾಗಿ ಕಾದಿದ್ದೆ. ಆಗ ಕಳೆದ ಕ್ಷಣಗಳು ಕೇಟಿಗೆ ಕೂಡ ಉಲ್ಲಾಸ ಉಂಟುಮಾಡಿತು" ಎನ್ನುವುದು ಸೋನ್ಯಾಳ ಹೊಸ ಶೋಧ.

ಕೇಟಿಯನ್ನು ಆಸ್ಪತ್ರೆಗೆ ಕರೆದೊಯ್ಯುವುದೇ ಒಂದು ಸಮಸ್ಯೆ. ಅಂಬ್ಯುಲೆನ್ಸನ್ನು ಪೂರ್ತಿಯಾಗಿ ಕತ್ತಲಾಗಿಸಬೇಕು. ಆಸ್ಪತ್ರೆಯ ವರಾಂಡ ಪೂರ್ತಿ ಕತ್ತಲಾಗಿಸಬೇಕು. ಹಾಗಾಗಿ ಡಾಕ್ಟರರೇ ಸ್ವತಃ ಮನೆಗೆ ಬಂದು ಕೇಟಿಯನ್ನು ಪರೀಕ್ಷಿಸಲು ಪ್ರಾರಂಭಿಸಿದರು. ಇದರಿಂದ ಕೇಟಿಗೆ ಹೊರಗೆ ಹೋಗಲು ಸಿಕ್ಕಿದ್ದ ಒಂದು ಪುಟ್ಟ ಅವಕಾಶವೂ ತಪ್ಪಿಹೋಯಿತು.

ಕೇಟಿ ಹೇಗೆ ಓದಲು ಕಲಿಯುತ್ತಾಳೆ? ಹೇಗೆ ಪಿಯಾನೋ ಬಾರಿಸುತ್ತಾಳೆ? ಮುಂದಿನ ಬದುಕಿನಲ್ಲಿ ಅವಳ ಹೆಜ್ಜೆ ಹೇಗೆ ಮೂಡುತ್ತದೆ...? ಇವು ಸೋನ್ಯಾಳನ್ನು ನಿರಂತರವಾಗಿ ಕಾಡುವ ಪ್ರಶ್ನೆಗಳು.

ಕೇಟಿಯ ಮೇಲಾಗುವ ಬೆಳಕಿನ ಪರಿಣಾಮವನ್ನು ತಡೆಯುವಲ್ಲಿ ಪ್ರಯೋಗಾರ್ಥವಾಗಿ ಬಳಸಿದ ಮಾತ್ರೆಗಳು ಕೇಟಿಯ ಆರೋಗ್ಯದ ಮೇಲೆ ಭಿನ್ನ ಪರಿಣಾಮ ಬೀರಿದ್ದರಿಂದ ಈಗ ಸೋನ್ಯಾ ಕ್ರೀಮ್‌ವೊಂದನ್ನು ಲೇಪಿಸುವುದರ ಮೂಲಕ ಕೇಟಿಯ ಆರೋಗ್ಯ ರಕ್ಷಿಸಲು ಸಾಧ್ಯವೇ? ಎಂದು ಪ್ರಯತ್ನಿಸುತ್ತಿದ್ದಾಳೆ.

ಕೇಟಿಯ ಚರ್ಮದ ಗಾಯಗಳು ಮಾಯುವುದು ತೀರ ನಿಧಾನವಾಗಿ. ಬೆಳಕು ಆಕೆಯ ಚರ್ಮದ ಗಾಯಗಳನ್ನು ಮಾಯಿಸುವ ಶಕ್ತಿಯನ್ನು ಕೂಡ ಕಿತ್ತುಕೊಂಡಿದೆ. ಹಾಗಾಗಿ ಕೇಟಿಗೆ ವಿಚಿತ್ರವಲ್ಲದ ಗಾಯಗಳು ಮಾಯಲು ಸಾಕಷ್ಟು ಕಾಲವೇ ಹಿಡಿಯಿತು. ಈಗ ಒಂದು ವರ್ಷದ ಕತ್ತಲ ವಾಸದಿಂದ ಕೇಟಿಯ ಸಾಕಷ್ಟು ಗಾಯಗಳು ಮಾಯ್ದಿವೆ.

ಸಿಂಥೆಟಿಕ್ ವಸ್ತ್ರಗಳು ಕೇಟಿಗೆ ಅಲರ್ಜಿ. ಹಾಗಾಗಿ ಸೋನ್ಯಾ ಇಡೀ ಮನೆಯನ್ನು ಉಣ್ಣೆಯಿಂದ ಅಲಂಕರಿಸಿದ್ದಾಳೆ.

ಕೇಟಿಯ ವಿಚಿತ್ರ ಕಾಯಿಲೆ ಈಗಾಗಲೇ ಸಾಕಷ್ಟು ಜನರ ಸಹಾನುಭೂತಿಯನ್ನು ಗಳಿಸಿದೆ. ಅವಳ ವೈದ್ಯಕೀಯ ಉಪಚಾರಕ್ಕೆ ತಗಲುವ ವೆಚ್ಚ ಭರಿಸಲು ರಾಷ್ಟ್ರದಾದ್ಯಂತ ಈಗ ಹಣಸಂಗ್ರಹ ನಡೆದಿದೆ. ಅಲ್ಲದೆ ಆಕೆಯ ಮೇಲಾಗುವ ಬೆಳಕಿನ ಪರಿಣಾಮದಿಂದ ರಕ್ಷಿಸಲು ವ್ಯೋಮಯಾತ್ರಿಗಳು ಬಳಸುವಂತಹ ಉಡುಗೆಯೊಂದನ್ನು ಸೃಷ್ಟಿಸುವ ಪ್ರಯತ್ನವೂ ನಡೆಯುತ್ತಿದೆ. ಇದರಿಂದ ಕೇಟಿ ಶಾಲೆಗೆ ಹೋಗಬಹುದೆಂದು ಅವರ ಅಭಿಪ್ರಾಯ.

ಇವುಗಳ ಮೂಲಕವಾದರೂ ಕೇಟಿಯ ಕತ್ತಲ ವಾಸ ಕೊನೆಗೊಳ್ಳುವುದೇ? ಕೇಟಿ ಹೊರ ಜಗತ್ತಿನ ಸೌಂದರ್ಯ ಅನುಭವಿಸಬಲ್ಲಳೇ ಎಂದು ಕೇಟಿಯ ಅಮ್ಮ ಸೋನ್ಯಾ ನಿರೀಕ್ಷಿಸುತ್ತಿದ್ದಾಳೆ. ಅವಳ ನಿರೀಕ್ಷೆ ಹುಸಿಯಾಗಲಾರದಷ್ಟೇ! ❀

( ಕೃಪೆ: 'ವೀಕ್' )



# ಫ್ಲೋರೈಡ್ ಟೂತ್‌ಪೇಸ್ಟ್ ನಿಷೇಧ

## ಸರ್ವೋಚ್ಚ ನ್ಯಾಯಾಲಯದಿಂದ ಮನವಿ ತಿರಸ್ಕೃತ

ಡಾ. ಎ. ಕೆ. ಸುಶೀಲಾರವರು ವ್ಯಕ್ತಪಡಿಸಿದ್ದ ಅಭಿಪ್ರಾಯವನ್ನು ಆಧರಿಸಿ ಶ್ರೀ. ಎಂ. ಎಂ. ಜೋಷಿ ಎಂಬ ವಕೀಲರು ಫ್ಲೂರೈಡ್-ಯುಕ್ತ ಟೂತ್‌ಪೇಸ್ಟುಗಳನ್ನು ನಿಷೇಧಿಸಬೇಕೆಂದು ಸರ್ವೋಚ್ಚ ನ್ಯಾಯಾಲಯಕ್ಕೆ ಮನವಿ ಸಲ್ಲಿಸಿದ್ದರಷ್ಟೆ. ಅಕ್ಟೋಬರ್ ೧, ೧೯೮೬ ರಂದು ಅದು ಮುಖ್ಯ ನ್ಯಾಯಮೂರ್ತಿ ಶ್ರೀ. ಪಿ. ಎನ್. ಭಗವತಿ, ನ್ಯಾಯಮೂರ್ತಿ ಶ್ರೀ. ರಂಗನಾಥ ಮಿಶ್ರ ಹಾಗೂ ನ್ಯಾಯಮೂರ್ತಿ ಶ್ರೀ. ವಿ. ಖಲೀದವರೆದುರು ವಿಚಾರಣೆಗೆ ಬಂತು.

ಪ್ರತಿವಾದಿ ಕಂಪನಿಗಳಾದ ಜ್ಯೋಫ್ರಿ ಮ್ಯಾನರ್ಸ್ ಆ್ಯಂಡ್ ಕಂ. ಲಿ. (ಫೊರ್ಹಾನ್ಸ್ ಫ್ಲೂರೈಡ್ ಟೂತ್‌ಪೇಸ್ಟ್ ತಯಾರಕರು) ಮತ್ತು ಹಿಂದುಸ್ತಾನ ಸಿಬಾ-ಗೈಗ್ಯಿ ಲಿ. (ಸಿಬಾಕಾ ಫ್ಲೂರೈಡ್ ಟೂತ್‌ಪೇಸ್ಟ್ ತಯಾರಕರು) ತಮ್ಮ ಹೇಳಿಕೆಯನ್ನು ಭಾರತದಲ್ಲೂ ವಿದೇಶಗಳಲ್ಲೂ ಲಭ್ಯವಿರುವ ವಿವಾದಾತೀತ ವೈಜ್ಞಾನಿಕ ಹಾಗೂ ವೈದ್ಯಕೀಯ ಸಾಕ್ಷ್ಯಾಧಾರಗಳನ್ನು ಆಧರಿಸಿ ಮಂಡಿಸಿದರು. ಫ್ಲೂರೈಡ್ - ಯುಕ್ತ ಟೂತ್‌ಪೇಸ್ಟು ದಂತರಕ್ಷಣೆಗೆ, ವಿಶೇಷತಃ ಮಕ್ಕಳಲ್ಲಿ, ನಿಶ್ಚಿತವಾಗಿಯೂ ಪ್ರಯೋಜನಕರವೆಂದು ಈ ಆಧಾರಗಳು ಸಾಬೀತು ಪಡಿಸಿವೆ. ಜಾಗತಿಕ ಆರೋಗ್ಯ ಸಂಸ್ಥೆಯು ( WHO ) ಮಕ್ಕಳು ಫ್ಲೂರೈಡ್ ಟೂತ್‌ಪೇಸ್ಟ್ ಬಳಸಬೇಕೆಂದು ವಿಶೇಷ ಶಿಫಾರಸು ಮಾಡಿದೆ. ಫ್ಲೂರೈಡ್ ಬಳಕೆಯು ದಂತ ಅಥವಾ ಅಸ್ಥಿಪಂಜರದ ಫ್ಲೂರೋಸಿಸ್ ಉಂಟು ಮಾಡುತ್ತದೆಂಬ ವಾದಕ್ಕೆ ವೈದ್ಯಕೀಯ ಸಾಕ್ಷ್ಯಾಧಾರಗಳಿಲ್ಲ. ಡ್ರಗ್ಸ್ ಆಂಡ್ ಕಾಸ್ಮೆಟಿಕ್ಸ್ ಆ್ಯಕ್ಟನ್ವಯ ಸಂಬಂಧಪಟ್ಟ ರಾಜ್ಯಗಳ ಆಹಾರ ಮತ್ತು ಔಷಧಿ ಆಡಳಿತಗಳು ನೀಡಿದ ಲೈಸೆನ್ಸುಗಳ ಅನ್ವಯವೇ ಎರಡೂ ಪ್ರತಿವಾದೀ ಕಂಪನಿಗಳು ಉತ್ಪಾದನೆಯಲ್ಲಿ ತೊಡಗಿವೆ.

ಸರ್ವೋಚ್ಚ ನ್ಯಾಯಾಲಯವು ವಾದ ಪ್ರತಿವಾದಗಳನ್ನು ಕೇಳಿದ ನಂತರ ಶ್ರೀ. ಜೋಷಿಯವರ ವಾದವನ್ನು ತಳ್ಳಿ ಹಾಕಿತು. ಶ್ರೀ. ಜೋಷಿ ತಮ್ಮ ವಾದವನ್ನು ಸ್ವತಃ ಮಂಡಿಸಿದರು. ಜ್ಯೋಫ್ರಿ ಮ್ಯಾನರ್ಸ್ ಪರವಾಗಿ ಹಿರಿಯ ವಕೀಲ ಶ್ರೀ ಅನಿಲ ದಿವಾನ ವಾದಿಸಿದರು. ಇವರಿಗೆ ಕ್ರಾಫೋರ್ಡ್ ಬೇಲಿ ಆ್ಯಂಡ್ ಕಂ. (ಸಾಲಿಸಿಟರ್ಸ್)ನ ಶ್ರೀ. ಡಿ. ಡಿ. ಉದೇಶಿಯವರು ನೆರವಾದರು. ಹಿಂದುಸ್ತಾನ್ ಸಿಬಾ-ಗೈಗ್ಯಿ ಪರವಾಗಿ ಹಿರಿಯ ವಕೀಲ ಶ್ರೀ. ರಾಜೇಂದ್ರ ಸಾಚೇರವರು ಸಾಲಿಸಿಟರುಗಳಾದ ಕಾಂಗಾ ಆ್ಯಂಡ್ ಕಂ. ನ ಶ್ರೀ. ಕೆ. ಜೆ. ಮರ್ಚಂಟರ ಸಹಾಯದೊಂದಿಗೆ ವಾದಿಸಿದರು.

# ಮುಟ್ಟಿದರೆ ಮುನಿ ಲೋಹ!

ತ. ಕು. ನಾಗಭೂಷಣ

ಚರಿತ್ರೆಯ ಪುಟಗಳಲ್ಲಿ ಯಾರೇ ಆಗಲೀ ತಮ್ಮ ಬಗ್ಗೆ ಉತ್ತಮ ಉಲ್ಲೇಖವಿರುವುದನ್ನು ಕಂಡುಕೊಳ್ಳುವುದು ಸುಲಭವಲ್ಲ. ಹಾಗೇ ರಸಾಯನ ಶಾಸ್ತ್ರದಲ್ಲಿಯೂ ತಮ್ಮ ಪ್ರತಿಸ್ಪರ್ಧಿಗಳನ್ನು ಹೇಗೋ ಗೆದ್ದ ವಸ್ತುಗಳಿಗೆ ಮಾತ್ರವೇ ಅಂಥ ಗೌರವ ಸಲ್ಲುತ್ತದೆ. ಒಂದು ರೀತಿಯಲ್ಲಿ ಅದು ತರ್ಕಬದ್ಧವಾಗಿದೆ. ಕೃತಕವಾಗಿ ತಯಾರಿಸಲಾದ ಮೂಲ ವಸ್ತುಗಳಲ್ಲಿ ಮೊದಲನೆಯ ವಿಶಿಷ್ಟ ಸ್ಥಾನವನ್ನು ಟೆಕ್ನಿಶಿಯಂ ಪಡೆಯಲಿಲ್ಲವೇ? ಹೀಲಿಯಂ ಅನ್ನು ಮೊದಲು ಬಾರಿಗೆ ಸೂರ್ಯನ ಮೇಲೆ ಗುರುತಿಸಿದ ನಂತರವೇ ಭೂಮಿಯ ಮೇಲೆ ಕಂಡುಹಿಡಿಯಲಾಯಿತು. ಆದರಿಂದಲೇ ಹೀಲಿಯಂಗೂ ತನ್ನದೇ ಆದ ಮೊದಲ ಸ್ಥಾನವೊಂದಿದೆ.

ರೋಹಿತ ಸಮೀಕ್ಷೆಯ ಚರಿತ್ರೆಯಲ್ಲಿ ತನ್ನ ಹೆಸರನ್ನು ನೀಲಿ ಅಕ್ಷರಗಳಲ್ಲಿ ಬರೆದ ಸೀಸಿಯಂ, ಮೇಲೆ ಹೇಳಿದ "ಅದೃಷ್ಟವಂತ" ಮೂಲವಸ್ತುಗಳಲ್ಲಿ ಒಂದಾಗಿದೆ. ಜರ್ಮನ್ ವಿಜ್ಞಾನಿಗಳಾದ ಬುನ್ಸೆನ್ ಮತ್ತು ಕಿರ್ಛಾಫ್ ಆ ಹೆಸರನ್ನು ಚರಿತ್ರೆಯ ಪುಟಗಳಲ್ಲಿ ಹೊರತಂದರು.

ಲೋಹಗಳ ಲವಣಗಳನ್ನು ಬೆಂಕಿಯಲ್ಲಿ ಹಿಡಿದಾಗ ತಮ್ಮದೇ ಆದ ಬಣ್ಣವನ್ನು ಕೊಡುವ ಗುಣ ಬಹುಶಃ ಮುಂಚಿನಿಂದಲೇ ತಿಳಿದಿತ್ತಾದರೂ ೧೮೫೦ರಲ್ಲಿ ಹೈಡಲ್‌ಬರ್ಗ್ ವಿಶ್ವವಿದ್ಯಾಲಯದ ಪ್ರೊಫೆಸರ್ ಬುನ್ಸೆನ್‌ನ ಗಮನವನ್ನು ಆಕರ್ಷಿಸಿತು. ಬೇರೆ ಬೇರೆ ಲವಣಗಳನ್ನು ಬೆಂಕಿಗೆ ಹಿಡಿದಾಗ ನೇರಳೆ, ನಂತರ ಹಳದಿ ಆಮೇಲೆ ಗುಲಾಬಿ ಬಣ್ಣಕ್ಕೆ (ಗೋಸುಂಬೆಯು ತನ್ನ ಬಣ್ಣವನ್ನು ಬದಲಿಸುವ ರೀತಿಯಲ್ಲಿ) ಬದಲಾಯಿಸುತ್ತವೆ. ಪ್ರತಿಯೊಂದು ಲೋಹವೂ ಜ್ವಾಲೆಗೆ ತನ್ನದೆ ಆದ ನಿರ್ದಿಷ್ಟ ಬಣ್ಣವನ್ನು ಕೊಡುವುದಲ್ಲದೆ, ಅಂತಹ ಬಣ್ಣ ಲೋಹದ ಸ್ಥಿತಿಯನ್ನು ಅವಲಂಬಿಸಿರುವುದಿಲ್ಲವೆಂದು ಬುನ್ಸೆನ್‌ನ ಪ್ರಯೋಗಗಳು ಸಿದ್ಧಪಡಿಸಿದವು. ಉದಾಹರಣೆಗೆ ಬೇರಿಯಂನ ಎಲ್ಲಾ ಸಂಯುಕ್ತ ವಸ್ತುಗಳು ಬೆಂಕಿಗೆ ಹಸಿರು ಛಾಯೆಯನ್ನು ಕೊಟ್ಟರೆ ಕ್ಯಾಲ್ಸಿಯಂನ ಸಂಯುಕ್ತ ವಸ್ತುಗಳು ಕೆಂಪು ಬಣ್ಣವನ್ನು ಕೊಡುತ್ತವೆ.

ಮೇಲಿನ ಗುಣವನ್ನು ಉಪಯೋಗಿಸಿಕೊಂಡು ಒಂದು ಪದಾರ್ಥದಲ್ಲಿರಬಹುದಾದ ಮೂಲ ವಸ್ತುಗಳನ್ನು ಸರಳವಾಗಿ ಮತ್ತು ಶೀಘ್ರವಾಗಿ ಗುರುತಿಸಲು ಸಾಧ್ಯವಾಗುತ್ತದೆಯೇ? ರಸಾಯನಿಕ ವಿಶ್ಲೇಷಣೆಯಲ್ಲಿ ಇದೊಂದು ಕ್ರಾಂತಿ ಎಂದು ಹೇಳಬಹುದಾದರೂ ಪ್ರಾಯೋಗಿಕವಾಗಿ ಅದನ್ನು ಉಪಯೋಗಿಸಿಕೊಳ್ಳಲು ಸಾಧ್ಯವಾಗದಾಯಿತು. ಏಕೆಂದರೆ ಪ್ರತಿಯೊಂದು ಪದಾರ್ಥದಲ್ಲೂ ಅನೇಕ ವಸ್ತುಗಳು ಮಿಶ್ರವಾಗಿದ್ದು, ಅವುಗಳು ತಮ್ಮದೇ ಆದ ಬಣ್ಣ

ಗಳನ್ನು ಕೊಟ್ಟು ಸರಿಯಾದ ವಿಶ್ಲೇಷಣೆಗೆ ತೊಡಕುಂಟುಮಾಡುತ್ತವೆ.

ಹಾಗೆಂದ ಮಾತ್ರಕ್ಕೆ ಹೊಸದಾದ ಒಂದು ಕ್ರಮವನ್ನು ಅಲ್ಲಿಗೇ ಬಿಡಲಾದೀತೇ? ಅದನ್ನು ರಕ್ಷಿಸಲೋ ಎಂಬಂತೆ ಪ್ರಕಾಶ ವಿಜ್ಞಾನ (Optics)ದಲ್ಲಿ ಖ್ಯಾತಿ ಗಳಿಸಿದ್ದ ಪ್ರಸಿದ್ಧ ಭೌತ ಶಾಸ್ತ್ರಜ್ಞನೂ ಬುನ್ಸೆನ್‌ನ ಸಹೋದ್ಯೋಗಿ ಸ್ನೇಹಿತನೂ ಆದ ಪ್ರೊ. ಕಿರ್ಚ್ಹಾಫ್ ಸಹಾಯಕ್ಕೆ ಬಂದನು. ಆ ಸಮಯದಲ್ಲಿ ಅವನು ಘನ ಮತ್ತು ದ್ರವ ವಸ್ತುಗಳ ರೋಹಿತ ಸಮೀಕ್ಷೆಯನ್ನು ನಡೆಸುತ್ತಿದ್ದನು. ಬರ್ನರ್‌ನ ಕಾದ ಜ್ವಾಲೆಗಿಂತ ಎಲ್ಲಾ ಬಣ್ಣಗಳೂ ಅವುಗಳ ಛಾಯೆಗಳೂ ಸ್ಪಷ್ಟವಾಗಿ ಗೋಚರಿಸುವ ಜ್ವಾಲೆಯ ರೋಹಿತ ಸಮೀಕ್ಷೆಯನ್ನು ಪರೀಶೀಲಿಸುವುದು ಸೂಕ್ತವೆಂದು ಬುನ್ಸೆನ್‌ಗೆ ಸಲಹೆ ನೀಡಿದನು. ಮೊದಲು ಬರಿಗಣ್ಣಿನಿಂದ ಪರೀಕ್ಷಿಸಲಾಗುತ್ತಿದ್ದ ಜ್ವಾಲೆಯನ್ನು ಬೇರೊಂದು ಕ್ರಮದಿಂದ ಪರಿಶೀಲಿಸಲಾಯಿತು. ಅದರಿಂದ ಹೊರ ಬರುವ ಕಿರಣಗಳನ್ನು ಅನೇಕ ಮಸೂರಗಳು ಮತ್ತು ಅಶ್ರಗ(Prism)ದ ಮೂಲಕ ಹರಿಯುವಂತೆ ಮಾಡಿ ವಿವಿಧ ವರ್ಣಗಳ, ಲಂಬವಾದ ಗೆರೆಗಳ ಪಟ್ಟಿಯನ್ನಾಗಿ ಮಾರ್ಪಡಿಸಲಾಯಿತು.

ಇಂತಹ ಪ್ರಯೋಗಗಳನ್ನು ಮುಂದುವರಿಸಿದ ಬುನ್ಸೆನ್, ಅಡಿಗೆ ಉಪ್ಪು, ಸೋಡಿಯಂನ ಕಾರ್ಬೋನೇಟ್, ಸೋಡಿಯಂ ಸಲ್ಫೇಟ್— ಹೀಗೆ ಸೋಡಿಯಂನ ಯಾವುದೇ ಲವಣವನ್ನು ಬೆಂಕಿಗೆ ಹಿಡಿದಾಗ ರೋಹಿತದ ಒಂದೇ ಭಾಗದಲ್ಲಿ ಎರಡು ಹಳದಿ ಗೆರೆಗಳು ಕಂಡುಬರುವುದನ್ನು ಗಮನಿಸಿದ.

ಅರೋಪಿತರನ್ನು ಬೆರಳು ಗುರುತುಗಳಿಂದ ಪತ್ತೆ ಮಾಡುವಂತೆ, ಪ್ರತಿಯೊಂದು ಮೂಲ ವಸ್ತುವನ್ನೂ ಅದರ ಗುಣಲಕ್ಷಣವನ್ನು ವಿವರಿಸುವ ರೋಹಿತದ ಗೆರೆಗಳಿಂದ ಗುರುತಿಸಬಹುದೆಂಬುದು ನೂರಾರು ಪದಾರ್ಥಗಳನ್ನು ಮೇಲಿನ ಪ್ರಯೋಗಕ್ಕೆ ಒಳಪಡಿಸಿದ ನಂತರ ರುಜುವಾಯಿತು, ಪದಾರ್ಥದ ಪ್ರಮಾಣ ಎಷ್ಟೇ ಕಡಿಮೆ ಇದ್ದರೂ (ಮಿಲಿಗ್ರಾಂನ ದಶಲಕ್ಷ ಪಾಲುಗಳಲ್ಲಿ ಒಂದರಷ್ಟು) ರಶ್ಮೀ ವರ್ಣ ದಶಕ(Spectroscope)ದ ದೃಷ್ಟಿಯಿಂದ ತಪ್ಪಿಸಿಕೊಳ್ಳಲಾರದು.

ಹಲವಾರು ಮೂಲವಸ್ತುಗಳ ರೋಹಿತ ಸಮೀಕ್ಷೆಯನ್ನು ನಡೆಸಿದ ಬುನ್ಸೆನ್ ಮತ್ತು ಕಿರ್ಚ್ಹಾಫ್, ಈ ಹೊಸ ಕ್ರಮದಿಂದ ಯಾವುದೇ ಮೂಲವಸ್ತುವಿನ ಇರುವಿಕೆಯನ್ನಲ್ಲದೆ ರೋಹಿತದ ಗೆರೆಗಳ ತೀವ್ರತೆಯಿಂದ ಅದರ ಪ್ರಮಾಣವನ್ನು ಕಂಡುಹಿಡಿಯಬಹುದೆಂದು ತೋರಿಸಿ ಕೊಟ್ಟರು.

ಜರ್ಮನಿಯ ಶ್ವಾರ್ಜ್‌ವಾಲ್ಡ್ ಊಟಿ (Spring)ಗಳ ಖನಿಜ ಮಿಶ್ರಿತ ನೀರಿನ ರೋಗ ನಿವಾರಕ ಗುಣಗಳನ್ನು ವಿವರಿಸಲೆಂದು ಅಲ್ಲಿಯ ಸ್ಥಳೀಯ ವೈದ್ಯರು ಅದರ ಸ್ಯಾಂಪಲ್‌ಗಳನ್ನು ವಿಶ್ಲೇಷಿಸಲು ೧೮೬೦ರಲ್ಲಿ ಬುನ್ಸೆನ್ನನಿಗೆ ಕಳುಹಿಸಿದರು. ನೀರಿನ ಭಾಗವನ್ನು ಇಂಗಿಸಿ ದಟ್ಟವಾದ ದ್ರಾವಣದ ಒಂದು ಹನಿಯನ್ನು ಬೆಂಕಿಗೆ ಹಿಡಿದ ಬುನ್ಸೆನ್ ರಶ್ಮೀ ವರ್ಣದರ್ಶಕದಲ್ಲಿ ನೋಡಿದಾಗ ಸೋಡಿಯಂ, ಪೊಟ್ಯಾಸಿಯಂ, ಕ್ಯಾಲ್ಸಿಯಂ, ಸ್ಟ್ರಾನ್‌ಶಿಯಂ ಮತ್ತು ಲೀಥಿಯಂ ಗೆರೆಗಳನ್ನು ಗುರುತಿಸಿದನು. ಅವುಗಳ ಮಧ್ಯೆ ಎರಡು ನೀಲಿ ರೇಖೆಗಳೂ ಕಾಣಿಸಿಕೊಂಡಿದ್ದವು. ಅವು ಸ್ಟ್ರಾನ್‌ಶಿಯಂನದ್ದಾಗಿರಬಹುದೇ? ಅದು ಸ್ಟ್ರಾನ್‌ಶಿಯಂ ಆಗಿದ್ದಲ್ಲಿ ಒಂದೇ ಒಂದು ಗೆರೆಯಿರಬೇಕಿತ್ತು. ಬುನ್ಸೆನ್ ಹಾಗೂ ಕಿರ್ಚ್ಹಾಫ್ ತಮಗೆ ತಿಳಿದ ಎಲ್ಲಾ ನಿರ್ದಿಷ್ಟ ಮಾನಗಳೊಡನೆ ರೋಹಿತವನ್ನು ಹೋಲಿಸಿ ನೋಡಿದರೂ ಇವುಗಳನ್ನು ಯಾವುದೂ ಹೋಲುತ್ತಿರಲಿಲ್ಲ, ಹೊಸದೊಂದು ಮೂಲ ವಸ್ತುವನ್ನು ಪತ್ತೆ ಮಾಡಲಾಗಿತ್ತು! ಅದಕ್ಕೆ ಅವರು "ಸೀಸಿಯಂ" (ಲ್ಯಾಟಿನ್ನಿನಲ್ಲಿ 'ಆಕಾಶ ನೀಲಿ' ಎಂದರ್ಥ) ಎಂದು ಹೆಸರಿಟ್ಟರು.

ರೋಹಿತ ಸಮೀಕ್ಷೆಯಿಂದ ಗುರುತಿಸಲಾದ

ಮೊದಲ ಮೂಲವಸ್ತುವಾದ ಸೀಸಿಯಂ, ಅನೇಕ ಮೂಲ ವಸ್ತುಗಳಂತೆ ರಸಾಯನಿಕ ಕ್ರಮದಿಂದ ಕಂಡುಹಿಡಿಯಲ್ಪಟ್ಟಿರಲಿಲ್ಲ. ವರ್ಷಗಳು ಕಳೆದಂತೆ ರಶ್ಮೀವರ್ಣದರ್ಶಕ ರುಬಿಡಿಯಂ, ಥಾಲಿಯಂ, ಇಂಡಿಯಂ, ಗ್ಯಾಲಿಯಂ, ಸಮೇರಿಯಂಗಳ ಜನ್ಮವನ್ನು ವಿಜ್ಞಾನ ಪ್ರಪಂಚಕ್ಕೆ ತಿಳಿಸಿತಾದರೂ ರೋಹಿತ ಸಮೀಕ್ಷೆಯ ಕ್ರಮದಿಂದ ತಿಳಿದು ಬಂದ ಮೊದಲ ಮೂಲವಸ್ತುವೆಂದು 'ಸೀಸಿಯಂ' ರಸಾಯನ ಶಾಸ್ತ್ರದ ಚರಿತ್ರೆಯಲ್ಲಿ ಹೆಸರು ಗಳಿಸಿತು.

ಹಲವಾರು ವರ್ಷಗಳು ಅನೇಕ ದೇಶಗಳ ರಸಾಯನ ಶಾಸ್ತ್ರಜ್ಞರನ್ನು ಗಾಬರಿಗೊಳಿಸಿದ್ದ ಕಳುವಿನ ಬಗ್ಗೆ, ವಿವರಿಸಲಾಗದಿದ್ದ ಘಟನೆಯೊಂದನ್ನು ತಿಳಿಯುವುದರಲ್ಲಿ ಸೀಸಿಯಂ ನೆರವಾಯಿತು. ೧೮೪೬ ರಲ್ಲಿ ಜರ್ಮನಿಯ ವಿಜ್ಞಾನಿ ಪ್ಲಾಟ್ನರ್, 'ಪೊಲ್ಲೂಸೈಟ್' ಎಂಬ ಖನಿಜವನ್ನು ಪತ್ತೆ ಮಾಡಿತು. ಎಷ್ಟೇ ಎಚ್ಚರಿಕೆಯಿಂದ, ನಿಖರವಾಗಿ ನಿರ್ಧರಿಸಿದರೂ ಅದರಲ್ಲಿನ ಎಲ್ಲ ಮೂಲವಸ್ತುಗಳ ಪ್ರಮಾಣದ ಮೊತ್ತ ಶೇಕಡಾ ೯೩ ಕ್ಕೆ ಬರುತ್ತಿದ್ದುದು ಅವನನ್ನು ತಬ್ಬಿಬ್ಬು ಮಾಡಿತ್ತು. ಉಳಿದ ೭% ಎಲ್ಲಿ ಕಳುವಾಗಿತ್ತು? ೨೦ ವರ್ಷಗಳು ಈ ಪ್ರಶ್ನೆಗೆ ಉತ್ತರ ಸಿಕ್ಕಿರಲಿಲ್ಲ. ಅದು ಸೀಸಿಯಂ ಎಂಬುದು ನಿರಾಕರಿಸಲಾಗದ ಸತ್ಯವೆಂದು ೧೮೬೪ ರಲ್ಲಿ ಇಟಲಿಯ ವಿಜ್ಞಾನಿ ಪಿಸಾನಿ ದೃಢಪಡಿಸಿದನು. ಪ್ಲಾಟ್ನರ್, ಅದನ್ನು ಪೊಟ್ಯಾಸಿಯಂ ಎಂದು ತಪ್ಪಾಗಿ ತಿಳಿದಿದ್ದನು. ಇವೆರಡು ಮೂಲ ವಸ್ತುಗಳೂ ಅನೇಕ ರಸಾಯನಿಕ ಗುಣಗಳಲ್ಲಿ ಒಂದೇ ಆದರೂ ಸೀಸಿಯಂನ ಸಾಪೇಕ್ಷ ಸಾಂದ್ರತೆ ಪೊಟ್ಯಾಸಿಯಂನ ಎರಡರಷ್ಟಿದೆ.

ಸೀಸಿಯಂ ಅತಿ ವಿರಳವಾಗಿ ದೊರಕುವ ಮೂಲವಸ್ತುವಾದರೂ ಕೆಲವು ಪರ್ವತ ಶಿಲೆಗಳಲ್ಲೂ ಸಮುದ್ರದ ನೀರಿನಲ್ಲೂ ಕಾಣ ಸಿಕ್ಕಿದೆ. ಬುನ್ಸೆನ್, ತನ್ನ ಪ್ರಯೋಗಗಳಿಗಾಗಿ ಕೆಲವು ಗ್ರಾಂ ಸೀಸಿಯಂ ಲವಣವನ್ನು ಪಡೆಯಲು ೪೦ ಟನ್ ಲವಣ ಮಿಶ್ರಿತ ನೀರನ್ನು ಇಂಗಿಸಬೇಕಾಯಿತು. ಕುತೂಹಲಕರ ವಿಷಯವೆಂದರೆ ಕಾಫೀಬೀಜ, ಟೀ ಸೊಪ್ಪು, ಹೊಗೆಸೊಪ್ಪಿನ ಬೂದಿ ಹಾಗೂ ಬೀಟ್‌ರೂಟ್‌ನಿಂದ ತೆಗೆದ ಸಕ್ಕರೆ ಇವುಗಳಲ್ಲಿ "ಸೀಸಿಯಂ"ನ ಕುರುಹು ಸಿಕ್ಕಿದೆ.

ಲೋಹಗಳಲ್ಲಿ ಅತಿ ಹೆಚ್ಚಿನ ಪ್ರತಿಕ್ರಿಯಾಶಕ್ತಿ (Reactivity)ಗೆಂದು ಬಹುಮಾನವೇನಾದರೂ ಇದ್ದಲ್ಲಿ ಅತ್ಯಂತ ಪ್ರಮುಖ ರಸಾಯನ ಶಾಸ್ತ್ರಜ್ಞರೂ ಸೀಸಿಯಂಗೆ ಅದನ್ನು ನಿಸ್ಸಂಶಯವಾಗಿ ಕೊಡುತ್ತಾರೆ. ನಿಸರ್ಗದಲ್ಲಿ ದೊರಕದ ಫ್ರಾಂಸಿಯಂನ್ನು ಬಿಟ್ಟಂತೆ ನಿಯತ ಕಾಲಿಕ ಕೋಷ್ಟಕದಲ್ಲಿರುವ ಎಲ್ಲಾ ಮೂಲವಸ್ತುಗಳಿಗಿಂತ ಅತ್ಯಂತ ಲೋಹದ ಗುಣವನ್ನು ಪಡೆದಿರುವ ಸೀಸಿಯಂ ಅತ್ಯಂತ ಹೆಚ್ಚಿನ ಪ್ರತಿಕ್ರಿಯಾಶಕ್ತಿಯನ್ನು ಹೊಂದಿದೆ. ಗಾಳಿಯಲ್ಲಿ ತೆರೆದಿಟ್ಟ ಕೂಡಲೇ ಶುದ್ಧ ಲೋಹ ಹತ್ತಿಕೊಂಡು ಉರಿಯುತ್ತದೆ. ಗಂಧಕ, ರಂಜಕ ಅಥವಾ ಹ್ಯಾಲೋಜನ್‌ಗಳ (ಕ್ಲೋರಿನ್, ಫ್ಲೂರೀನ್ ಬ್ರೋಮೀನ್, ಐಯೋಡಿನ್) ಸಂಪರ್ಕ ಬಂದಾಗ ಉಗ್ರವಾದ ಪ್ರತಿಕ್ರಿಯೆಯುಂಟಾಗಿ ಸ್ಫೋಟಿಸುತ್ತದೆ. ರಾಸಾಯನಿಕವಾಗಿ ಶಾಂತಿಯುತವಾಗಿರುವ, ೧೧೬ ಸೆಂ. ನಲ್ಲಿರುವ ಮಂಜುಗಡ್ಡೆಯೊಡನೆಯೂ ಸೀಸಿಯಂ ಉಗ್ರವಾಗಿ ಘರ್ಷಿಸುತ್ತದೆ!

ಮೇಲಿನ ಕಾರಣಗಳಿಂದ, ಶುದ್ಧ ಸೀಸಿಯಂ ಲೋಹವನ್ನು ಪಡೆಯುವುದು ಬಹಳ ಕಷ್ಟಕರವಾಗಿರುವುದು ಆಶ್ಚರ್ಯವೇನಲ್ಲವೆನ್ನುವ ವಿಷಯ ತಿಳಿದು ಬರುತ್ತದೆ. ೧೮೮೨ ರಲ್ಲಿ ಸ್ವೀಡನ್ನಿನ ರಸಾಯನ ಶಾಸ್ತ್ರಜ್ಞ ಕೆ. ಸೆಟರ್‌ಬರ್ಗ್ ಮೊದಲಬಾರಿಗೆ ವಿದ್ಯುದ್ವಿಶ್ಲೇಷಣೆಯಿಂದ ಸೀಸಿಯಂ ಅನ್ನು ಹೊರತೆಗೆಯುವುದರ ಮೂಲಕ ಮೇಲಿನ ಸಮಸ್ಯೆಯನ್ನು ಪರಿಹರಿಸಿದನು. ಇಂದು ಬಳಕೆಯಲ್ಲಿರುವ ವಿಧಾನ ಕ್ರಮವನ್ನು ೧೯೧೧ ರಲ್ಲಿ ಫ್ರಾನ್ಸ್‌ನ ರಸಾಯನ ಶಾಸ್ತ್ರಜ್ಞ ಎ. ಏಕ್ಸ್‌ಪಿಲ್ಲೆ ಸೂಚಿಸಿದ. ಅದರಂತೆ ಸುಮಾರು

೭೦೦ ಸೆಂ. ಉಷ್ಣಾಂಶದಲ್ಲಿ, ನಿರ್ವಾತದಲ್ಲಿ ಸೀಸಿಯಂಅನ್ನು ಅದರ ಕ್ಲೋರೈಡ್‌ನಿಂದ ಹೊರ ತೆಗೆಯುವುದಕ್ಕೆ ಕ್ಯಾಲ್ಸಿಯಂ ಲೋಹವನ್ನು ಬಳಸಲಾಗುತ್ತದೆ.

ಆದರೆ ಹೊರತೆಗೆದ ಶುದ್ಧ ಸೀಸಿಯಂ ಅನ್ನು ಸಂಗ್ರಹಿಸಿಡುವುದು ಹೇಗೆ? ವಿರೋಧಾಭಾಸ ವೆಂದು ಕಂಡರೂ ಬೇರೆ ಲೋಹಗಳಿಂದ ಅದನ್ನು ಅಶುದ್ಧಗೊಳಿಸಿಡುವುದೇ ಇದಕ್ಕೆ ಉತ್ತರ! ದ್ರವರೂಪದ ಸೀಸಿಯಂಗೆ ಬೆರಸಿ ತಯಾರಿಸಲಾದ ಮಿಶ್ರಲೋಹಗಳು ಉಗ್ರವಾಗಿ ವರ್ತಿಸದಿರುವುದ ರಿಂದ ಬೇಕಾದಷ್ಟು ದಿನ ಕೂಡಿಡಬಹುದು. ಬೇಕೆಂದಾಗ ಅಂತಹ ಮಿಶ್ರಲೋಹವನ್ನು ನಿರ್ವಾ ತದಲ್ಲಿ ಭಟ್ಟಿ ಇಳಿಸಿ ಶುದ್ಧ ಲೋಹವನ್ನು ಪಡೆಯ ಬಹುದು.

ತಾಜಾ ಸೀಸಿಯಂ ಚಿನ್ನದ ಮಂದ ಛಾಯೆಯ ಬಣ್ಣವುಳ್ಳ ಕಾಂತಿಯುತವಾದ ಲೋಹ, ಮೇಣದಂತೆ ಮೆತ್ತಗೂ ಮೆಗ್ನೀಸಿಯಂ ಬೆರಿಲಿಯಂನಂತೆ ಹಗುರವಾಗಿಯೂ ಇದೆ. ಪಾದ ರಸ ಅತ್ಯಂತ ಕೆಳಮಟ್ಟದ ದ್ರವೀಭವನ ಬಿಂದು ವನ್ನು ಹೊಂದಿರುವುದೆಂದು ಸಾಮಾನ್ಯವಾಗಿ ಎಲ್ಲರೂ ತಿಳಿದಿರುವರು. ಆದರೆ ಸೀಸಿಯಂನ ದ್ರವೀಭವನ ಬಿಂದು ಕೇವಲ ೨೮° ಸೆಂ. ಅಂಗೈಯಲ್ಲಿ ಹಿಡಿದ ಒಂದು ಚೂರು ಸೀಸಿಯಂ ಕೂಡಲೇ ದ್ರವವಾಗುವುದಾದರೂ ಅಂತಹ ಪ್ರಯೋಗವನ್ನು ಮಾಡುವುದು ಅತ್ಯಂತ ಅಪಾಯಕರವೆಂದು ಹೇಳಬೇಕಿಲ್ಲವಷ್ಟೇ!

ಒತ್ತಡಕ್ಕೆ ಒಳಗಾಗುವ ಯಂತ್ರಗಳು ಅಥವಾ ಕುಲುಮೆಯ ಭಾಗಗಳಲ್ಲಾಗಲೀ, ರಸಾಯನಿಕ ವಾಗಿ ತೀವ್ರ ಪ್ರತಿಕ್ರಿಯಗಳಿಗೆ ಒಳಪಡುವಲ್ಲಿ ಯಾಗಲೀ ಸೀಸಿಯಂ ಅನ್ನು ಬಳಸುವುದು ಅಸಾಧ್ಯವೆಂದು ಹೇಳಬಹುದು. ಹಾಗೆಂದರೆ "ನೀಲಿ ರಕ್ತ"ದ "ಮುಟ್ಟಿದರೆ ಮುನಿ" ಎನ್ನ ಬಹುದಾದ ಸೀಸಿಯಂ ಕೆಲಸಕ್ಕೆ ಬಾರದ್ದೆಂದು ತೀರ್ಮಾನಿಸಲಾದೀತೇ? ಕಬ್ಬಿಣ, ಅಲ್ಯೂ-ಮಿನಿಯಂ ಅಥವಾ ಟೈಟಾನಿಯಂನೊಡನೆ ಪ್ರಾಯೋಗಿಕ ಉಪಯುಕ್ತತೆಯಲ್ಲಿ ಸ್ಪರ್ಧಿಸ ಲಾರದ್ದಾದರೂ ಸೀಸಿಯಂ ತನ್ನದೇ ಆದ, ಬೇರೆ ಲೋಹಗಳಿಗೆ ಸರಿಸಾಟಿಯಿಲ್ಲದ ಅಪೂರ್ವ ಗುಣ ಗಳನ್ನು ಹೊಂದಿದೆ. ಅದನ್ನು ವಿವರಿಸಲು ಕಳೆದ ಶತಮಾನದ ವೃತ್ತಾಂತವನ್ನು ನಿರೂಪಿಸಬೇಕಾಗು ತ್ತದೆ.

ಬೆಳಗಿನ ಕಿರಣಗಳು ಲೋಹಗಳ ಮೇಲ್ಮೈ ಮೇಲೆ ಬಿದ್ದಾಗ ಋಣವಿದ್ಯುತ್ಕಣಗಳು ಆವಿ ಯಾಗುವ "ಫೋಟೋ ಪರಿಣಾಮ"ವನ್ನು ೧೮೮೭ರಲ್ಲಿ ಜರ್ಮನ್ ಭೌತ ವಿಜ್ಞಾನಿ ಹೆನ್‌ರಿಕ್ ಹರ್ಜ್ ಕಂಡುಹಿಡಿದನೆ. ಇದರ ಆಧಾರದ ಮೇಲೆ ಮಾಸ್ಕೋ ವಿಶ್ವವಿದ್ಯಾಲಯದಲ್ಲಿ ಪ್ರೊಫೆ ಸರ್ ಆಗಿದ್ದ ಎ. ಜಿ. ಸ್ಟೊಲೆತೋವ್ ತಾತ್ವಿಕ ನಿಯಮಗಳನ್ನು ಮಂಡಿಸಿದ. ಫೋಟೋ ವಿದ್ಯುತ್ಕೋಶಗಳಲ್ಲಿ ಬೆಳಕನ್ನು ವಿದ್ಯುಚ್ಛಕ್ತಿಯಾಗಿ ಮಾರ್ಪಡಿಸುವಲ್ಲಿ ಸೀಸಿಯಂ ಅತ್ಯಂತ ಪ್ರಯೋ ಜನಕರವಾಗಿದೆ. ಸಿಸೀಯಂ ಆ್ಯಂಟಿಮನಿ ಮಿಶ್ರ ಲೋಹವನ್ನು ಅದರಲ್ಲಿ ಬಳಸಲಾಗುತ್ತದೆ. ಅದರ ಫೋಟೋ - ಸೂಕ್ಷ್ಮ ಪದರ ಅದೆಷ್ಟು ತೆಳು ವಾಗಿರುತ್ತದೆಯೆಂದರೆ ಒಂದು ಗ್ರಾಂ ಮಿಶ್ರ ಲೋಹದಿಂದ ೧೦ ಚದರ ಮೀಟರ್ ಮೇಲ್ಮೈ ಯನ್ನು ಆವರಿಸಲಾಗಿರುತ್ತದೆ.

ಭೂಗತ ರೈಲ್ವೆ ಸ್ಟೇಷನ್ನುಗಳಲ್ಲಿ ಒಬ್ಬೊಬ್ಬ ರಾಗಿ ಪ್ರವೇಶಿಸಲು ಅವಕಾಶ ಕೊಡುವ ನಾಲ್ಕು ತೋಳುಗಳುಳ್ಳ ತಿರಗುಗಂಬಗಳಲ್ಲಿ ಮೇಲಿನ ರೀತಿಯ "ಫೋಟೋ ಸೆಲ್"ಗಳನ್ನು ಅಳವಡಿಸಿರುತ್ತಾರೆ. ಅದು ತೀರ ಸರಳ ನಿಯಮಗಳ ಆಧಾರದ ಮೇಲೆ ಕೆಲಸ ಮಾಡು ತ್ತದೆ. ಒಂದು ಬದಿಯಲ್ಲಿ ಫೋಟೋ ಸೆಲ್, ಮತ್ತೊಂದು ಬದಿ ಮುಂದೆ ಹಾದು ಹೋಗು ವವರ ಮೇಲೆ ಎದುರು ದಿಕ್ಕಿನಿಂದ ಕಿರಣಗಳು ಹಾಯುವಂತೆ ಬೆಳಕಿನ ಮೂಲವನ್ನು ಅಳವಡಿಸ ಲಾಗುತ್ತದೆ. ನಿಗದಿಯಾದ ಹಣವನ್ನು ತಿರಗು ಗಂಬದ ಸೀಳುಗಂಡಿಯೊಳಗೆ ಹಾಕದೆ ಮುನ್ನಡೆ ದರೆ ಫೋಟೋ ಸೆಲ್‌ಗಳು ಸನ್ನೆಕೋಲು

ಗಳನ್ನು (Levers) ಕಾರ್ಯಕ್ಕೆ ಪ್ರೇರೇಪಿಸುವುದರಿಂದ ವ್ಯಕ್ತಿ ಮುಂದೆ ಹೋಗದಂತೆ ತಡೆಯುತ್ತದೆ.

ಫೋಟೋ ಸೆಲ್‌ಗಳ ರಚನೆ ಸರಳವಾಗಿದ್ದರೂ ಅದರಿಂದ ಅನೇಕ ಕೆಲಸಗಳನ್ನು ಮಾಡಿಸಬಹುದು: ಸಂಜೆ ಕತ್ತಲು ಆವರಿಸಿಕೊಳ್ಳುತ್ತಿದ್ದಂತೆ ಬೀದಿ ದೀಪಗಳು ಸ್ವಯಂಚಾಲಿತವಾಗಿ ಹತ್ತಿಕೊಳ್ಳುವಂತೆ ಮಾಡಲು, ಯಂತ್ರಗಳನ್ನು ನಡೆಸುವ ಆಪರೇಟರ್‌ಗಳ ಕೈಗಳು ಅಪಾಯಕರ ವಲಯವನ್ನು ತಲಪಿದಾಗ ಯಂತ್ರಗಳು ಕೆಲಸ ಮಾಡುವುದನ್ನು ನಿಲ್ಲಿಸಲು, ಸಿಗರೇಟ್‌ಗಳನ್ನು ಬೇರೆ ಬೇರೆ ಬಗೆಯಾಗಿ ವರ್ಗೀಕರಿಸಲು ಕನ್ವೇಯರ್ ಬೆಲ್ಟ್‌ನಿಂದ ವರ್ಗಾಯಿಸಲ್ಪಡುವ ಯಂತ್ರದ ಭಾಗಗಳನ್ನು ಎಣಿಸಲು, ಬೇರಿಂಗ್ ಗುಂಡುಗಳ ಹೊಳಪಿನ ಯೋಗ್ಯತೆಯನ್ನು ಪತ್ತೆಯಲ್ಲಿಡಲು ಮತ್ತು ಚಲನಚಿತ್ರಗಳ ಧ್ವನಿಮುದ್ರಣವನ್ನು ಓದುವುದರಲ್ಲಿ ಅವು ಬಳಕೆಯಲ್ಲಿವೆ. ಅಂಗಡಿ, ಬ್ಯಾಂಕ್ ಮತ್ತು ಮಳಿಗೆಗಳಲ್ಲಿ ನಂಬಲರ್ಹವಾದ ರೀತಿಯಲ್ಲಿ ರಾತ್ರಿ ಕಾವಲು ಇಡುವುದರಲ್ಲೂ ಅದು ಉಪಯುಕ್ತವಾಗಿದೆ.

ಚಂದ್ರನ ಹಿಂಭಾಗದ ಛಾಯಾಚಿತ್ರವನ್ನು ತೆಗೆಯುವಲ್ಲಿ ಫೋಟೋ ಸೆಲ್‌ಗಳು ಮುಖ್ಯ ಪಾತ್ರವನ್ನು ವಹಿಸಿದವು. ಆಶುವಾರ್ತಾ ಯಂತ್ರಗಳಿಂದ ನಕ್ಷೆಗಳು, ಛಾಯಾಚಿತ್ರಗಳು ಹಾಗೂ ಅಕ್ಷರಗಳು ಮೂಡಿ ಬರಬೇಕಾದರೆ ಇವು ಅತ್ಯವಶ್ಯ.

ಸೀಸಿಯಂನ ಫೋಟೋ ಎಲೆಕ್ಟ್ರಿಕ್ ಗುಣಗಳ ಆಧಾರದ ಮೇಲೆ ಮಾಡಲಾದ 'ಇನ್ಟ್ರೋಸ್ಕೋಪ್' ಉಪಕರಣದ ಅಪಾರದರ್ಶಕ ವಸ್ತುಗಳ ಒಳಗಿರಬಹುದಾದ ದೋಷಗಳು ಗೋಚರವಾಗುತ್ತವೆ. ದೂರದರ್ಶಕಗಳಲ್ಲಿ ಮತ್ತು ರಾತ್ರಿ ವೇಳೆಯಲ್ಲಿ ಡ್ರೈವರ್‌ಗಳಿಗೆ ನೋಡಲು ಸಹಾಯಕವಾಗುವ ದೃಷ್ಟಿಸಂಬಂಧ ಉಪಕರಣಗಳಲ್ಲಿ ಸಹ ಸೀಸಿಯಂ ಬಳಸುತ್ತಾರೆ.

ಸೀಸಿಯಂನ ಅಣುಗಳು ರಾಕೆಟ್‌ಗಳಿಗೆ ೪೪ ಕಿಲೋಮೀಟರ್ ಸೆಕೆಂಡ್‌ನಷ್ಟು ವೇಗದಿಂದ ಹಾರುವ ಪ್ರಬಲವಾದ ನೂಕು ಶಕ್ತಿಯನ್ನು ಕೊಡಬಲ್ಲವು. ಸೀಸಿಯಂ ಅನ್ನು ಇಂಧನವಾಗಿ ಉಪಯೋಗಿಸಿಕೊಂಡು, ರಾಕೆಟ್‌ಗಳು ಗಗನದ ಬಹು ದೂರದವರೆಗೂ ತಲಪುವಂತಾಗುವ ದಿನಕ್ಕೆ ಹೆಚ್ಚು ಕಾಯಬೇಕಿಲ್ಲವೆನ್ನಲಾಗುತ್ತಿದೆ.

ಉಷ್ಣ ವಿದ್ಯುತ್ಕಣಗಳ ಶಕ್ತಿಯನ್ನು ಮಾರ್ಪಡಿಸುವಲ್ಲಿ ಮತ್ತೂ ಅಣುಶಕ್ತಿ ಕೇಂದ್ರಗಳಲ್ಲಿ ಉಷ್ಣ ಶಕ್ತಿಯನ್ನು ವಿದ್ಯುಚ್ಛಕ್ತಿಯಾಗಿ ಮಾರ್ಪಡಿಸುವಲ್ಲಿ ಸೀಸಿಯಂ ಅತ್ಯವಶ್ಯಕವಾಗಿದೆ. ಇಂತಹ ಮೊದಲನೆ ಅಣುಶಕ್ತಿ ಕೇಂದ್ರ "ಟೊಪಾಜ್" ಅನ್ನು ರಶಿಯದಲ್ಲಿ ಸ್ಥಾಪಿಸಲಾಗಿದೆ.

ಸೀಸಿಯಂ ಅನ್ನು ಗಾಢವಾದ ವೈಜ್ಞಾನಿಕ ಸಂಶೋಧನೆಗಳಿಗೆ ಒಳಪಡಿಸಲಾಗಿದೆ. ಪಶ್ಚಿಮ ಜರ್ಮನಿಯ ಬೈಲೆಫೆಲ್ ವಿಶ್ವವಿದ್ಯಾಲಯದ ಭೌತಶಾಸ್ತ್ರಜ್ಞರು ಅನೇಕ ವರ್ಷಗಳ ಹಿಂದೆ ಕುತೂಹಲಕರವಾದ ಪ್ರಯೋಗಗಳನ್ನು ನಡೆಸಿದರು. ಎರಡು ವರ್ಷದ ಪೂರ್ವ ಸಿದ್ಧತೆಯಿಂದ ಮಾಡಲಾದ ಈ ಪ್ರಯೋಗಗಳಿಗೆ ಕೇವಲ ಸೆಕೆಂಡಿನ ಹತ್ತನೆಯ ಒಂದು ಭಾಗ ಮಾತ್ರ ಸಮಯ ಹಿಡಿಯಿತು. ಆ ಪ್ರಯೋಗವೇನಾಗಿತ್ತು? ಸೀಸಿಯಂನ್ನು ವಿಶಿಷ್ಟವಾದ ಸಾಧನವೊಂದರಲ್ಲಿಟ್ಟು ಪ್ರಬಲವಾದ ಲೇಸರ್ ಕಿರಣಗಳ ಒತ್ತಡಕ್ಕೆ ಒಳಪಡಿಸಲಾಯಿತು. ಇದರ ಪರಿಣಾಮವಾಗಿ ಋಣವಿದ್ಯುತ್ಕಣಗಳ ಕಕ್ಷೆ ವಿಸ್ತಾರವಾಗಿ ಅಣುಗಳು ಗಾತ್ರದಲ್ಲಿ ಸಾವಿರಾರು ಪಟ್ಟು ದೊಡ್ಡದಾಗಿ ಬೆಳೆಯಿತು.

ಅಮೇರಿಕದ ಅತ್ಯಂತ ದೊಡ್ಡ ಅಣುಶಕ್ತಿ ಪರಿಶೋಧನಾ ಕೇಂದ್ರಗಳಲ್ಲೊಂದಾದ ಓಕ್-ರಿಡ್ಜ್‌ನ ಭೌತಶಾಸ್ತ್ರಜ್ಞರ ತಂಡವೊಂದು ಕೆಲವು ಮೂಲ ವಸ್ತುಗಳ ಅಣುಗಳನ್ನು ಒಂದಾದ ಮೇಲೊಂದರಂತೆ ಎಣಿಸುವ ವಿಧಾನ ಕ್ರಮವೊಂದನ್ನು ಕಂಡುಹಿಡಿದಿದ್ದಾರೆ, ಅದೂ ಪ್ರಬಲವಾದ ಲೇಸರ್ ಕಿರಣಗಳ ಪ್ರಚೋದನೆ

[illegible] (ಅಣು) ಉತ್ತೇಜಿತವಾಗುವ ಗುಣವನ್ನು ಆಧರಿಸಿದೆ.

ಹಿಮಾಲಯದ ೬೦ ಬಿಸಿ ಊಟೆಗಳ ನೀರನ್ನು ಪರಿಶೀಲಿಸಿದ ಭಾರತೀಯ ಭೂಗರ್ಭ ಭೌತ-ಶಾಸ್ತ್ರದ ಸಂಶೋಧನಾ ಸಂಸ್ಥೆಯ (Indian Institute of Geophysical Research) ವಿಜ್ಞಾನಿಗಳು, ಅಗ್ನಿಪರ್ವತಗಳ ತೀವ್ರ ಚಟುವಟಿಕೆಗಳೇ ಅಲ್ಲಿಯ ನೀರಿನಲ್ಲಿ ಸೀಸಿಯಂನ ಪ್ರಮಾಣ ಹೆಚ್ಚಾಗಿರುವುದಕ್ಕೆ ಕಾರಣವಿರ-ಬಹುದೆಂದು ತೀರ್ಮಾನಿಸಿದ್ದಾರೆ. ಸೈಬೀರಿಯದ ಟುಂಗುಸ್ಕ ಪ್ರದೇಶದಲ್ಲಿ ಜರುಗಿದ ಜ್ವಾಲಾಮುಖಿಯ ಸ್ಫೋಟನೆಯಲ್ಲಿ ಉಳಿದುಕೊಂಡ ಮರಗಳಲ್ಲಿ ಸೀಸಿಯಂ-೧೩೭ ಸಕ್ಷೇತ್ರ (Isotope) ಹೆಚ್ಚಾದ ಪ್ರಮಾಣದಲ್ಲಿರುವುದು ಪತ್ತೆಯಾಗಿದೆ. ೧೯೦೮ ರಲ್ಲಿ ಜರುಗಿದ ಈ ಘಟನೆಯ ಸಮಯದಲ್ಲಿ ರೂಪುಗೊಂಡ ಮರಗಳ ಕಾಂಡದ ಪದರಗಳಲ್ಲಿಯೇ ಇಂಥ ರಸಾಯನಿಕ ಗುಣ ಕಂಡುಬಂದಿರುವುದು ಅತ್ಯಂತ ಸ್ವಾರಸ್ಯಕರ ಸಂಗತಿಯಾಗಿದೆ.

ಸೀಸಿಯಂಗೆ ಸಂಬಂಧಿಸಿದ ಮತ್ತೊಂದು ಕುತೂಹಲಕರ ವಿಷಯವೆಂದರೆ ೧೯೬೭ ರಲ್ಲಿ "ತೂಕಗಳು ಮತ್ತು ಅಳತೆ"ಗಳನ್ನು ಕುರಿತು ನಡೆದ ಅಂತಾರಾಷ್ಟ್ರೀಯ ಸಮ್ಮೇಳನ. ಸಮಯದ ಮೂಲಮಾನವಾದ ಸೆಕೆಂಡ್‌ನ್ನು CS-೧೩೩ರ ಅಣುರಚನೆಯ ಆಧಾರದ ಮೇಲೆ ಅತ್ಯಂತ ನಿಕೃಷ್ಟವಾಗಿ ನಿರೂಪಿಸಿತು. ಅದರಂತೆ ಒಂದು ಸೆಕೆಂಡನ್ನು ಅಳೆಯಲು ಸೀಸಿಯಂನಲ್ಲಿನ ಋಣ ವಿದ್ಯುತ್ಕಣಗಳು ಒಂದು ಕಕ್ಷೆಯಿಂದ ಮತ್ತೊಂದು ಕಕ್ಷೆಗೆ ನೆಗೆಯುವಷ್ಟು ಸಲ ಜಿಗಿಯುವುದನ್ನು ಗಮನಿಸಬೇಕಾಗುತ್ತದೆ. ಈ ಕೆಲಸವನ್ನು ಮಾನವ ಮಾಡಲು ಸಾಧ್ಯವಾಗದಿದ್ದರೂ, ನಿಖರವಾಗಿ ನಡೆಯುವ, ಅಣುಶಕ್ತಿಯಿಂದ ಉತ್ತೇಜಿತವಾದ ಸಮರ್ಪಕ ಗಡಿಯಾರಗಳು ಮೇಲಿನ ಕಾಲಮಾನದ ಆಧಾರದ ಮೇಲೆ ನಡೆಯುತ್ತವೆ. ಮೂರು ಸಾವಿರ ವರ್ಷಗಳಲ್ಲಿ ಒಂದು ಸೆಕೆಂಡ್‌ನಷ್ಟು ಹಿಂದೆ ಬೀಳುವ ಅಥವಾ ಮುಂದೆ ಓಡುವ ಇಂತಹ ಗಡಿಯಾರಗಳ ನಿಷ್ಕೃಷ್ಟತೆಯನ್ನು ಊಹಿಸಿಕೊಳ್ಳಿ! ಸೀಸಿಯಂ ಅಣುಗಳ ಮುಖ್ಯ ಗುಣಗಳ ದೃಢತೆಯೇ ಇದಕ್ಕೆ ಕಾರಣವೆಂದು ವಿವರಿಸ-ಬಹುದು.

ಸೀಸಿಯಂ ಬಗ್ಗೆ ಹೀಗೇ ಹೇಳುತ್ತಾ ಹೋಗಬಹುದು. ಅದರ ಯೋಗವಾಹಕ ಗುಣಗಳು, ಋಣವಿದ್ಯುತ್ಕಣಗಳ ನಳಿಕೆಗಳಲ್ಲಿ ನಿರ್ವಾತವನ್ನು ರೂಪಿಸುವ ಸಾಮರ್ಥ್ಯ, ಔಷಧಗಳ ತಯಾರಿಕೆ-ಯಲ್ಲಿ ಅದರ ಸಕ್ಷೇತ್ರಗಳ ಬಳಕೆಯ ಬಗ್ಗೆ ತಿಳಿದೇ ಇದೆ. ಕೆಲವೊಂದು ದೋಷಗಳನ್ನು ಪತ್ತೆಮಾಡುವಲ್ಲಿ ಮತ್ತು ಮಾಪಕ ಸಲಕರಣೆಗಳಲ್ಲಿ, ಯಾವುದೇ ಕಿರಣಗಳ ಕ್ರಿಯೆಗೆ ಒಳಪಟ್ಟಾಗ ತಿಳಿ ನೀಲಿ ಅಥವಾ ಹಸಿರು ಪ್ರಕಾಶವನ್ನು ಕೊಡುವ ಪರಳುಗಳ ತಯಾರಿಕೆಯಲ್ಲಿ ಸೀಸಿಯಂನ ಉಪಯೋಗವಿದೆ. ಸೀಸಿಯಂನ ಪ್ರಾಯೋಗಿಕ ಉಪಯುಕ್ತತೆ ವಿಪುಲವಾಗಿದ್ದು, ಅದರ "ಭವಿಷ್ಯ" ಚೆನ್ನಾಗಿದೆಯೆನ್ನಬಹುದು. ✿



**ಎಳ್ಳು ಇಲ್ಲದ ಗಾಣದಲ್ಲಿ ಎಣ್ಣೆಯುಂಟೇ? ಜೊಳ್ಳು ತೂರಿದಲ್ಲಿ ಬತ್ತ ಉಂಟೇ?**
**–ದೇವರ ದಾಸಿಮಯ್ಯ**

**ಅಂಗಾರಕ ವಾರದ ಪೆಸರ್ ಮಂಗಳವಾರಂ** **–ನಯಸೇನ**

**ಕಡೆದೊಡೆ ಪಾಲ್ಗಡಲ್ ವಿವಿಧ ವಸ್ತುವನೀಯದೆ?** **–ನಾಗಚಂದ್ರ**

# ತಾರಕವೂ ಹೌದು ಮಾರಕವೂ ಹೌದು ಅಫೀಮು

ಮೋಹನ ಗ. ಹೆಗಡೆ

ಅಫೀಮು ಅನಾದಿ ಕಾಲದಿಂದಲೂ ಮಾನವನಿಗೆ ಚಿರಪರಿಚಿತ ವಸ್ತು. ಐತಿಹಾಸಿಕ ಕಾಲದಲ್ಲೂ ಅದನ್ನು ಸಾಕಷ್ಟು ಬಳಸಲಾಗಿದೆ. ಅಸಹನೀಯ ನೋವಿನಿಂದ ಬಳಲುವವರಿಗೆ ಅದ್ಭುತ ನೋವು ನಿವಾರಕವಾಗಿ ಅದನ್ನು ಉಪಯೋಗಿಸಲಾಗುತ್ತಿದೆ. ತನ್ನ ಸಮೀಪ ಬಂದವನನ್ನು ಅಲ್ಪಾವಧಿಯಲ್ಲೇ ಚಟದವನನ್ನಾಗಿಸಿ ತನ್ನ ಗುಲಾಮನನ್ನಾಗಿಸಿಕೊಳ್ಳುವ ಗುಣ ಅಫೀಮಿನದು. ಹೀಗಾಗಿ ಈ ಪ್ರಾಣಾಂತಿಕ ಚಟದಿಂದ ಅನೇಕರು ಸತ್ತಿದ್ದಾರೆ.

೧೯ನೇ ಶತಮಾನದ ವಿಜ್ಞಾನಿಗಳು ಇದರ ಶಕ್ತಿಯನ್ನು ಚೆನ್ನಾಗಿ ಅರಿತಿದ್ದರು.

ಪ್ರಪಂಚದ ೪೦೦,೦೦೦ ಸಸ್ಯ ಪ್ರಕಾರಗಳಲ್ಲಿ "ಗಸಗಸೆ" ಭಾರತಕ್ಕೆ ಅತಿ ಪರಿಚಿತವೆ. ಸಸ್ಯಶಾಸ್ತ್ರದಲ್ಲಿ ಇದು Papaver Somniferum ಎಂದು ಕರೆಯಲ್ಪಟ್ಟಿದೆ. ಮೂಲತಃ ಪೂರ್ವ ಭೂಮಧ್ಯ ಸಮುದ್ರ ಪ್ರದೇಶದ್ದಾಗಿದ್ದು ಅರಬ್ ವ್ಯಾಪಾರಿಗಳ ಮೂಲಕ ಬಹುಶಃ ಏಳನೇ ಶತಮಾನದಲ್ಲಿ ಭಾರತದಲ್ಲಿದು ಕಾಲಿರಿಸಿತು. ೧೭ನೇ ಶತಮಾನದಲ್ಲಿ ಚೀನದಲ್ಲಿ ಅಫೀಮು ಸೇವನೆ ಶುರುವಾಯಿತು. ೧೮೪೦–೪೨ರ ವೇಳೆಗೆ ಚೀನೀಯರು ಬೆಳ್ಳಿ ಕೊಟ್ಟು ಅಫೀಮನ್ನು ಪಡೆಯತೊಡಗಿದರು. ಕ್ರಿಸ್ತಪೂರ್ವ ೧೩೦೦ರಷ್ಟು ಹಿಂದೆ ಸೈಪ್ರಸ್ ವ್ಯಾಪಾರಿಗಳು ಇಜಿಪ್ತಿಗೆ ಜೇಡಿ ಮಣ್ಣಿನ ಹೂಜಿಯಲ್ಲಿ ಅಫೀಮು ಮಿಶ್ರಿತ ಮದ್ಯ ಅಥವಾ ನೀರನ್ನು ತಂದ ದಾಖಲೆ ಸಿಗುತ್ತದೆ. ಕ್ರಿಸ್ತಪೂರ್ವ ೧೨ ನೇ ಶತಮಾನದ ಅಫೀಮು ಹೊಗೆ ಸೇವಿಸುವ ಕೊಳವೆ ಸೈಪ್ರಸ್‌ನ ಒಂದು ದೇವಾಲಯದಲ್ಲಿ ಸಿಕ್ಕಿದೆ. ಅಲ್ಲಿ ವಾಸಿಸುತ್ತಿದ್ದ ಸನ್ಯಾಸಿಗಳು ಅದನ್ನು ಸೇವಿಸುತ್ತಿರಲೂ ಸಾಕು. ಕ್ರಿಸ್ತಶಕ ಮೂರನೇ ಶತಮಾನದ ಅಮೃತಶಿಲೆಯ ಮಲಗಿದ ಭಂಗಿಯಲ್ಲಿರುವ ಮೂರ್ತಿಯೊಂದರ ಕೈಯಲ್ಲಿ ಗಸಗಸೆ ಕಾಯಿಯನ್ನು ಹಿಡಿದುಕೊಂಡಿದ್ದು ಕಂಚಿನ ಯುಗದಲ್ಲೂ ಅಫೀಮಿನ ಅಸ್ತಿತ್ವ ತೋರಿಸುವ ಸಾಕ್ಷ್ಯ ವಸ್ತು ಇಂದಿಗೂ ಲಂಡನ್ ವಸ್ತುಸಂಗ್ರಹಾಲಯದಲ್ಲಿದೆ. ೫'-೬'' ಎತ್ತರದ ಅಫೀಮು ಕಾಯಿಯಾಕಾರದ ವಸ್ತು ಸಿಕ್ಕಿದೆ. ಕ್ರಿಸ್ತಪೂರ್ವ ೧೫೦೦ರ ಸುಮಾರಿನ ಸೈಪ್ರಸ್‌ನ ಹೂಜಿಯೊಂದರಲ್ಲಿ ಅಫೀಮು ಮಿಶ್ರಿತ ಮದ್ಯ ಅಥವಾ ನೀರನ್ನು ನೋಡಬಹುದು. ಮೊದಲು ಇಜಿಪ್ತ್ ಅಫೀಮನ್ನು ತರಿಸಿಕೊಳ್ಳುತ್ತಿತ್ತು. ಕ್ರಮೇಣ ತನ್ನ ದೇಶದಲ್ಲೇ ಅದನ್ನು ಬೆಳೆಯತೊಡಗಿತು.

ಹೋಮರ್‌ನ ಮಹಾಕಾವ್ಯ 'ಒಡಿಸ್ಸಿ'ಯಲ್ಲಿ ಹೆಲೆನ್‌ಳ ಉದ್ಗಾರ ಹೀಗಿದೆ: "to quiet all pain and strife, and being forgetfulness of every ill."

ಬೈಬಲ್‌ನಲ್ಲಿ "Vinegar mingled with 'gall' cross" ಮೇಲಿನ ಯೇಸುವಿಗೆ ಕುಡಿಸಲಾಗಿದೆ ಎಂದಿದೆ. ಪ್ರಾಚೀನ ಹಿಬ್ರೂ ಭಾಷೆಯಲ್ಲಿ 'gall' ಎಂದರೆ 'ಅಫೀಮು' ಎಂದರ್ಥ.

ತಾಜಮಹಲಿನಲ್ಲಿ ಮಮತಾಜಳ ಗೋರಿಯ ಅಲಂಕಾರದಲ್ಲಿ ಗಸಗಸೆ ಗಿಡ, ಕಾಯಿ ಕಂಡು ಬರುತ್ತದೆ. ಶಹಾಜಹಾನನಿಗೆ ಅಫೀಮು ಸೇವನೆ, ಅಫೀಮು ಮಿಶ್ರಿತ ಮದ್ಯ, ಪ್ರಿಯವಾಗಿದ್ದವು.

ಮೊಗಲರ ಕಾಲದಲ್ಲಿ ಯುದ್ಧದ ವೇಳೆಗೆ ಆನೆಗಳಿಗೆ ಅಫೀಮು ತಿನ್ನಿಸಲಾಗುತ್ತಿತ್ತು. ಬ್ರಿಟಿಶರ ಕಾಲದಲ್ಲಿ ಸೈನಿಕರಿಗೆ ಆವೇಶ ಬರುವಂತೆ ಮಾಡಲು, ಗಾಯ ಒಡೆದಾಗ ನೋವಿನ ಅರಿವಾಗದಂತೆ ಮಾಡಲು ಅಫೀಮು ತಿನ್ನಿಸಲಾಗುತ್ತಿತ್ತು. ಪುರಾತನ ಕಾಲದಲ್ಲಿ ಇದನ್ನು ಧಾರ್ಮಿಕ ಕಾರ್ಯಗಳಲ್ಲೂ ಔಷಧಿಯಾಗಿಯೂ ಉಪಯೋಗಿಸಲಾಗಿದೆ.

ಭಾರತದಲ್ಲಿ ೨'.೬"-೩'.೬" ಎತ್ತರದ ಈ ಗಸಗಸೆ ಗಿಡವನ್ನು ೩೨,೦೦೦ ಹೆಕ್ಟೇರುಗಳಲ್ಲಿ ಬೆಳೆಯಲು ಸರಕಾರ ಅನುಮತಿ ನೀಡಿದೆ. ಬ್ರಹ್ಮದೇಶ ಪ್ರಪಂಚದಲ್ಲೇ ಅತಿ ಹೆಚ್ಚು ಜಾಗೆ ಎಂದರೆ ೬೦,೦೦೦ ಹೆಕ್ಟೇರುಗಳಲ್ಲಿ ಗಸಗಸೆಯನ್ನು ಬೆಳೆಯುತ್ತದೆ. ಇರಾಣ್ ೩೦,೦೦೦, ಟರ್ಕಿ ೨೨,೯೫೦ ಹಾಗೂ ಅಫಘಾನಿಸ್ತಾನ ೨೦,೦೦೦ ಹೆಕ್ಟೇರು-ಗಳಲ್ಲಿ ಅಫೀಮು ಬೆಳೆಯುತ್ತದೆ. ಆದರೆ ೧೯೮೩ರ ವರದಿಯಂತೆ ಭಾರತವು ಅತಿ ಹೆಚ್ಚು ಎಂದರೆ ೯೯೭ ಮೆಟ್ರಿಕ್ ಟನ್ ಹಾಗೂ ಬ್ರಹ್ಮದೇಶ ೬೦೦ ಮೆಟ್ರಿಕ್ ಟನ್ ಅಫೀಮನ್ನು ಉತ್ಪಾದಿಸಿದೆ.

## ಅಫೀಮು ಎಂದರೆ ಯಾವುದು?

ಗಸಗಸೆಯ ಗಿಡದಲ್ಲಿ ಬಿಳಿ, ಕೆಂಪು, ಧೂಮ, ಜಾಂಬಳಿ ಇತ್ಯಾದಿ ವಿವಿಧ ವರ್ಣದ ಹೂ ಬಿಡುವ ಜಾತಿ ಇವೆ. ಮಾರ್ಚ್ ಎಪ್ರಿಲ್ ಇದರ ಸುಗ್ಗಿ. ಗಸಗಸೆಯ ಹೂವಿನ ಎಸಳು ಒಣಗುತ್ತಿದ್ದಂತೆ ಆದರೊಳಗಿನ ಕಾಯಿ ದೊಡ್ಡದಾಗುತ್ತದೆ. ಇಂಥ ಕಾಯಿಗಳ ಸುತ್ತಲೂ ಉದ್ದವಾಗಿ, ಚೂಪಾದ ಆಯುಧದಿಂದ ಗೀರುತ್ತಾರೆ. ಅಲ್ಲಿಂದ ಬಿಳಿ ಹಾಲಿನಂಥ ದಪ್ಪ ರಸ ಜಿನುಗುತ್ತದೆ. ೨೪ ಗಂಟೆಗಳಲ್ಲಿ ಈ ರಸ ಒಣಗಿ ಕಂದು-ಕಪ್ಪು ಬಣ್ಣಕ್ಕೆ ತಿರುಗುತ್ತದೆ. ಇದನ್ನು ಬೇರೊಂದು ಸಾಧನದಿಂದ ಕೆರೆದು ಸಂಗ್ರಹಿಸುತ್ತಾರೆ. ಇದೇ ಅಫೀಮಿನ ಅಂಟು. ಸುಮಾರು ೩೦೦೦ ಕಾಯಿಗಳಿಂದ ೧.೬ ಕೆಜಿ ಅಫೀಮು ಸಿಗುತ್ತದೆ. ಇದರ ಬೆಲೆ [illegible]೪೦ ರೂಪಾಯಿಗಳು. (ದರ ವ್ಯತ್ಯಾಸವಾಗುತ್ತಿರಬಹುದು) ೧೮೨೦ರಲ್ಲಿ ಮಧ್ಯಪ್ರದೇಶದ ಗಾಝೀಪುರದಲ್ಲಿ ಅಫೀಮು ಸಂಸ್ಕರಣಾ ಕೇಂದ್ರವನ್ನು ಸ್ಥಾಪಿಸಲಾಯಿತು. ಇಲ್ಲಿ ಅಫೀಮನ್ನು ಐದು ಕೆಜಿಯ ಮುದ್ದೆಯನ್ನಾಗಿ ಮಾಡುತ್ತಾರೆ. ಈ ಕೇಂದ್ರಕ್ಕೆ "Old Red brick factory" ಎಂದು ಹೆಸರು.

## ವಿವಿಧ ಉಪಯೋಗಗಳು

ಒಣ ಗಸಗಸೆಕಾಯಿಯ ಒಳಗೆ ನೀಲಿ, ಬಿಳಿ ಚಿಕ್ಕ ಬೀಜಗಳಿರುತ್ತವೆ. ರಸ (ಅಫೀಮು) ತೆಗೆದ ಮೇಲೆ ಕಾಯಿ ಒಣಗಿದ ನಂತರ ಅದನ್ನು ತಂದು ಒಡೆದು ಬೀಜ ಸಂಗ್ರಹಿಸುತ್ತಾರೆ. ಈ ಬೀಜ ಅಂತಾರಾಷ್ಟ್ರೀಯ ಮಸಾಲೆಯ ಮಾರುಕಟ್ಟೆಯಲ್ಲಿ ಹೆಚ್ಚಿನ ಸ್ಥಾನ ಗಳಿಸಿದೆ. ೧ ಕಾಯಿಯಲ್ಲಿ ೮೦೦-೨೦೦೦ ಚಿಕ್ಕ ಬೀಜಗಳು ಇರುತ್ತವೆ. ಕೆಲವೊಮ್ಮೆ ೩೨೦೦೦ ಬೀಜಗಳೂ ಇದ್ದು-ದುಂಟು. ಇದೇ ಗಸಗಸೆ. ಭಾರತೀಯರಿಗೆ ಪ್ರಿಯವಾದ "ಗಸಗಸೆ ಪಾಯಸ" ಮಾಡುವುದು ಇದರಿಂದಲೇ.

ಈ ಬೀಜದ ಎಣ್ಣೆಯನ್ನು ತೈಲಚಿತ್ರದ ಬಣ್ಣಗಳಿಗೆ ಬಳಸಲಾಗುತ್ತಿದೆ. ಎಣ್ಣೆ ಫ್ಯಾಕ್ಟರಿಯಲ್ಲಿ ಇದರಿಂದ "Morphine" ತೆಗೆಯುತ್ತಾರೆ. ಉಳಿದುದರಿಂದ "Codeine" ತೆಗೆಯುತ್ತಾರೆ. ಕಂದು ಗಸಗಸೆಯ ಕಾಯಿ ಎಣ್ಣೆಗಾಗಿ ಒಳ್ಳೆಯದು. ನೀಲಿಯದು ಅದಕ್ಕಿಂತ ಉತ್ತಮ. ಟರ್ಕಿ, ನೆದರಲ್ಯಾಂಡ್, ಆಸ್ಟ್ರೇಲಿಯ, ತಾಸ್ಮಾನಿಯಗಳು ಈ ಬೀಜಗಳನ್ನು ಅಮೇರಿಕ ಹಾಗೂ ಜರ್ಮನಿಗಳಿಗೆ ಅತಿ ಹೆಚ್ಚಿನ ಪ್ರಮಾಣದಲ್ಲಿ ಕಳಿಸುತ್ತವೆ.

ಗಸಗಸೆ ಬೀಜದ ೩೦% ಪ್ರೋಟೀನ್ ಇರುವ ಹಿಂಡಿ ದನಗಳಿಗೆ ಪುಷ್ಟಿಕರ.

ಪೋಲಂಡಿನವರು ಕ್ರಿಸ್‌ಮಸ್‌ದಲ್ಲಿ ಗಸಗಸೆ ಬೀಜವನ್ನು ಹಾಲಿನಲ್ಲಿ ಬೇಸಿ ಜೇನುತುಪ್ಪ, ಗೇರು ಬೀಜ, ಉತ್ತತ್ತಿ, ಬೆರೆಸಿ ಕುಡಿಯುತ್ತಾರೆ. ಇದು ಅವರ ವಿಶೇಷ ಪ್ರಿಯ ಪೇಯ. ಇದಕ್ಕಾಗಿಯೇ ಅವರು ೧೫,೦೦೦ ಹೆಕ್ಟೇರುಗಳಲ್ಲಿ ಗಸಗಸೆ ಬೆಳೆಯುತ್ತಾರೆ.

ಭಾರತದಲ್ಲಿ ಸುಮಾರು ೧೦ ಪ್ರಕಾರದ ಅಫೀಮು ಬೆಳೆಯಲಾಗುತ್ತದೆ. ಬಿಳಿ ಗುಲಾಬಿ ಬೀಜಕೋಶಗಳೇ ಹೆಚ್ಚು. ಬೆಳೆಯನ್ನೆಲ್ಲಾ ಜನರು ಸರಕಾರಕ್ಕೆ ಕೊಡಬೇಕು. ಇಲ್ಲವಾದರೆ ಅವರಿಗೆ ನೀಡಿದ ಲೈಸೆನ್ಸನ್ನು ಸರಕಾರ ರದ್ದು ಮಾಡಬಹುದು. ಸುಮಾರು ೬೯೦೦ ಹಳ್ಳಿಗಳ ೧೭೭,೦೦೦ ಕುಟುಂಬಗಳಿಗೆ ಅಫೀಮು ಬೆಳೆಸಲು ಅನುಮತಿಯನ್ನು ಸರಕಾರ ಕೊಟ್ಟಿದೆ. ಕಚ್ಚಾ ಅಫೀಮಿನಲ್ಲಿ ೩೦% ನೀರು ಇರುತ್ತದೆ. ೮–೨೦ ದಿನ ಬಿಸಿಲಿನಲ್ಲಿ ಪೂರ್ತಿ ಒಣಗಿದರೆ ಅದು ೧೦%ಗೆ ಇಳಿಯುತ್ತಿದೆ.

ಅಫೀಮು ಸಂಸ್ಕರಣಾ ಕೇಂದ್ರದಲ್ಲಿ ಸುತ್ತಲೂ ಕಟ್ಟಡಗಳು ಗೋಡೆಯಂತಿವೆ. ಮೂರು ಅಡಿ ಎತ್ತರದ ಸಾಲಾದ ಅಡ್ಡ ಕಟ್ಟೆಗಳಿರುತ್ತವೆ. ಇವುಗಳ ಮೇಲೆ ಕಟ್ಟಿಗೆಯ ಚೌಕ ಟ್ರೇಗಳನ್ನು ಇಡಲಾಗುತ್ತದೆ. ಅಫೀಮಿನ ರಸ ಇವುಗಳಲ್ಲಿ ಒಣಗುತ್ತದೆ. ಇಂದು ೧೦' ಆಳದ ದೊಡ್ಡ ಹೊಂಡವಾಗಿದ್ದು ಇದರಲ್ಲಿ ಸುಮಾರು ೪೫೦ ಟನ್ ಅಫೀಮು ಹಿಡಿಯುತ್ತದೆ. ಪ್ರಪಂಚದಲ್ಲೇ ಅಫೀಮು ಒಣಗಿಸುವ ಅತಿ ದೊಡ್ಡ ಹೊಂಡವಿದು. ಈ ಎಲ್ಲ ಟ್ರೇಗಳನ್ನು ಒಮ್ಮೆ ತುಂಬಿಟ್ಟರೆ ೧೫೦೦ ಟನ್ ಆಗುತ್ತದೆ. ಕೇಂದ್ರ ಔದ್ಯೋಗಿಕ ರಕ್ಷಣಾ ಪಡೆ ಈ ಕೇಂದ್ರವನ್ನು ಕಾಯುತ್ತಿರುತ್ತದೆ.

ಸಾರಜನಕಯುಕ್ತ ವಸ್ತು ಅಥವಾ ಅಲ್ಕಲೈಡ್ ಬೀಜಕೋಶದಲ್ಲಿ ಸಂಗ್ರಹವಾಗುತ್ತದೆ. ಹೂದಳಗಳು ಉದುರಿದ ನಂತರ ಬೀಜ ಕೋಶ ಸಂಕುಚಿತವಾಗುತ್ತದೆ. ಆದರಲ್ಲಿಯ ಹಾಲಿನಂತಹ ರಸ ಒಣಗಿ ಅಫೀಮಿನ ಅಂಟು ತಯಾರಾಗುತ್ತದೆ. ಅಮಲು ತರಿಸಬಲ್ಲ ಅಂಶಗಳನ್ನು ಇದು ಹೊಂದಿದ್ದರೂ ಹಿಂದೆ ಕೆಲ ಧಾರ್ಮಿಕ ಕಾರ್ಯಗಳಲ್ಲಿ ಇದನ್ನು ಬಳಸಲಾಗುತ್ತಿತ್ತು.

ಕ್ರಿಸ್ತಪೂರ್ವ ನಾಲ್ಕನೇ ಶತಮಾನದ ನಂತರ ಪಾಶ್ಚಾತ್ಯ ವೈದ್ಯಪಿತರಾದ ಹಿಪ್ಪೋಕ್ರೆಟಸ್, ಡಯೋಸ್ಕೋರಿಡಸ್, ಗಾಲನ್ ಮುಂತಾದವರು ಇದು ಶ್ರೇಷ್ಠ ನೋವು ನಿವಾರಕವೆಂಬುದನ್ನು ಕಂಡರು. ೧೫೩೦ರ ವೇಳೆಗೆ ಪಾರಾಸೆಲ್ಸಸ್‌ನು ಅಲ್ಕೊಹಾಲಿನಲ್ಲಿ ಇದನ್ನು ಬೆರಸಿದ ಪೇಯ 'ಲಾಡಾನಮ್' ಆರೋಗ್ಯಕ್ಕೆ ಒಳ್ಳೆಯದೆಂದು ಹೇಳಿದನು. ಹೆಚ್ಚಿನ ಜನರೂ ಕುಡಿಯಲು ಬಳಸುತ್ತಿದ್ದರು.

ಗಸಗಸೆಯ ಕಾಯಿ ನೈಸರ್ಗಿಕವಾಗಿಯೇ ಅಲ್ಕಲೈಡ್ ಹಾಗೂ ಮಾರ್ಫಿನ್ ಕೋಡೀನ್ ಅಂಶಗಳನ್ನು ಹೊಂದಿದೆ. ಮಾರ್ಫಿನ್ ನೋವನ್ನು ಮರೆಸುವದರಲ್ಲಿ ಅತ್ಯಂತ ತೀಕ್ಷ್ಣ ಔಷಧಿಯಾಗಿದೆ. ಕೋಡೀನ್ ತುಸು ಕಡಿಮೆ ಮತ್ತು ಬರಿಸುವ ಗುಣ ಹೊಂದಿದ್ದು ಹಳೆಯ ನೋವನ್ನೂ ಕೆಮ್ಮನ್ನೂ ದೂರಪಡಿಸುತ್ತದೆ. ಅಫೀಮಿನಿಂದಲೇ ಉತ್ಪನ್ನವಾಗುವ ಹೆರಾಯಿನ್ ರಾಸಾಯನಿಕವಾಗಿ ಮಾರ್ಫಿನ್ ಪ್ರಪಂಚಾದ್ಯಂತವೂ ಸುಲಭವಾಗಿ ಈಗ ಸಿಗುವಂತಿದ್ದು ಬಹುಮಂದಿ ಇದರ ಭಕ್ತರಾಗಿದ್ದಾರೆ.

ಅಲ್ಕಲೈಡಿನಲ್ಲಿ $C_{೧೭} H_{೧೯} NO_{೩}$ ಇದ್ದು, ಇದನ್ನು "ಮಾರ್ಫಿಸ್" ಎಂದು ಕರೆದರು. "ಮಾರ್ಫಿಸ್" ಗ್ರೀಕ್ ದೇವತೆಯ ಹೆಸರು. ಮಾರ್ಫಿನ್ನನ್ನು ಹೆಚ್ಚಿನ ಆಸ್ಪತ್ರೆಗಳಲ್ಲಿ ಬಳಸುತ್ತಾರೆ. ಸಹಿಸಲಾರದ ನೋವು, ಮೂತ್ರ ಕೋಶದಲ್ಲಿ ಕಲ್ಲು ಬೆಳೆಯುವುದು, ಪ್ಯಾಂಕ್ರಿಯಾಟೈಟಿಸ್‌ಗಳ ನೋವು ಕಡಿಮೆ ಮಾಡುವುದರಲ್ಲಿ ಇದರ ಸಮಾನ ಯಾವುದೂ ಇಲ್ಲ. ಮರಣಾಂತಿಕ ಹೃದಯಾಘಾತ, ಸುಟ್ಟ ಗಾಯಗಳ ಸಂದರ್ಭಗಳಲ್ಲಿ ಇದನ್ನು ಬಳಸುವುದರಿಂದ ಇದು ರಕ್ತವಾಹಿನಿಗಳನ್ನು ಸರಳಗೊಳಿಸುತ್ತದಲ್ಲದೆ.

ಘುಪ್ಪುಸ ದ್ರಾವಕ ಹಿಂದೆ ಬರದಂತೆಯೂ ತಡೆಯುತ್ತದೆ. ಅತ್ಯಾಧುನಿಕ ಆಸ್ಪತ್ರೆಗಳಲ್ಲಿ ಔಷಧಿ ಪೆಟ್ಟಿಗೆಗಳಲ್ಲಿ "ಮಾರ್ಫಿನ್" ಇದ್ದೇ ಇರುತ್ತದೆ.

ಅಫೀಮಿನಿಂದ ತಯಾರಾಗುವ ಕೋಡೀನ್ ಮಾತ್ರೆಗಳ ರೂಪದಲ್ಲಿ ಬರುತ್ತದೆ. ಶಸ್ತ್ರಕ್ರಿಯೆ ಅಥವಾ ಹಲ್ಲು ಕಿತ್ತ ನಂತರದ ನೋವಿನ ಶಮನಕ್ಕಾಗಿ ಇದನ್ನು ಬಳಸುತ್ತಾರೆ. ಕೆಮ್ಮಿನ ನಿವಾರಣೆಗೆ ಸಿರಿಪ್ ರೀತಿಯಲ್ಲೂ ಇದನ್ನು ಬಳಸುತ್ತಾರೆ. ೧೯೮೩ರ ವರದಿಯಂತೆ ೭೫ ಲಕ್ಷ ಪ್ರಕಾರದ ಔಷಧಿಗಳಲ್ಲಿ ಕೋಡೀನನ್ನು ಸೇರಿಸಲಾಗುತ್ತದೆ.

ಮಿತಿಮೀರಿದ ಅಫೀಮು ಸೇವನೆ, ಅಫೀಮು ಮಿಶ್ರಿತ ಮದ್ಯ ಅಥವಾ ನೀರನ್ನು ಕುಡಿಯುವುದು ದುರ್ಮರಣ ತರುವುದೆಂದೂ, ಲಾಡಾನಮ್ ಕೂಡ ಸಂಕಟ ತರುವದೆಂದೂ ಬಲು ಹಿಂದೆಯೆ ತಿಳಿದುಬಂದಿದೆ. ೧೮೫೩ರಲ್ಲಿ ಕಂಡುಹಿಡಿದಂತೆ ಚರ್ಮಾವರಣದ ಕೆಳಗೆ (Hypodermic Injection) ಚುಚ್ಚಿದಾಗ ಮಾರ್ಫಿನ್ ಒಂದು ಸಮಸ್ಯೆಯಾಗಬಹುದೆಂದೆನಿಸಿತು. ೧೮೯೮ರಲ್ಲಿ ಹೆರಾಯಿನ್ ಮಾರುಕಟ್ಟೆಗೆ ಬಂತು. actic acid ಸಂಬಂಧೀ ರಸಾಯನಕ್ಕೆ ಇದನ್ನು ಸೇರಿಸಲಾಗುತ್ತದೆ. ನೋವು ನಿವಾರಕದಲ್ಲಿ ಇದರ ಸ್ಥಾನ ಹಿರಿದು. ಪ್ರಪ್ರಥಮವಾಗಿ ಜರ್ಮನಿಯಲ್ಲಿ ನೋವು ನಿವಾರಕವಾಗಿ (Analgesic) ಭೇದಿ ಹಾಗೂ ಕೆಮ್ಮು ಪ್ರತಿಬಂಧಕವಾಗಿ ಇವನ್ನು ಬಳಸಲಾಯಿತು. ನಂತರ ಹೆರಾಯಿನನ್ನು ಬಳಕೆಗೆ ತಂದರು.

"ಪಾಪಾವರ್ ಸೋಮ್ನಿಫರಮ್" ಅಫೀಮಿನಿಂದ ಬರುವ ಔಷಧ. ಹೆರಾಯಿನ್ ಸಾಮಾನ್ಯವಾಗಿ ಬಿಳಿ ಅಥವಾ ಚಾಕಲೇಟ್ ಕಂದು ಬಣ್ಣದ್ದು.

ಅಫೀಮು, ಅಥವಾ ಹೆರಾಯಿನ್ ಚಟ ಇತ್ತೀಚೆ ಒಂದು ಅಂತಾರಾಷ್ಟ್ರೀಯ ಪಿಡುಗಾಗಿ ಬೆಳೆಯುತ್ತಿದೆ. 'ಹೆರಾಯಿನ್' ಶರೀರದಲ್ಲಿ ಮಾರ್ಫಿನ್ ಆಗಿ ಪರಿವರ್ತಿತವಾಗುತ್ತದೆ. ಆದರೆ ರಕ್ತನಾಳದಲ್ಲಿ ಚುಚ್ಚಿದಾಗ ಭಾರಿ ಸಂತೋಷವನ್ನುಂಟುಮಾಡುತ್ತದೆ. ಇಂದು ಕಾರ್ಮಿಕರು ಅಫೀಮಿನ ಚಿಕ್ಕ ಗುಳಿಗೆಗಳನ್ನು ಬಾಯಿಯಲ್ಲಿಟ್ಟುಕೊಂಡು ಅವರ ಸ್ವಾದವನ್ನು ಅನುಭವಿಸುತ್ತ ತಮ್ಮದೇ ಆದ ಲೋಕದಲ್ಲಿ ವಿಹರಿಸುತ್ತಾರೆ. ದಣಿವಾರಿಸಿ ಚಿಕ್ಕ ಪುಟ್ಟ ಕಾಹಿಲೆಗಳನ್ನದು ದೂರ ಮಾಡುತ್ತದೆಂಬ ನಂಬಿಕೆ ಅವರದು.

ಹಳೆಯ ಆಯುರ್ವೇದೀಯ ವೈದ್ಯರು ಕೂಡ, ವಿಷುವವೃತ್ತದ ಒಂದು ರೋಗವಾದ Sprue, ಅಸ್ಥಮಾ, ಚೇಳಿನ ಕಡಿತ ಮುಂತಾದುವುಗಳ ಶಮನಕ್ಕೆ ಅಫೀಮನ್ನು ಬಳಸುತ್ತಿದ್ದುದುಂಟು. ಪ್ರಮುಖ ಔಷಧಿಯಿಂದ ಉಪಪರಿಣಾಮಗಳು ಉಂಟಾಗದಂತೆ ಇದನ್ನು ತುಸು ಪ್ರಮಾಣದಲ್ಲಿ ನೀರಿಗೆ ಬೆರೆಸಿ ಕೊಡುತ್ತಿದ್ದರು.

ಭಾರತವು ಔಷಧಿಗೆ ಅಗತ್ಯವಾದ ಅಫೀಮಿನ ಕ್ಷಾರವನ್ನು ಅಮೇರಿಕ, ರಶಿಯಾ, ಫ್ರಾನ್ಸ್, ಬ್ರಿಟನ್ ಹಾಗೂ ಜಪಾನುಗಳಿಗೆ ರಫ್ತು ಮಾಡುತ್ತದೆ.

ಶರೀರದಲ್ಲಿ ಹೆರಾಯಿನ್ನಿನ ಕೆಲಸವೇನು? ಎಂಬುದರ ಕುರಿತು ೧೯೭೩ರಿಂದ ವಿಶೇಷ ಶೋಧಗಳು ನಡೆದಿವೆ. ಮಿದುಳು, ಬೆನ್ನು ಹುರಿ, ಕರುಳು, ಭಾಗಗಳಲ್ಲಿ ಮಾರ್ಫಿನ್ ಕೀಲಿಸಿದಂತೆ ನಿಂತುಬಿಡುತ್ತದೆ. ನೋವು ಭಯಗಳನ್ನು ಓಡಿಸಿಬಿಡುತ್ತದೆ. ಮಿದುಳು ನೋವು ತಡೆ ರಾಸಾಯನಿಕಗಳ (endorphines) ಮೂಲಕ ಮಾರ್ಫಿನ್ ಕೆಲಸವನ್ನು ಮಾಡುತ್ತದೆ. ಈ ಶೋಧನೆ ಸಾಮಾನ್ಯರ ಅರಿವಿಗೆ ಇನ್ನೂ ಬಂದಿಲ್ಲ. Endorphineನ್ನು ಔಷಧಿಯಂತೆ ಬಳಸಿದರೆ ಚಟವಾಗಿ ಬೆಳೆಯುವ ಸಾಧ್ಯತೆಯೂ ಇದೆ.

ಭಾರತದಂತೆ ಪಾಕಿಸ್ತಾನವೂ ಸಾಕಷ್ಟು ಅಫೀಮನ್ನು ಬೆಳೆಯುತ್ತದೆ. ೧೯೭೯ರಲ್ಲಿ ಪಾಕಿಸ್ತಾನದ ಹೊಸ ಸರಕಾರವು ಮುಸ್ಲಿಂ ಕಾಯಿದೆಯನ್ವಯ ಅಫೀಮು ಬೆಳೆಯುವುದನ್ನು ಪ್ರತಿಬಂಧಿಸಿತು. ಧಾರ್ಮಿಕ ನಿಯಮದನ್ವಯ

ಮುಸ್ಲಿಮರು ಮಾದಕ ವಸ್ತುವನ್ನು ಸೇವಿಸ ಕೂಡದು. ಅಫೀಮಿನ ಬದಲು ಬೇರೆ ಫಸಲು ಬೆಳೆಯಲು ಸರಕಾರ ಅನೇಕ ಸವಲತ್ತು ನೀಡಲು ಸಿದ್ಧವಾದರೂ ಯಾವುದೇ ಬೆಳೆಗಿಂತ ಐದು ಪಟ್ಟು ಹೆಚ್ಚು ಲಾಭ ತರುವ ಅಫೀಮನ್ನು ಹೇಗೆ ಬಿಟ್ಟುಕೊಟ್ಟಾರು? ಪಶ್ಚಿಮ ರಾಷ್ಟ್ರಗಳಿಗೆ ಪಾಕಿಸ್ತಾನ ಅಥವಾ ಅದರ ಮೂಲಕ ಅಫೀಮಿನ ಕಳ್ಳಸಾಗಾಣಿಕೆಯಾಗುತ್ತದೆ. ಹೆಚ್ಚಿನಂಶ ಕರಾಚಿಯಿಂದ ಹಡಗಿನಲ್ಲಿ ಲಂಡನ್–ಫ್ರಾಂಕ್‌ಫರ್ಟಗಳಿಗೆ ಹೋಗುತ್ತದೆ. ಅಲ್ಲಿಂದ ವಿಮಾನದ ಮೂಲಕ ನ್ಯೂಯಾರ್ಕ್, ಶಿಕಾಗೋ, ಹೂಸ್ಟನ್, ಮಾಂಟ್ರೀಲ್ ಸೇರುತ್ತದೆ.

ಐದು ಕೇಜಿ ಅಫೀಮು ತುಂಬಿದ ಪಾಲಿಥಿನ್ ಚೀಲಗಳನ್ನು ಪೆಟ್ಟಿಗೆಯಲ್ಲಿ ಹಾಕಿ, ಬ್ರಿಟನ್, ರಶಿಯಾ, ಸೇಂಟ್ ಲೂಯಿಸ್, ನೆವಾರ್ಕಗಳಿಗೆ ಹಡಗಿನಲ್ಲಿ ಕಳಿಸಲಾಗುತ್ತದೆ. ೧೮೨೦ ರಷ್ಟು ಹಿಂದೆಯೇ ಚೀನಕ್ಕೂ ಕಳಿಸಲಾಗುತ್ತಿತ್ತಂತೆ. ಚೀನೀಯರು ಬೆಳ್ಳಿಗೆ ಬದಲಾಗಿ ಅಫೀಮನ್ನು ಪಡೆಯುತ್ತಿದ್ದರಂತೆ.

ಕಾಯಿದೆಶೀರಾಗಿ ಕಲಕತ್ತಾದಲ್ಲಿ ಅಫೀಮನ್ನು ಹರಾಜು ಮಾಡಲಾಗುತ್ತದೆ. ಇದು ಭಾರತಕ್ಕೆ ಸಾಕಷ್ಟು ಗಳಿಕೆ ತರುತ್ತದೆ.

ಪಾಕಿಸ್ತಾನದ ವಾಯುವ್ಯದ ದೀರ್ ಜಿಲ್ಲೆಯ ರಸ್ತೆ ಗುಂಟ ೨೨೦೦ ಅಡಿ ಎತ್ತರದಲ್ಲಿ ಕೇವಾಸ್ತಾರ ಕಣಿವೆಯಲ್ಲಿ ಬಿಳಿ ಗುಲಾಬಿ, ಜಾಂಬಳಿ ಹೂಗಳ ಗಸಗಸೆ ಗಿಡಗಳು ಸುಂದರವಾಗಿ ಕಂಗೊಳಿಸುತ್ತವೆ. ಅಫಘಾನಿಸ್ತಾನ, ಇರಾಣಗಳು ಕಾಯಿದೆ ವಿರುದ್ಧವಾಗಿ ಬ್ರಹ್ಮದೇಶ, ಲಾವೋಸ್ ಹಾಗೂ ಥೈಲಂಡುಗಳಿಗಿಂತ ಹೆಚ್ಚಿಗೆ ಹೆರಾಯಿನ್‌ನ್ನು ಉತ್ಪಾದಿಸುತ್ತವೆ.

ಥೈಲಂಡಿನಲ್ಲಿ ಸುಲಭ ಬೆಲೆಗೆ ಹೆರಾಯಿನ್ ಸಿಗುವದರಿಂದ ಅಲ್ಲಿ ಮೂರು ಲಕ್ಷ ಜನ ಈ ಚಟದವರಿದ್ದಾರೆ. ಇಂಜೆಕ್ಶನ್ ಚುಚ್ಚಿಕೊಳ್ಳುವವರೂ ಸಾಕಷ್ಟಿದ್ದಾರೆ. ಮಲಯೇಶಿಯಾದಲ್ಲಿ ಸುಮಾರು ೩-೫ ಲಕ್ಷ ಟರ್ಕಿಯ ಗಡಿ ಪ್ರದೇಶದಲ್ಲಿ ಸುಮಾರು ೧-೫ ಲಕ್ಷ, ಹೆರಾಯಿನ್ ಭಕ್ತರೂ ೪-೫ ಲಕ್ಷ ಅಫೀಮು ಭಕ್ತರೂ ಇದ್ದಾರೆ. ಇರಾಣದಲ್ಲಿ ಬಲು ಹಿಂದಿನಿಂದಲೂ ಇದರ ಸೇವನೆಯ ರೂಢಿ ಇದೆ. ಊಟವಾದ ನಂತರ ಅಫೀಮು ಸೇವನೆ ಸರ್ವೇಸಾಮಾನ್ಯ. ಆಗ್ನೇಯ ಏಶಿಯಾದ ಬ್ರಹ್ಮದೇಶ, ಥ್ಯಾಲಂಡ್, ಲಾವೋಸ್‌ಗಳಿಂದ, ಅಮೇರಿಕಕ್ಕೆ ಬರುವವರ ೨೦%ರಷ್ಟು ಹೆರಾಯಿನ್ ಬರುತ್ತದೆ. ಈ ದೇಶದವರಿಗೆ ಬೆಳ್ಳಿ–ಬಂಗಾರ ಆಭರಣ, ರೈಫಲ್, ರೇಡಿಯೋ, ಹಂದಿ, ಎಮ್ಮೆ ಯಾವುದು ಅಫೀಮು ವಿನಿಮಯಕ್ಕೆ ಸಿಕ್ಕರೂ ಆದೀತು.

ಒಂದು ವರದಿಯಂತೆ ಅಮೇರಿಕ ಒಂದು ವರ್ಷದಲ್ಲಿ ೪.೫ ಬಿಲಿಯ ಡಾಲರುಗಳನ್ನು ಹೆರಾಯಿನ್ನಿಗಾಗಿ ವ್ಯಯಿಸಿದೆ. ಅಲ್ಲಿ ವರ್ಷಕ್ಕೆ ೪ ಮೆಟ್ರಿಕ್ ಟನ್ ಹೆರಾಯಿನ್ ಕಳ್ಳತನದಿಂದ ಒಳನುಗ್ಗುತ್ತದೆ. ಇವರಲ್ಲಿ ಅರ್ಧ ಭಾಗ ಅಫಗಾನಿಸ್ತಾನ ಗಡಿಯಿಂದ ಬರುತ್ತದೆ.

೧೯೮೩ರಲ್ಲಿ ೪.೧೨ ಟನ್ ಹೆರಾಯಿನ್ ಅಮೇರಿಕಕ್ಕೇ ಕಾಯಿದೆಬದ್ಧವಾಗಿ ಬಂದಿದೆ. ನಿಜವಾಗಿ ಬಂದುದು ಎಷ್ಟೆಂದು ಯಾರಿಗೆ ಗೊತ್ತು? ಕಾಯಿದೆ ರಹಿತವಾಗಿ ಬಂದುದನ್ನು ಹಿಡಿಯುವದೆಷ್ಟು?

ಅಫೀಮು, ಹೆರಾಯಿನ್, ಕೋಡಿನ್, ಮಾರ್ಫಿನ್‌ಗಳ ಕಳ್ಳ ಸಾಗಾಣಿಕೆಯನ್ನು ತಡೆಗಟ್ಟಲು, ಭಾರತ ಸರಕಾರವು ಇತ್ತೀಚೆ ೧ ಕೇಜಿ ಕಳ್ಳ ಸಾಗಾಣಿಕೆಗೆ ೧೦ ವರ್ಷದಿಂದ ೨೦ ವರ್ಷ ಸಶ್ರಮ ಶಿಕ್ಷೆ ಹಾಗೂ ಒಂದರಿಂದ ಎರಡು ಲಕ್ಷ ರೂಪಾಯಿಗಳ ದಂಡವನ್ನು ಘೋಷಿಸಿದೆ. ✡



ಎಚ್. ಪಾಂಡುರಂಗ ವಿಟ್ಠಲ

# ಚಿಂತೆ ದೂರಾಗಬೇಕೆ?

ಮನಃಕ್ಷೋಭೆ ಯಾರಿಗೂ ತಪ್ಪಿಲ್ಲ. ಚಿಂತೆ, ಕಳವಳಗಳು, ಹಸಿವು ಬಾಯಾರಿಕೆಗಳಂತೆಯೇ ಜೀವನದ ಹಾದಿ. ನಮ್ಮ ಸುಖ, ಪ್ರತಿಷ್ಠೆಗೆ ಧಕ್ಕೆ ಬಂದಾಗ ಬರುವ ರಕ್ಷಣಾತ್ಮಕ ಪ್ರತಿಕ್ರಿಯೆ ಇವು ಎನ್ನುತ್ತಾರೆ ಡಾ. ಜಾನ್ ಸ್ಟೀವನ್‌ಸನ್‌ನಂಥ ಮನೋವೈದ್ಯರು.

ಏನು ಮಾಡಬೇಕೆಂದು ತೋಚದ ಶೂನ್ಯ ಸ್ಥಿತಿಯು ಈ ಕ್ಷೋಭೆಗೆ ಕಾರಣಗಳಿವು:

(i) ಜವಾಬ್ದಾರಿಯು ನಿರ್ವಹಣೆಯಾಗಲಿ ವರ್ಗಾವಣೆಯಾಗಲಿ ಸಾಧ್ಯವಾಗದಿರುವುದು; (ii) ವಾಸ್ತವವನ್ನು ಒಪ್ಪಲಾಗದ್ದು; (iii) ವಾಸ್ತವದ ನೀವು ಹಾಗೂ ನಿಮ್ಮ ಯೋಚನೆಯ ಆದರ್ಶ ಪುರುಷರಾದ "ನೀವು" ಇವುಗಳ ನಡುವೆ ತರ್ಕಬದ್ಧ ಸಂಬಂಧ ಸಾಧ್ಯವಾಗದೆ "ನನಗೆ" ಹೀಗಾಯ್ತಲ್ಲ ಎಂಬ ಚಿಂತೆ; "ನಾನು" ಹೀಗೆ ಮಾಡಿದೆನಲ್ಲ ಎಂಬ ಯೋಚನೆ.

ಈ ಸ್ಥಿತಿ ನೆಗಡಿಯಂತೆಯೇ ಅತಿ ಸಾಮಾನ್ಯ. ಅನಿರೀಕ್ಷಿತವಾದ ಚಿಕ್ಕಪುಟ್ಟ ನಿರಾಶೆಗಳೂ ದ್ವಂದ್ವ ನಿರ್ಮಿಸುತ್ತವೆ. ಮಾನವ ಸಂಬಂಧಗಳು ಇದ್ದಕ್ಕಿದ್ದಂತೆ 'ಮೂಡಿ' ಯಾಗಿ ಬಿಡುತ್ತವೆ. ಅಂದುಕೊಂಡಂತೆ ನಡೆವ ಘಟನೆಗಳೂ ಸಮಾಧಾನ ನೀಡದೆ, ಎಂದೂ ಯೋಚಿಸದ ವ್ಯಕ್ತಿಗಳು ವಿಪತ್ತುಗಳ ಬಗ್ಗೆಯೂ ಹೆದರಿಕೆಯು ಗೀಳು, ಸಂಶಯ ಪಿಶಾಚಿ, ಹೀನ್ಯಕೆ ಮಾಂತ್ರಿಕ ಭೂತದಂತೆ ಪ್ರತ್ಯಕ್ಷವಾಗಿ ಬಿಡುತ್ತದೆ.

ಈ ಕತ್ತಲೆಯ ಗುಮ್ಮನನ್ನು ಓಡಿಸಲು ಬೆಳಕಿನ ಅಮ್ಮನನ್ನು ನೆನಸಿದರೂ ಸಾಕು: ವಿಶ್ವಾಸಿಯೊಬ್ಬರ ಹತ್ತಿರ ಮಾತಾಡಿದೊಡನೆ ಚಿಂತೆ ಓಡುತ್ತದೆ. ಅದು ಅಸಾಧ್ಯವೆನಿಸಿದರೆ ಪ್ರಯತ್ನಪೂರ್ವಕವಾಗಿ ಸ್ವಲ್ಪ ಹೊತ್ತು ಆ ಗುಮ್ಮನನ್ನು ಮರೆತರೆ, ಬದಲಾದ ದೃಷ್ಟಿಯಿಂದ ಸಮಸ್ಯೆಯನ್ನೆದುರಿಸಬಹುದು.

ನನ್ನದೂ ಕಲ್ಪನೆಯು ಗುಮ್ಮನಲ್ಲ. ಹಣದ ಕೊರತೆ, ಒಗ್ಗದ ಕೆಟ್ಟ ಕೆಲಸ, ಬಾಂಧವ್ಯದ ಸಮಸ್ಯೆಗಳ ಪ್ರತ್ಯಕ್ಷ ಪಿಶಾಚಿ ಎಂದು ಕೆಲವರೆನ್ನಬಹುದು. ಆಗ ಇದೂ ಒಬ್ಬನ ದೃಷ್ಟಿಕೋನ, ಹೊಂದಾಣಿಕೆಯ ಶಕ್ತಿಯನ್ನು ಅವಲಂಬಿಸಿದ ವ್ಯಕ್ತಿ-ಪ್ರಪಂಚದ ನಡುವಿನ ಪರಸ್ಪರ ಸೊಕಾಟದ ಪ್ರಕ್ರಿಯೆಯಾಗುತ್ತದೆ, 'ಎಳೆತ' ವಾಗುತ್ತದೆ. ಇದಕ್ಕೆ ಆತ್ಮನಿರೀಕ್ಷಣೆಯೇ ಮದ್ದು. ನಮ್ಮಲ್ಲಿ, ನಮ್ಮ ಬೆಳವಣಿಗೆಯಲ್ಲಿ, ನಂಬಿದ ಮೌಲ್ಯಗಳಲ್ಲಿ, ಸಮಾಜದ ಮೂಲಭೂತ ಒಳ್ಳೆಯತನದಲ್ಲಿ ನಂಬಿಕೆಯ ಕೊರತೆ ಮನೋವೈದ್ಯರತ್ತ ನಮ್ಮನ್ನು ದೂಡುವ ಮುನ್ನ ಈ ವಿಚಾರಗಳನ್ನು ಗಮನಿಸಬಹುದು:

(i) ದಿನವೂ ತುಸು ಹೊತ್ತು ತನ್ನನ್ನೇ ಮರೆಯುವಂಥ ಕಲಾಭ್ಯಾಸಗಳಿಗೆ ಬಿಡುವು ಮಾಡಿಕೊಳ್ಳುವುದು.

(ii) ಬೇಕೆಂತಲೇ ಕೆಲವು ಬಾರಿ ಬೇರೆಯವರಿಗೆ ಮಾತು ಕೃತಿಗಳಲ್ಲಿ ತಮ್ಮ ತಪ್ಪು ಹಾದಿಯನ್ನು ತುಳಿಯುವದಕ್ಕೆ ಅವಕಾಶ ನೀಡುವ 'ಸಾಕ್ಷಿ' ಗಳಾಗುವುದು;

(iii) ಬೇರೆಯವರಿಗಾಗಿ ಏನನ್ನಾದರೂ



ಮಾಡುವುದು ಒಂದು ತರಹೆ ನಮ್ಮನ್ನು ತೊಡಗಿಸಿಕೊಳ್ಳುವ ರೀತಿ; ನಮ್ಮನ್ನು ಕಡೆಗಣಿಸಲಾಗುತ್ತಿದೆ ಎಂಬ ಭಾವನೆಗೂ–ನಾವೇ ಎಲ್ಲಕ್ಕೂ ಜವಾಬ್ದಾರರಾಗಬೇಕಾಗಿದೆಯಲ್ಲ ಎಂಬ ಬಿಗಿತಕ್ಕೂ ಮಧ್ಯಮಾರ್ಗ ಹುಡುಕಿದಂತೆ.

(iv) ಎರಡು ವಸ್ತುಗಳು ಒಂದೇ ಕಾಲದಲ್ಲಿ ಒಂದೇ ಜಾಗ ಆಕ್ರಮಿಸಲಾರವೆಂಬ ನಿಯಮ ನೆನಪಿಡಿ. ಮುಖ್ಯವಾದ ಕೆಲಸಗಳನ್ನು ಅನುಕ್ರಮವಾಗಿ ಜೋಡಿಸಿಕೊಂಡು ಒಂದೊಂದನ್ನೇ ಮಾಡಿ ಮುಗಿಸಿ.

(v) ನಿಮ್ಮ ಆದರ್ಶದ "ನೀವು" ನಿಜವಾಗಿ ನಿಮ್ಮ ಕಲ್ಪನೆಯ ದೇವರೇ—ಪ್ರತಿಯೊಂದು ಸಂದರ್ಭದಲ್ಲೂ ಪವಾಡ ಸಾಧಿಸಬಲ್ಲೆನೆಂದು ಹೊರಟರೆ ವಾಸ್ತವದ ನಿಮ್ಮ ಬಗ್ಗೆ ಹೀನೈಕೆ, ಚಿಂತೆ ಬೆಳೆದು ಭೂತವಾಗುತ್ತದೆ. ಪರಿಪೂರ್ಣತೆ ಗುರಿ ಮಾತ್ರ; ಎಲ್ಲದರಲ್ಲೂ ಗೆಲ್ಲುವುದು ಅಸಾಧ್ಯ ಎಂಬುದು ನೆನಪಿರಲಿ. ಇನ್ನು ಕೆಲವರ ಚಾಳಿ ಇತರರನ್ನು ಆದರ್ಶದ ದೇವರಾಗಿ ಭಾವಿಸಿ, ಅವರು ಹಾಗೆ ನಡೆದುಕೊಳ್ಳುವಾಗ ವಿಪರೀತ ಕ್ಷೋಭೆಗೊಳ್ಳುವುದು. ಇದಕ್ಕೆ ಆ ಅವರೂ ಮೇಲಣ ಭೂತದ ದಾಳಿಗೆ ಒಳಗಾಗಿದ್ದಾರೆ, ಕಟು ವಿಮರ್ಶೆ ಕೂಡದು ಎಂಬ ವಾಸ್ತವ ವಿಚಾರ ಮದ್ದು.

(vi) ದುರದೃಷ್ಟದ ಬಂಡೆ ಭಾರ ತಲೆಗೇರಿದಾಗ ರೋಗಿ. ದುಃಖಿಸಿ, ಜೀವನವನ್ನು ಶಪಿಸಬಹುದು ಅಥವಾ ಹಲ್ಲು ಕಚ್ಚಿ ಬೆವರಿಳಿಸಿ ಹೊರಬಹುದು ಇಲ್ಲವೆ ಇದೂ ಒಂದು ಅನುಭವವೆಂದು ಹಗುರಾಗಿ ಅದನ್ನು ಒಪ್ಪಿಕೊಳ್ಳಬಹುದು. ಮೊದಲ ಹಾದಿ ನಿರುಪಯುಕ್ತ; ಎರಡನೆಯದು ಪೇಡಿತನ; ಸುಸ್ತು ಚಿಂತೆಗಳ ದಾರಿ ಮೂರನೆಯದು. ಬದುಕು ಪ್ರತಿಷ್ಠೆಗಿಂತ ವಾಸ್ತವದ ಪರಿಮಿತಿ ಒಪ್ಪುವುದು ನಿಶ್ಚಿಂತೆ. ಪರಿಮಿತಿಯ ಗೋಡೆಯನ್ನು ಒಪ್ಪಿದ ಮೇಲೆಯೆ 'ಇನ್ನೂ ಇದೆ' ಎಂಬ ಬಾಗಿಲು ತೆರೆದುಕೊಳ್ಳುವುದು.

ಏನು ಮಾಡಿದರೂ ಚಿಂತೆ ದೂರಾಗದಿದ್ದರೆ, ಮನೋವೈದ್ಯರ ಹತ್ತಿರ ಹೋಗಲು ನಾಚಿಕೆಯೆನಿಸಿದರೆ, ಆ ಚಿಂತೆ ವಿಚಾರಕ್ಕೆ ಒಗ್ಗದ ಒಂದು ಅಲರ್ಜಿ, ಆಗ ಧೈರ್ಯವಾಗಿ ಈ ಕೆಲಸಗಳನ್ನು ಮಾಡಿ:

(i) ಅದೃಷ್ಟದ ಲಾಟರಿ ತೆಗೆದುಕೊಳ್ಳಿ–ಡ್ರಾ ದಿನಾಂಕದ ವರೆಗೆ ಹುಚ್ಚು ಹಿಡಿಯದು.

(ii) ಜಾತಕ ಹಿಡಿದು ಜೋಯಿಸರ ಹತ್ತರ ಹೋಗಿ; ಇಲ್ಲವೆ ಹಸ್ತಸಾಮುದ್ರಿಕ ತಳ ಕಾಣಿಸಬಲ್ಲ ಬೀದಿ ಬದಿಯ ಅಗಸ್ತ್ಯರಿಗೆ ಕೈ ತೋರಿಸಿ; ನಿಮ್ಮ ಜವಾಬ್ದಾರಿಯನ್ನು ಗ್ರಹಗಳು ಹೊರುವುವು, ಚಿಂತಾಸಮುದ್ರ ಗೆರೆಯಲ್ಲಿ ಅಡಗುವುದು.

(iii) ದೇವರಿಗೆ ಹರಕೆಯ ಲಂಚ ಸಲ್ಲಿಸಿ–ಕೆಲಸವಾಗದಿದ್ದರೆ ಬೇರೆ ಶಕ್ತ ದೇವರನ್ನು ಹುಡುಕಲು ಸಂಕೋಚಪಡಬೇಡಿ. (ಅವನೇನೂ ಕಟ್ಟಿಕೊಂಡ ಗಂಡನಲ್ಲವಲ್ಲ!) ಮೈಮೇಲೆ ಬರುವ "ಪ್ರತ್ಯಕ್ಷ" ದೇವರುಗಳನ್ನು ನೋಡಿ ನಿಮ್ಮ ಚಿಂತೆ ನಿವೇದಿಸಿ, ತೀರ್ಮಾನವನ್ನು ಮುಂದೂಡಿ.

(iv) ಕರ್ಮ, ಪುನರ್ಜನ್ಮಗಳ 'ಬ್ಲ್ಯಾಕ್ ಹೋಲ್'ನಂಥ ಬಾವಿಯಲ್ಲಿ ನಿಮ್ಮ ಚಿಂತೆಯನ್ನು ಮುಳುಗಿಸಿಬಿಡಿ.

ಮೇಲಿನ ವಿಚಾರಗಳು ಹಾಸ್ಯವಲ್ಲ; ನಮ್ಮ ಸನಾತನ ಸಂಸ್ಕೃತಿ ಶತಮಾನಗಳಿಂದ ಅಲರ್ಜಿಯಾದ ಚಿಂತೆಯ ವಿಧಕ್ಕೆ ಒದಗಿಸಿದ ನಾಟಿ ಮದ್ದುಗಳು. ಒಳಗಿನಿಂದ ನಿಮ್ಮ ಯೋಚನೆಗಳ ಬಲೆಯೊಳಕ್ಕೆ ನೀವೇ ಸಿಕ್ಕಿ ಹಾಕಿಕೊಳ್ಳುವುದನ್ನು ತಪ್ಪಿಸಿಕೊಳ್ಳುವ ನಿರೋಧಕ ಶಕ್ತಿ–ಆತ್ಮ ನಿರೀಕ್ಷಣೆ ಇಲ್ಲವಾದಲ್ಲಿ, ಈ ಹೊರಗಿನ ಮದ್ದಿಗೆ ಶರಣಾಗುವುದು ಸಾಮಾನ್ಯ. ಭವಿಷ್ಯದ ಆಸೆಗಳ ಬಗ್ಗೆ ಗೀಳಿನ ಚಿಂತೆ–"ಏನೋ" ಆಗಿ ಅನಂತರ ನೀವು "ನೀವಾ"ಗುವುದು ವಿಚಿತ್ರ ದಡ್ಡತನವಲ್ಲವೆ? ✿

(ಸಾಧಾರ)






ಮೂಲ: **ಕುನ್ನಂತಾನಂ ರಾಮಚಂದ್ರ**
ಕನ್ನಡಕ್ಕೆ: **ಡಾ. ಅಶೋಕ್ ಕುಮಾರ್**

ಒಂದು ಗ್ರೀಷ್ಮ ಋತುವಿನ ಮಧ್ಯಾಹ್ನದ ಅವರೋಹಣ ಕ್ರಿಯೆಯಲ್ಲಿ ಬೀಸುವ . ಗಾಳಿಯಂತೆ, ನಿಲ್ಲಿಸಿ ನಿಲ್ಲಿಸಿ ದೀರ್ಘವಾಗಿ ಉಸಿರೆಳೆದುಕೊಂಡು ಪದ್ಮನಾಭ ಪಿಳ್ಳೆ ಮರಣವನ್ನು ಕಾದು ಮಲಗಿದರು.

ಆಗ ಕೋಣೆಯ ಮೂಲೆಯಲ್ಲಿ ಕುಳಿತು ತೂಕಡಿಸುತ್ತಿದ್ದ ಕಾವಲಿನ ಹುಡುಗ ಬೆಚ್ಚಿ ಎದ್ದ .

ಪದ್ಮನಾಭ ಪಿಳ್ಳೆಯ ಸೇವೆಗೆ ನಿಯಮಿಸಲ್ಪಟ್ಟಿದ್ದ ಆ ಹುಡುಗ ಎದ್ದು ಹೋಗಿ ಶ್ವಾಸೋಚ್ಛ್ವಾಸದ ವೇಗವನ್ನು ಗಮನಿಸಿ ಅವಸರದಿಂದ ಟೆಲಿಫೋನ್ ತಿರುಗಿಸಿದ.

ಪದ್ಮನಾಭ ಪಿಳ್ಳೆಯ ಹಿರಿಯ ಮಗ ದೇವ-

ದಾಸನ್ ಪಿಳ್ಳೆ ರಿಸೀವರ್ ಎತ್ತಿದ.

"ಸರ್, ಇವರಿಗೆ ರೋಗ ಉಲ್ಬಣಿಸಿದೆ."

"ಎಷ್ಟು ಹೊತ್ತಾಯ್ತು?"

"ಈಗಷ್ಟೇ ಉಸಿರಾಡಲು ಕಷ್ಟಪಡ್ತಿದ್ದಾರೆ."

"ಭಾನುಮತಿಗೆ ಹೇಳಿದೆಯಾ?"

"ಇಲ್ಲ"

"ಅವಳು ನಿದ್ರೆ ಮಾಡ್ತಿರಬೇಕು. ಮೇಲೆ ಹೋಗಿ ಎಬ್ಬಿಸಿ ಹೇಳು. ಎಲ್ಲರಿಗೂ ಎಸ್. ಟಿ. ಡಿ. ಮಾಡಿ ವಿಷಯ ತಿಳಿಸಲು ಹೇಳು. ನಾನಿದೋ ಹೋರಟೆ."

ಹುಡುಗ ಫೋನ್ ಇರಿಸಿದ.

ನಿದ್ರೆ ಹಾಳಾದಾಗ ಭಾನುಮತಿ ಸಿಟ್ಟಿನಿಂದ ಕೆಳಗೆ ಬಂದಳು. ಬಂದು ಸ್ವಲ್ಪ ಹೊತ್ತು ಪದ್ಮನಾಭ ಪಿಳ್ಳೆಯನ್ನು ಗಮನಿಸಿದಳು. ನಂತರ ಟೆಲಿಫೋನಿನ ಬಳಿಗೆ ಸಾಗಿದಳು.

ಅರ್ಧ ಗಂಟೆಯೊಳಗೆ ಬಾಂಬೆ, ಡೆಲ್ಲಿ, ಬರೋಡ, ಸಿಕಂದರಾಬಾದ್‌ಗಳಲ್ಲಿ ರಾಜರಂತೆ ಬಾಳುತ್ತಿರುವ ನಾಲ್ವರೂ ಗಂಡುಮಕ್ಕಳೂ ತಮ್ಮ ತಮ್ಮ ಹಿರಿಯಣ್ಣನ ಬಳಿಯಿರುವ ತಮ್ಮ ತಂದೆಯ ರೋಗದ ಉಲ್ಬಣತೆಯನ್ನರಿತರು.

ರಾತ್ರಿ ಮತ್ತು ಮರುದಿನದೊಳಗೆ ಅವರೆಲ್ಲ ವಿಮಾನದಲ್ಲಿ ದೇವದಾಸನ್ ಪಿಳ್ಳೆಯ ಮನೆಯನ್ನು ತಲಪಿದರು.

ನಾಲ್ವರು ಮಕ್ಕಳು ಬಂದರು. ಆದರೆ ಪದ್ಮನಾಭ ಪಿಳ್ಳೆ ಸಾಯಲಿಲ್ಲ.

ಸಾಯಲಿಲ್ಲ ಎಂದು ಮಾತ್ರವಲ್ಲ. ಮಂಚದ ಬಳಿ ಕುಳಿತ ಫ್ಯಾಮಿಲಿ ಡಾಕ್ಟರ್, ಪದ್ಮನಾಭ ಪಿಳ್ಳೆ ಗುಣಮುಖರಾಗುವ ಲಕ್ಷಣಗಳು ಕಾಣುತ್ತಿವೆ ಎಂದರು.

ಅವಸರದಿಂದ ಬಂದು ತಲುಪಿದ್ದ ನಾಲ್ವರೂ ಮಕ್ಕಳೂ ಟೆಲಿಫೋನ್‌ನಲ್ಲಿ ಬಾಂಬೆ, ಡೆಲ್ಲಿ, ಬರೋಡ, ಸಿಕಂದರಾಬಾದ್‌ಗಳನ್ನು ಸಂಪರ್ಕಿಸಿದರು. ಹೊರಟು ಬರಲು ತಯಾರಾಗಿದ್ದ ಹೆಂಡತಿ ಮಕ್ಕಳಿಗೆ ಇನ್ನೊಂದು ಸುದ್ದಿ ತಿಳಿಸುವವರೆಗೂ ಹೊರಡಬೇಡಿ ಎಂದು ಹೇಳಿದರು.

ಐವರು ಮಕ್ಕಳೂ ಇನ್ನು ಏನು ಮಾಡುವುದು ಎಂದು ತಿಳಿಯದಾದರು. ಏಕೆಂದರೆ, ಇದು ಮೂರನೇ ಬಾರಿ ಪದ್ಮನಾಭ ಪಿಳ್ಳೆ ಮಕ್ಕಳನ್ನು ಮರಣ ತೋರಿಸಿ ಹೆದರಿಸುತ್ತಿರುವುದು.

"ಏನೆಲ್ಲಾ ಷೆಡ್ಯೂಲ್ಸ್ ಮುಂದೂಡಿ ಓಡಿ ಬಂದೆ!" ಬರೋಡದಲ್ಲಿದ್ದವನು ಹೇಳಿದ. ಆ ಐವರು ಅಣ್ಣ ತಮ್ಮಂದಿರು ಪಕ್ಕದ ಕೋಣೆಯಲ್ಲಿ ಸಭೆ ಸೇರಿದ್ದರು.

"ಏನು ಹೇಳೋದು!" ಸಿಕಂದರಾಬಾದಿನವನು ಹೇಳಿದ. "ಅಪ್ಪ ಮರಣವನ್ನು ಸಹ ಆಟವಾಡಿಸುತ್ತಿದ್ದಾರೆ."

"ಇದು ಮೂರನೇ ಸಲ ಈ ಕಾರ್ಯಕ್ಕಾಗಿಯೇ ಹೊರಟು ಬಂದಿರುವದು" ಬಾಂಬೆಯಾತ ಹೇಳಿದ "ಇದು ಹೀಗೆ ಮುಂದುವರಿದರೆ ಹೇಗೆ?"

ಅದು ಸ್ವಗತವೆನ್ನುವುದದಕ್ಕಿಂತ ಹೆಚ್ಚಾಗಿ ಒಂದು ಪ್ರಶ್ನೆಯಾಗಿತ್ತು.

ಆ ಪ್ರಶ್ನೆಯನ್ನೇ ಹಿಡಿದು ಬಹಳ ಹೊತ್ತು ಅವರೆಲ್ಲ ಏನೇನೋ ಮಾತಾಡಿಕೊಂಡರು. ನಂತರ ಹಿರಿಯಣ್ಣ ದೇವದಾಸನ್ ಪಿಳ್ಳೆಯನ್ನು ಮಾತ್ರ ಡಾಕ್ಟರ ಬಳಿಗೆ ಕಳಿಸಿದರು.

ದೇವದಾಸನ್ ಪಿಳ್ಳೆ ಪೆಟ್ರೋಲಿನ ದರ ಕುರಿತು ಮಾತು ಪ್ರಾರಂಭಿಸಿ ಮತ್ತಾವುದೋ ವಿಷಯ ಪ್ರಸ್ತಾಪಿಸಿ ಕೊನೆಗೆ ಪಾರ್ಶ್ವವಾಯು ಬಡಿದು ಮಲಗಿರುವ ಮರಣವನ್ನು ನಿರೀಕ್ಷಿಸುತ್ತಿರುವ ಅಪ್ಪನ ವಿಷಯಕ್ಕೆ ಬಂದ. ಮೂರನೇ ಸಲವೂ ಮರಣವನ್ನು ತ್ಯಜಿಸಿ ಮಕ್ಕಳನ್ನು ತೊಂದರೆಗೀಡು ಮಾಡಿದ ಅಪ್ಪನಿಗೆ ತಮಾಷೆ ಮಾಡುವುದು ಹುಟ್ಟುಗುಣವಾಗಿತ್ತು ಎಂದು ಹೇಳಿದ.

ಡಾಕ್ಟರ್ ನಕ್ಕರು.

ಅದು ಚಿರಪರಿಚಿತವಾದ ನಗುವಾಗಿದ್ದುದರಿಂದ ಪದ್ಮನಾಭ ಪಿಳ್ಳೆ ಪ್ರಜ್ಞೆ ತಿಳಿದರು. ಕಣ್ಣು ತೆರೆಯಲು ಯತ್ನಿಸಿ ವಿಫಲರಾದರು. ಕಣ್ಣೆವೆಗಳ ಮೇಲೆ ಆ ದರಿದ್ರ ಡಾಕ್ಟರ್

ಏನೋ ಭಾರಪಿರಿಸಿದ್ದಾರೆಂದು ಶಪಿಸಿದರು.

ಆಗ ದೇವದಾಸನ್ ಪಿಳ್ಳೆ ಹೇಳಿದ: "ನಾವು ಏನಾದ್ರೂ ಮಾಡಬೇಕಲ್ಲ ಡಾಕ್ಟರ್."

"ಅಂದರೇನು?"

"ಡಾಕ್ಟರ್, ನಿಮಗೆ ಗೊತ್ತೇ ಇದೆ. ಈ ನಾಲ್ಕು ವರ್ಷಗಳಿಂದಲೂ ನಾನು ನನ್ನ ಕುಟುಂಬ ಅನುಭವಿಸುತ್ತಿರುವ ಕಷ್ಟ. ಈ ನಾಲ್ಕು ವರ್ಷಗಳಲ್ಲಿ ಒಂದು ರಾತ್ರಿಯೂ ನಾನು ಸುಖವಾಗಿ ನಿದ್ರಿಸಿಲ್ಲ. ಅದೂ ಅಲ್ಲದೆ ಅಪ್ಪ ಸತ್ತು ಹೋದರೆಂದು ಸುದ್ದಿ ಕೇಳಿ ಹಲವು ಸಮಸ್ಯೆಗಳುಳ್ಳ ನಾಲ್ವರೂ ಮಕ್ಕಳು ಇದು ಮೂರನೇ ಸಲ ಬಂದು ಸಂಕಟ ಪಡುತ್ತಿರುವುದು."

"ಸಾವು ನಮ್ಮ ಕೈಯಲ್ಲಿಲ್ಲವಲ್ಲ?" ಡಾಕ್ಟರ್ ಹೇಳಿದರು.

"ನಾವು ಐವರೂ ಸೇರಿ ತೆಗೆದುಕೊಂಡ ತೀರ್ಮಾನವೊಂದೇ." ದೇವದಾಸನ್ ಪಿಳ್ಳೆ ಹೇಳಿದ "ಅದೇನೆಂದರೆ, ಕೈಜಾರಿ ಹೋಗುತ್ತಿರುವ ಈ ಮರಣವನ್ನು ನಾವು ಕೈಯಾರೆ ಸೆರೆಹಿಡಿಯಬೇಕು. ಅದಕ್ಕೆ ನೀವು ಸಹಾಯ ಮಾಡಬೇಕು ಡಾಕ್ಟರ್."

"ನಾನೇನು ಮಾಡಬೇಕು?" ಡಾಕ್ಟರ್ ಕೇಳಿದರು. ಬಳಿಕ ಕಿವಿಯಾನಿಸಿದರು. ಡಾಕ್ಟರಂತೆಯೇ ಪ್ರಶ್ನೆ ತಿಳಿದಿದ್ದ ಪದ್ಮನಾಭ ಪಿಳ್ಳೆಯೂ ತಟ್ಟನೆ ಕಿವಿದೆರೆದರು. ದೇವನ್ ಏನು ಹೇಳುತ್ತಾನೆ?

"ಯೂಥೇನೇಸಿಯ" ದೇವನ್ ಪಿಳ್ಳೆ ಹೇಳಿದ.

"ಮರ್ಸಿ ಕಿಲ್ಲಿಂಗ್?" ಡಾಕ್ಟರ್ ಅಚ್ಚರಿಗೊಂಡರು.

"ಹೌದು."

"ಹಿಂದೆಯೂ ಒಮ್ಮೆ ನಾನು ಇದನ್ನು ಕುರಿತು ಆಲೋಚಿಸಿದ್ದೆ. ಈ ನರಕಸದೃಶ ಜೀವನಕ್ಕಿಂತ ಅಪ್ಪನಿಗೆ ಅದು ಇಷ್ಟಕಾಮ್ಯವಾಗಿರುತ್ತದೆಂದು ನನಗೆ ತೋರುತ್ತದೆ.'

ಪದ್ಮನಾಭ ಪಿಳ್ಳೆ [illegible] ಸನ್ನಿಪಾತದಿಂದಿರಬೇಕು.

"ನೋಡಿ ದೇವದಾಸನ್ ಪಿಳ್ಳೆ" ಡಾಕ್ಟರ್ ಹೇಳಿದರು. "ಮರ್ಸಿ ಕಿಲ್ಲಿಂಗ್‌ಗೆ ಕಾನೂನಿನ ಸಮ್ಮತಿಯಿಲ್ಲ." ಬಳಿಕ ಆ ಯುವ ಡಾಕ್ಟರ್ ಕೋಣೆಯಲ್ಲಿ ಅತ್ತಿಂದಿತ್ತ ನಾಲ್ಕು ಸಲ ನಡೆದರು.

"ಹೊರಗೆ ತಿಳಿದರೆ ತಾನೇ ನಿಯಮ, ಸಮ್ಮತಿಯ ಸಮಸ್ಯೆ ಮುಂತಾದವು ಬರೋದು?" ದೇವದಾಸನ್ ಪಿಳ್ಳೆ ಕೇಳಿದ.

ತಟ್ಟನೆ ನಿಂತು ಡಾಕ್ಟರ್ ಹೇಳಿದರು. "ದೇವದಾಸನ್, ನೀವು ನನ್ನನ್ನು ಸಂಕಟಕ್ಕೆ ಸಿಲುಕಿಸಿದಿರಿ. ರೋಗಿಗಳೆಂದರೆ ನನ್ನ ಜೀವವಿದ್ದ ಹಾಗೆ ನನ್ನ ಈ ಮಾತುಗಳನ್ನು ನೀವು ಯಾವ ಅರ್ಥದಲ್ಲಾದರೂ ವ್ಯಾಖ್ಯಾನಿಸಬಹುದು. ರೋಗದಿಂದ ಕೈ ಹಿಡಿದು ಮುಕ್ತಗೊಳಿಸುವುದರ ಬದಲು ಎಲ್ಲರ ಒಪ್ಪಿಗೆಯಿದ್ದರೂ ರೋಗಿಯನ್ನು ಮರ್ಸಿ ಕಿಲ್ಲಿಂಗ್‌ಗೊಳಪಡಿಸುವದು ನನಗೆ ಒಪ್ಪಿಗೆಯಿಲ್ಲ. ಡಾಕ್ಟರನ್ನು ಬೇಟೆಯಾಡಲು ಆತನಿಗೂ ಮನಸ್ಸುಎಂಬುದೊಂದು ಇರುತ್ತದೆಂಬುದನ್ನು ಮರೆಯಬಾರದು."

ಈ ಬಾರಿ ಅತ್ತಿಂದಿತ್ತ ನಡೆದಾಡಿದವನು ದೇವದಾಸನ್ ಪಿಳ್ಳೆ.

ನಡಿಗೆ ನಿಲ್ಲಿಸಿ, ಬಾಗಿಲುದಾಟಿ ಅವನು ತಮ್ಮಂದಿರು ಕೂತಿದ್ದ ಕೋಣೆಗೆ ಹೋದನು.

ಕೆಲವು ನಿಮಿಷಗಳ ಬಳಿಕ ದೇವದಾಸನ್ ಪಿಳ್ಳೆ ಹಿಂತಿರುಗಿದ.

"ಡಾಕ್ಟರ್, ನಿಮ್ಮ ಸ್ಥಿತಿ ನಮಗೆ ಅರ್ಥವಾಗುತ್ತಿದೆ. ನಮ್ಮ ವಿಕಲ್ಪವಾದ ಆಶಯವನ್ನು ಅವತರಿಸಿದುದಕ್ಕೆ ನಿಮ್ಮಲ್ಲಿ ಕ್ಷಮೆ ಬೇಡುತ್ತೇವೆ."

"ಓ ಅದು ಪರವಾಗಿಲ್ಲ ಬಿಡಿ. ಮನುಷ್ಯ ಚಿಂತಿಸುವುದರಿಂದ ಮಹಾನ್ ಆಗುತ್ತಾನೆ ಎಂದು ಕೇಳಿದ್ದೇವಲ್ಲ" ಡಾಕ್ಟರ್ ನಕ್ಕರು.

"ನ ಮಾನುಷಾತ್ ಶ್ರೇಷ್ಠತರಂ ಹಿ ಕಿಂಚಿತ್ ಎಂದೂ ಕೇಳಿದ್ದೇವೆ." ದೇವದಾಸನ್ ಪಿಳ್ಳೆಯೂ ತತ್ತ್ವಶಾಸ್ತ್ರ ಹೇಳಿ ನಕ್ಕನು.

ಪದ್ಮನಾಭ ಪಿಳ್ಳೆಯ ನಾಡಿ ಹಿಡಿದು ನೋಡಿ.

ಒಂದು ಇಂಜಕ್ಷನ್ ಚುಚ್ಚಿ ಎಲ್ಲಾ ಸರಿಯಾಗಿದೆ ಎಂದು ಹೇಳಿ ಡಾಕ್ಟರ್ ಹೊರಟು ಹೋದರು.

ಡಾಕ್ಟರ್ ಹೋದ ಬಳಿಕ ದೇವದಾಸನ್ ಪಿಳ್ಳೆ 'ನ ಮಾನುಷಾತ್ ಶ್ರೇಷ್ಠತರಂ ಹಿ ಕಿಂಚಿತ್' ಎಂದು ಮೆಲ್ಲಗೆ ಗುನುಗುನಿಸುತ್ತಾ ಟೆಲಿಫೋನಿನ ಬಳಿಗೆ ಸಾಗಿ ಯಾವುದೋ ಒಂದು ನಂಬರಿಗೆ ಡಯಲ್ ಮಾಡಿದ.

ಫೋನಿನ ಆ ಕಡೆ ಒಬ್ಬ ಸ್ತ್ರೀ.

"ಸೂಸಿ ತಾನೇ?"

"ಹೌದು, ಯಾರು?"

"ದೇವದಾಸನ್ ಪಿಳ್ಳೆ."

"ಓಹೋ ಹೇಗಿದ್ದೀರಿ?" ಸೂಸಿ ನಕ್ಕಳು.

"ಹೀಗೆ ಬದುಕಿದ್ದೇವೆ" ದೇವದಾಸನ್ ಪಿಳ್ಳೆ ಹೇಳಿದ "ನಾನು ಕರೆದದ್ದು ಆ ವಿಷಯಕ್ಕೆ."

"ಯಾವುದು?"




ನೆರವು? ಅದು ನಿಮಗಿಂತ ಸಣ್ಣಗಿರೊ ರೈತರಿಗೆ [illegible] ಗೊತ್ತಿಲ್ವೇನ್ರೀ?

"ಮೊದಲು ಹೇಳಿದ್ದೆನಲ್ಲ ಅಪ್ಪನ ವಿಷಯ. ಇವತ್ತೂ ಅಪ್ಪ ಆಟವಾಡಿಸಿದರು."

"ಆಮೇಲೆ?"

"ನಾನು ಎಲ್ಲರನ್ನೂ ಕರೆಸಿಯೂ ಬಿಟ್ಟೆ, ಆದರೆ ಸರಿಯಾಗಿ ಹೇಳೋದಾದರೆ ಅಪ್ಪ ಇನ್ನೂ ಗುಂಡುಕಲ್ಲು ತರಹ ಬಿದ್ದಿದ್ದಾರೆ."

"ನನ್ನ ಅಗತ್ಯವಿದೆಯೇ? ಡಾಕ್ಟರಿಲ್ಲವೇ?"

"ಅವರು ಒಪ್ಪುತ್ತಿಲ್ಲ, ಸೂಚ್ಯವಾಗಿ ಹೇಳಿ ನೋಡಿದೆ. ಸೂಸೀ ನೀನು ಸಹಾಯ ಮಾಡ ಬೇಕು. ಹೇಳಿದಂತೆ ಸರಿ ಮಾಡಿಬಿಡೋಣ..."

"ಈಗ..."

"ಏನು? ನಿನಗೂ ಡಾಕ್ಟರಂತೆ ಮನಸ್ಸಾಕ್ಷಿಯ ಕಿರಿಕಿರಿಯೇ? ಹಣದಿಂದ ಸರಿಯಾಗದ ಯಾವ ತರಹ ಕಿರಿಕಿರಿ ಇದೆ ಸೂಸೀ ಈ ಕಾಲದಲ್ಲಿ? ಹೇಳಿದಷ್ಟು ಹಣ ಕೊಡ್ತೀನಿ."

"ಯಾವಾಗ ಬೇಕು?"

"ನಾಳೆ ಬೆಳಿಗ್ಗೆ ರೆಡಿಯಾಗಿ ಬಾ, ಎಂಟು ಗಂಟೆ ಅಷ್ಟೊತ್ತಿಗೆ."

"ಸುದ್ದಿ ತಿಳಿಸಿ ಕರೆಸಬೇಕಾದವರನ್ನೆಲ್ಲಾ ಕರೆಸಿ ಬಿಡು ಹಾಗಾದ್ರೆ,' ಕೃತಜ್ಞತೆ ಹೇಳಿ ದೇವದಾಸನ್ ಪಿಳ್ಳೆ ಫೋನ್ ಕೆಳಗಿಟ್ಟ.

ಪದ್ಮನಾಭ ಪಿಳ್ಳೆಯ ಮನಸ್ಸಿನ ಮೂಲಕ ಒಂದು ಬೃಹತ್ ಉಷ್ಣಜಲಪ್ರವಾಹ ಉಕ್ಕಿ ಹರಿ ಯಿತು. ಒಟ್ಟಾರೆ ಬೆವೆತರು, ಪ್ರಯಾಸದಿಂದ ಕಣ್ತೆರೆದಾಗ ಕೋಣೆಯಲ್ಲಿ ಯಾರೂ ಇಲ್ಲ, ಕಾವಲಿನ ಹುಡುಗನೂ ಇಲ್ಲ.

ರಾತ್ರಿ ಹಿರಿಯ ಮಗನೂ ಕಿರಿಯ ಮಕ್ಕಳೂ ಬಂದು ಕರೆದರು. ಕಣ್ಣು ತೆರೆಯಬಹುದಾಗಿದ್ದರೂ ತೆರೆಯಲಿಲ್ಲ. ಸತ್ತಿಲ್ಲ ಎಂದು ತಿಳಿಯಲು ಶ್ವಾಸೋಚ್ಛ್ವಾಸ ಮಾತ್ರ ಸಾಕಲ್ಲ.

ಮಂಚದ ತಲೆಭಾಗದಲ್ಲಿದ್ದ ಟೆಲಿಫೋನ್‌ನಲ್ಲಿ ದೇವದಾಸನ್, ಅಪ್ಪನಿಗೆ ಸೀರಿಯಸ್ಸಾಗಿದೆ ಎಂದು ಯಾರ್ಯಾರಿಗೋ ಹೇಳುತ್ತಿರುವುದು ಕೇಳಿಸಿತು.

ರಾತ್ರಿ ಪದ್ಮನಾಭ ಪಿಳ್ಳೆ ನಿದ್ರಿಸಲಿಲ್ಲ. ಮಂಕಾದ ಬೆಳಕಿನೆಡೆಗೆ ಅವರು ದುರುಗುಟ್ಟಿ

ನೋಡಿ ಮಲಗಿದ್ದರು.

"ನಾಳೆ ನಾನು ಸಾಯುತ್ತೇನೆ... ನಾಳೆ ನನ್ನ ಮಕ್ಕಳು ನನ್ನನ್ನು ಕೊಲೆ ಮಾಡುವರು... ಕೈಯಲ್ಲಿ ಅಂಗಾತ ಮಲಗಿಸಿ ಹಿಡಿದು ಪುಟ್ಟಾ ಪಿನ್ನನ್ನು ಗುಮ್ಮಸಿಗೆ ಕೊಡಲೇ ಎಂಬ ಪ್ರಶ್ನೆಗೆ ಕಣ್ತೆರೆದು ಕಿಲಕಿಲ ನಕ್ಕ ಈ ಮಕ್ಕಳು, ಪ್ರತಿ ಯೊಬ್ಬರೂ ನಾಳೆ ನನ್ನನ್ನು ಕೈಯಲ್ಲೆತ್ತಿ ಹಿಡಿದು ಆ ಅಗೋಚರವಾದ ಮರಣದೆದುರಿಗೆ ಬಿಸು ಡಲು ಬಯಸುತ್ತಿರುವರು."

ಪದ್ಮನಾಭ ಪಿಳ್ಳೆ ರಾತ್ರಿಯೆಲ್ಲಾ ಉದ್ವೇಗ ದಿಂದ ಏನೇನೋ ಹೇಳುತ್ತಿದ್ದರು. ಬಹಳ ಕಾಲ ದಿಂದ ವಾಲಿಗೆ ಮರಗಟ್ಟಿ ಹೋಗಿದ್ದುದರಿಂದ ಅವರ ಭಾಷೆಗೆ ಶಬ್ದವೇ ಇರಲಿಲ್ಲ.

ರಾತ್ರಿಯೆಲ್ಲಾ ಅವರು ಮೇಲೇಳಲು ಶ್ರಮಿ ಸುತ್ತಿದ್ದರು. ಇಳಿದು ಓಡಲು ತಹತಹಿಸುತ್ತಿ ದ್ದರು. ಪಕ್ಕಕ್ಕೆ ಹೊರಳಿ ಮಲಗಲೂ ಪರರ ಸಹಾಯ ಬೇಕಿದ್ದ ಆ ರೋಗಿ ಮರಣವನ್ನು ಎದುರಿಗೆ ಕಂಡು ರೋದಿಸಿದರು.

ಆದರೆ, ರಾತ್ರಿಯ ಅವರೋಹಣ ಪರ್ವದಲ್ಲಿ ಯಾವಾಗಲೋ ಅಲ್ಲಾಡಲಾಗದೆ ಮಲಗಿದ್ದ ಪದ್ಮನಾಭ ಪಿಳ್ಳೆ ಎಂಬ ಆ ಪಾರ್ಶ್ವವಾಯು ರೋಗಿ ಮಂಚದಿಂದ ತೆವಳತೊಡಗಿದರು. ತೆವಳಿ ಮಂಚದಿಂದ ಕೆಳಕ್ಕೆ ಉರುಳಿದರು. ಅಲ್ಲಿಂದ ಪುನಃ ತೆವಳಿದರು. ಟೀಪಾಯಿಯ ಬದಿಯಿಂದ ಮೇಜಿನ ಬಳಿ ಬಂದ ಅವರು ಕೈ ಚಾಚಿ ಟೆಲಿಫೋ ನಿನ ಬಳಿ ತಲಪಿದರು.

ಬಹಳ ಹೊತ್ತಿನ ಶ್ರಮದಿಂದಾಗಿ ಟೆಲಿಫೋನ್ ಕೈಗೆ ಸಿಕ್ಕಿತು. ಬಳಿಕ ಡಯಲನ್ನು ತಡವುತ್ತಾ ಮೂರಂಕೆಗಳನ್ನು ತಿರುಗಿದರು.

ಪೋಲೀಸ್ ಕಂಟ್ರೋಲ್ ರೂಮಿನಲ್ಲಿ ಗಂಟೆ ಬಾರಿಸಿದೊಡನೆ ಅಲ್ಲಿ ತೂಕಡಿಸುತ್ತಿದ್ದ ಪೋಲೀಸ್ ಪೇದೆ ಸಾವನ್ನು ಕಂಡಂತೆ ಬೆಚ್ಚಿ ಬಿದ್ದ.

"ಯಾರು?" ಪೋಲೀಸ್ ಕೇಳಿದ.

ಪದ್ಮನಾಭ ಪಿಳ್ಳೆ ಬಾಯಿ ತೆರೆಯಲು ಶ್ರಮಪಟ್ಟು, ಸತ್ತ ನಾಲಿಗೆಯನ್ನು ಹಿಡಿದೆಳೆ ಯಲು ಬಹುವಾಗಿ ಯತ್ನಿಸಿ, ದೀರ್ಘವಾಗಿ ಶ್ವಾಸೋಚ್ಛ್ವಾಸ ಮಾಡುತ್ತಾ ಹಾಗೇ ಮಲ- ಗಿದರು.

ಬರೀ ಸಿಮೆಂಟ್ ನೆಲದಲ್ಲಿ ಹೊರಳಿ ಮಲಗಿದ್ದ ಪದ್ಮನಾಭ ಪಿಳ್ಳೆಯನ್ನು ಶೀತಲತೆ ಆಕ್ರಮಿಸ ತೊಡಗಿತು.

ಬಹಳ ಹೊತ್ತಾದರೂ ದೀರ್ಘವಾದ ಶ್ವಾಸೋಚ್ಛ್ವಾಸ ಮಾತ್ರ ಕೇಳಿದ ಪೋಲೀಸ್ ಹೆದರಿ ಕಣ್ಬಿಟ್ಟು ಕುಳಿತ.

"ಹೂ ಆರ್ ಯು?" ಪೋಲೀಸ್ ಭಾಷೆ ಬದ ಲಾಯಿಸಿ ಕಿರಿಚಿದ.

"ಹೂ ಆರ್ ಯು?" ಪೋಲೀಸ್ ಬಹಳ




"ಹೆದ್ದೆ, ಮದುವೇಲಿ ಗಂಡ-ಹೆಂಡ್ತಿ ಕೈ-ಕೈ ಹಿಡಿಮೋಳು ವಗಾಕೊಂತ ಗೊತ್ತೇಲ್ಲಾ ಚಿಂಗ ಕುತ್ಗೆಗೆ ವೊದ್ದು ಹ್ತೆಲ ನಾಸ್ತ್ರ ಕೈಯಿಲ್ಗೊಂಡ ಸ್ತಾರಲ್ಲ... ಹಾಗೇ ಇದು..."

ಹೊತ್ತಿನ ಬಳಿಕ ಪುನಃ ಅಟ್ಟಹಾಸ ಮಾಡಿದ.

"ಹೂ ದ ಹೆಲ್ ಆರ್ ಯೂ?" ಪೋಲೀಸ್ ಕಿರುಚುತ್ತಲೇ ಇದ್ದ.

ಉತ್ತರ ಶ್ವಾಸೋಚ್ಛ್ವಾಸ ಮಾತ್ರ.

ಪೋಲೀಸ್ ತನ್ನ ರಾತ್ರಿ ಡ್ಯೂಟಿಯ ಸಹೋದ್ಯೋಗಿಗಳಿಗೆ ಟೆಲಿಫೋನ್ ನೀಡಿದ.

ಅವರೂ ಅದೇ ಪ್ರಶ್ನೆಯನ್ನು ಪುನರುಚ್ಚರಿಸಿದರು.

ಉತ್ತರ ಶ್ವಾಸೋಚ್ಛ್ವಾಸ ಮಾತ್ರ.

ಅವರಲ್ಲೊಬ್ಬ ಇನ್ನೊಂದು ಟೆಲಿಫೋನ್‌ನಿಂದ ಎಕ್ಸ್‌ಚೇಂಜನ್ನು ಸಂಪರ್ಕಿಸಿದ.

ಅಲ್ಲಿಂದ ಸಿಕ್ಕ ಅಡ್ರೆಸ್ಸನ್ನು ಆಧರಿಸಿ ಚುಮು ಚುಮು ನಸುಕಿನ ಹೊತ್ತಿನಲ್ಲಿ ಒಂದು ಪೋಲೀಸ್ ಜೀಪ್ ಪದ್ಮನಾಭ ಪಿಳ್ಳೆಯ ಮಗ ದೇವದಾಸನ್ ಪಿಳ್ಳೆಯ ಮನೆಯ ಮುಂದೆ ಬಂದು ನಿಂತಿತು.

ನಿದ್ದೆಗಣ್ಣಲ್ಲಿ ಹೊರಕ್ಕೆ ಬಂದ ದೇವದಾಸನ್ ಪಿಳ್ಳೆ ಪೋಲೀಸರನ್ನು ಕಂಡು ಸ್ವಲ್ಪ ಹೆದರಿದ. ಆದರೂ ಮನಸ್ಥೈರ್ಯ ಕಳೆದುಕೊಳ್ಳದೆ ಅವರನ್ನು ಎದುರುಗೊಂಡ.

"ನೀವು ಫೋನ್ ಮಾಡಿದಿರಾ?" ಪೋಲೀಸ್ ಕೇಳಿದ.

"ಇಲ್ಲವಲ್ಲ." ದೇವದಾಸನ್ ಪಿಳ್ಳೆ.

"ಮಧ್ಯ ರಾತ್ರಿಯಿಂದಲೂ ಕಂಪ್ಲೇಂಟ್ ರೂಮಿಗೆ ಫೋನ್ ಮಾಡಿ ಮಾತಾಡದೇ ಇರೋ ತಮಾಷೆ ಚೆನ್ನಾಗಿದೆ. ನೋಡಿ, ಬಹುಶಃ, ಈಗಲೂ ಟೆಲಿಫೋನ್ ಲೈನ್ ತನ್ನ ಸಂಪರ್ಕ ಕಡಿದುಕೊಂಡಿರಲಾರದು. ಪೋಲೀಸ್ ಕಂಪ್ಲೇಂಟ್ ರೂಂ ಮಕ್ಕಳಾಟಿಕೆ ಆಗಿದೆಯೇನು ನಿಮಗೆ?" ಪೋಲೀಸರಲ್ಲಿ ಒಬ್ಬನ ಧ್ವನಿ ಗುಡುಗಿತು.

"ಇಲ್ಲಿಂದ ಅಲ್ಲವಲ್ಲ ಮಿಸ್ಟರ್" ದೇವದಾಸನ್ ಹೇಳಿದ. "ಭಾನುಮತಿ, ಜಸ್ಟ್ ಸೀ ದ ಫೋನ್ ಇನ್ ಅವರ್ ರೂಂ" "ನಥಿಂಗ್ ರಾಂಗ್." ಭಾನುಮತಿ ಮೇಲಿನಿಂದ ಹೇಳಿದಳು.

"ಯಾರೋ ಇವರಿಗೆ ಇಲ್ಲಿಂದ ಫೋನ್ ಮಾಡಿದರಂತೆ." ದೇವದಾಸನ್ ಹೇಳಿದ. ಬಳಿಕ ತಿರುಗಿ ಪೋಲೀಸರಿಗೆ ಒಂದ್ನಿಮಿಷ ನಿಲ್ಲಿ ಎಂದು ಹೇಳಿ ಒಳಗೆ ಹೋದನು.

ಅಪ್ಪನ ಕೋಣೆಯ ಬಾಗಿಲನ್ನು ತೆರೆದ ದೇವದಾಸನ್ ಪಿಳ್ಳೆ ಬೆಚ್ಚಿದ.

ಅಪ್ಪ ಕೆಳಗೆ ನೆಲದಲ್ಲಿ ಮೈಚಾಚಿ ಮಲಗಿದ್ದಾರೆ. ಕಿವಿಗಾನಿಸಿ ಹಿಡಿದ ಟೆಲಿಫೋನ್. ಕಣ್ಮುಚ್ಚಿ, ಬಾಯಿ ಸ್ವಲ್ಪ ತೆರೆದು, ಏನೋ ಹೇಳಲು ಯತ್ನಿಸುತ್ತಾ...

ಅಪ್ಪನನ್ನು ಹಿಡಿದು ಎಬ್ಬಿಸಲು ಹೊರಟ ದೇವದಾಸನ್ ಪಿಳ್ಳೆಯ ಕೈಗಳಿಂದ ತಣ್ಣನೆ ಆ ಶವ ಮುದುಡಿ ಮುರಿದು ನೆಲಕ್ಕೆ ಬಿತ್ತು. ✲



## ಫಿಲಡೆಲ್ಫಿಯದ ಉದ್ಯಮಿಯೊಬ್ಬನ ಉಯಿಲಿದು

"ನನ್ನ ವಳಿಗೆ ಆಕೆಯ ಪ್ರಿಯಕರನನ್ನು ಬಿಟ್ಟಿದ್ದೇನೆ—ಜೊತೆಗೆ ಆಕೆ ತಿಳಿಯದಂತೆ ನಾನು ಮೂರ್ಖನಲ್ಲವೆಂಬ ತಿಳುವಳಿಕೆಯನ್ನೂ ಕೂಡ. ಮಗನಿಗೆ ಬದುಕಲು ಬೇಕಾದ ದುಡಿತದ ಸಂತಸವನ್ನು ಬಿಟ್ಟಿದ್ದೇನೆ. ಕಳೆದ ೨೫ ವರ್ಷಗಳಿಂದ ಆ ಸಂತಸ ನನ್ನದೆಂದೇ ಆತ ತಿಳಿದಿದ್ದ. ತಪ್ಪು ತಿಳುವಳಿಕೆ ಆತನದು. ಮಗಳಿಗೆ ಒಂದು ಲಕ್ಷ ಡಾಲರುಗಳನ್ನು ಬಿಟ್ಟಿರುವೆ. ಆಕೆಗೇ ಅದರ ಅವಶ್ಯಕತೆ ಉಂಟಾಗಬಹುದು. ಯಾಕೆಂದರೆ, ಆಕೆಯು ಗಂಡ ಮಾಡಿದ ಒಂದೇ ಒಂದು ಸಣ್ಣ ಉದ್ಯೋಗವೆಂದರೆ ನನ್ನ ಮಗಳನ್ನು ಮದುವೆಯಾದದ್ದು." (ಕೃಪೆ: 'ಸಂಡೇ')

# ಇದುವೆ ಜೀವ ಇದು ಜೀವನ

ಅದು ಸಾಯಂಕಾಲದ ಸಮಯ. ನಾನು ಮತ್ತು ನನ್ನ ಸ್ನೇಹಿತರು ವಾಯುಸೇವನೆಗೆ ಹೊರಟಿದ್ದೆವು. ಆ ದಿನ ಮಧ್ಯಾಹ್ನ ಮಳೆ ಬಿದ್ದು ಸುತ್ತಮುತ್ತಲಿನ ಬಯಲೆಲ್ಲ ಸ್ವಚ್ಛವಾಗಿ ಕಾಣುತ್ತಿತ್ತು. ನಾವು ಯಾವುದೋ ವಿಷಯವನ್ನು ಚರ್ಚಿಸುತ್ತ ನಡೆದಿದ್ದೆವು. ಸ್ವಲ್ಪ ಸಮಯದ ನಂತರ ನಮ್ಮೆದುರಿನಲ್ಲಿ ಯುವ ದಂಪತಿಗಳೊಬ್ಬರು ಕೈಗಳನ್ನು ಹಿಡಿದುಕೊಂಡು ಬರುತ್ತಿರುವುದನ್ನು ಕಂಡೆವು. ಗಂಡು ಕಪ್ಪು ಕನ್ನಡಕ ಧರಿಸಿದ್ದ. ನಮ್ಮ ಹಿಂದೆ ಬರುತ್ತಿದ್ದ ಪಡ್ಡೆ ಹುಡುಗರು ಆ ದೃಶ್ಯವನ್ನು ನೋಡಿ ಆ ಜೋಡಿಗೆ ಕೇಳುವಂತೆ ಜೋರಾಗಿ,

"ನೋಡ್ರೊ...ಅವ್ರು ಮೆರವಣ್ಗೆ ಬತ್ತಾವ್ರೆ. ಪಾಪ, ಹನಿಮೂನಿಗೆ ಹೋಗಿಲ್ಲ ಅಂತ ಕಾಣುತ್ತೆ." ಎಂದು ಒಬ್ಬ ಅಂದರೆ,

"ಎಯ್... ಯಾರ್ನೋಡ್ತಾರೆ... ಬಿಡೊ ಈ ಹಳ್ಳೀಲಿ..." ಎಂದಿತು ಇನ್ನೊಂದು ಧ್ವನಿ...

"ಪಟ್ಣಕ್ಹೋಗಿ ಯಾವ್ದಾದ್ರು ಪಾರ್ಕ್‌ನಲ್ಲಿ ಅಡ್ಡಾಡ್ಬಾರ್ದ... ಇಲ್ಲಿಗ್ಯಾಕ್ಬಂದ್ರೊ!" ಎಂದಿತು ಮತ್ತೊಂದು ಧ್ವನಿ. ನಂತರ ಎಲ್ಲರೂ ಗಹಗಹಿಸಿ ನಗುತ್ತ, ಸಿಳ್ಳನ್ನು ಹಾಕತೊಡಗಿದರು. ಗುಡುಗಿ ಮಳೆ ಬಂದಂತೆ ನಮ್ಮ ಮುಖಗಳ ಮೇಲೆ ಮುಗುಳ್ನಗೆ ಮಿಂಚಿ ಮಾಯವಾಯಿತು. ಇದೆಲ್ಲವನ್ನು ಕೇಳಿಸಿಕೊಂಡ ಆ ಹೆಣ್ಣು ನಾಚಿಕೆಯಿಂದ ತಲೆ ತಗ್ಗಿಸಿದಳು. ಸ್ವಲ್ಪ ದೂರ ಬರುವುದರೊಳಗಾಗಿ ಆಕೆಯ ಗಂಡ ದೊಪ್ಪನೆ ನೆಲದ ಮೇಲೆ ಬಿದ್ದ. ಆತನ ಕಪ್ಪು ಕನ್ನಡಕ ಸ್ವಲ್ಪ ದೂರದಲ್ಲಿದ್ದ ಕಲ್ಲಿಗೆ ಬಡಿದು ಒಡೆಯಿತು ಕೆಳಕ್ಕೆ ಬಿದ್ದ ತನ್ನ ಗಂಡನನ್ನು ಮೇಲೆತ್ತಲು ಆತನ ಸಮೀಪಕ್ಕೆ ಧಾವಿಸಿದಳು ಅಷ್ಟರಲ್ಲಿ ನಾವೂ ಅಲ್ಲಿಗೆ ಹೋಗಿ ಆತನನ್ನು ಮೇಲೆತ್ತಿದೆವು. ಆತನ ಮೊಣಕಾಲಿಗೆ ಪೆಟ್ಟು ಬಿದ್ದು ರಕ್ತ ಬಂದಿತ್ತು. ನಮಗಾದ ಮತ್ತೊಂದು ಆಶ್ಚರ್ಯವೆಂದರೆ, ಆತ ಕುರುಡ. ಕಣ್ಣಿಲ್ಲದ ಮುಖ ವಿಕಾರವಾಗಿ ಕಾಣದಿರಲೆಂದು ಆತ ಕಪ್ಪು ಕನ್ನಡಕವನ್ನು ಧರಿಸಿದ್ದ.

ಕಣ್ಣಿಲ್ಲದ ಗಂಡನಿಗೆ ಕಣ್ಣಾಗಿ ಮತ್ತು ಆತನ ಊರುಗೋಲಾಗಿ ನಡೆಸುತ್ತಿದ್ದ ಆ ಸಾಧ್ವೀಮಣಿ ತನ್ನ ಗಂಡನ ಅವಸ್ಥೆಯನ್ನು ನೋಡಿ,

"ತಪ್ಪು ನಂದೇರಿ..., ಆ ಹುಡುಗ್ರಾಡ್ತಿದ್ ಮಾತ್ಕೇಳಿ, ನನ್ಗೆ ನಾಚ್ಕೆಯಾಗಿ, ನಿಮ್ಕೈ ಬಿಟ್ಟಿದ್ದಕ್ಕೆ. ನಿಮ್ಗ್ ಈ ಅವಸ್ಥೆ ಬಂದದ್ದು; ನಾನ್, ನಿಮ್ಕೈ ಬಿಡಬಾರ್ದಾಗಿತ್ತು" ಎಂದು ಆಕೆ ಮಗುವಿನಂತೆ ಗಳಗಳನೆ ಅತ್ತುಬಿಟ್ಟಳು.

ಆಕೆಯನ್ನು ಯಾವ ರೀತಿ ಸಮಾಧಾನ ಪಡಿಸಬೇಕೆಂಬುದೇ ನಮಗೆ ಹೊಳೆಯಲಿಲ್ಲ. ಈ ಘಟನೆಗೆಲ್ಲ ಕಾರಣರಾದ ಆ ಪಡ್ಡೆ ಹುಡುಗರು, ಇದಾವುದರ ಪರಿವೆಯೂ ಇಲ್ಲವೆಂಬಂತೆ ಅಲ್ಲಿಂದ ಆಗಲೇ ಕಂಬಿ ಕಿತ್ತಿದ್ದರು!

—ಎಚ್. ಗವಿಸಿದ್ದಯ್ಯ

ನಾನೊಮ್ಮೆ ಕಾರ್ಯನಿಮಿತ್ತ ಮದ್ರಾಸಿಗೆ ಹೋಗಿದ್ದಾಗ ಅಕಸ್ಮಿಕವಾಗಿ ಚೈನಾ ಬಜಾರಿನಲ್ಲಿ ನನ್ನ ಪ್ರಾಣಮಿತ್ರನ ಭೇಟಿ ಆಯಿತು. ಅದೂ ೨೦ ವರ್ಷಗಳ ನಂತರ! ನಾವಿಬ್ಬರೂ, ಒಂದೇ ಊರಿನ ಚೆಡ್ಡಿ ಗೆಳೆಯರು ಎ. ಬಿ...ಕಲಿಯುವುದರಿಂದ, ಬಿ. ಎ. ಮುಗಿಸುವವರೆಗೂ ಜೊತೆಯಾಗಿಯೇ ಹಿಂದಿನ ಬೆಂಚಿನ ಖಾಯಂ ಜೋಡಿಯಾಗಿದ್ದವರು. ಉದ್ಯೋಗಗಳು ನಮ್ಮನ್ನು ಬೇರ್ಪಡಿಸಿದ್ದವು. ಹತ್ತು ವರ್ಷಗಳ ಹಿಂದೆ ನಡೆದ ಅವನ ಅಂತರ್ಜಾತೀಯ ಪ್ರೇಮ ವಿವಾಹಕ್ಕೂ ನನಗೆ ಹೋಗಲಾಗಿರಲಿಲ್ಲ.

ಅವನ ಬಲವಂತದ ಆತ್ಮೀಯ ಕರೆಗೆ ತಲೆ ಬಾಗಿ ಅವನ ಮನೆಯಲ್ಲಿ ಎರಡು ದಿನಗಳವರೆಗೆ ಇರಬೇಕಾಯಿತು. ಆತ ಪ್ರೌಢಶಾಲೆಯ ಶಿಕ್ಷಕ. ಆತನ ಪತ್ನಿ ಒಂದು ರಾಷ್ಟ್ರೀಕೃತ ಬ್ಯಾಂಕ್ ಉದ್ಯೋಗಿ. ಅವರ ಅಮರ ಪ್ರೇಮದ

ಜೀವಂತ ಬೊಂಬೆಯೇ ಆರು ವರ್ಷದ ಮುದ್ದು ಮಗಳು ತಾರಾ. ತಾರಾ ಮಂಡಲದಲ್ಲಿರುವ ತಾರೆಗಳನ್ನೂ ಧಿಕ್ಕರಿಸುವ ಮಾತಿನ ಮಲ್ಲಿ, ಆಕೆ.

ಆ ಸಂಜೆ ನಾವು ಮೂವರೂ ಕಾಫಿ ಸೇವನೆಯೊಂದಿಗೆ ಹರಟೆ ಹೊಡೆಯುತ್ತಿದ್ದಾಗ, ಹೊರಗಿನಿಂದ ಓಡಿ ಬಂದ ತಾರಾ ತಾಯಿಯನ್ನು ಕರೆದು, "ಮಮ್ಮಿ, ನೀನು ಡ್ಯಾಡಿಯನ್ನು ಮೊಟ್ಟ ಮೊದಲಾಗಿ ಎಲ್ಲಿ ನೋಡಿದ್ದು?" ಎಂದು ಕೇಳಿದಳು.

"ಬೇಬಿ, ಒಂದು ಪಿಕ್‌ನಿಕ್ ಪಾರ್ಟಿಯಲ್ಲಿ!"

"ಆಗ ನಿನ್ನ ಜೊತೆಯಲ್ಲಿ ನಾನೂ ಇದ್ದೆನೋ?" ತಾರಾಳ ಈ ಪ್ರಶ್ನೆಯಿಂದ ಸ್ವಲ್ಪ ವಿಚಲಿತಳಾದಳು ತಾಯಿ.

ಆಕೆ ಮಗಳಿಗೇನು ಉತ್ತರ ಕೊಡಬಹುದೆಂದು ಆಕೆಯನ್ನೇ ನೋಡತೊಡಗಿದೆವು. "ಮರಿ, ನಾನು ಹೋದಾಗ ನೀನು ಇರಲಿಲ್ಲ. ಆದರೆ ನಾವು ವಾಪಸಾದಾಗ ನೀನು ನಮ್ಮ ಜೊತೆಯಲ್ಲಿ ಇದ್ದೆ!" ಎನ್ನುತ್ತಾ ಗಂಡನ ಮುಖವನ್ನು ನೋಡಿ ನಕ್ಕಳು.

–ಪಡುಬಿದ್ರಿ ಪ್ರಭಾಕರರಾಯ

ಅಂದು ಶನಿವಾರವಾಗಿದ್ದು ಮಾರನೇ ದಿನ ರಜಾ ದಿನವಾಗಿದ್ದರಿಂದ ಉಳಿದ ಆಫೀಸಿನ ಕೆಲಸವನ್ನು ಮುಗಿಸುವ ತರಾತುರಿಯಲ್ಲಿದ್ದೆ. ಸಂಜೆ ಆಫೀಸಿನ ವೇಳೆ ಮುಗಿಯುವ ಹೊತ್ತಿಗೆ ನಮ್ಮ ಜವಾನ ವೆಂಕಟೇಶ ಬಂದು ನನ್ನ ಸಹೋದ್ಯೋಗಿ ಚಂದ್ರುವಿನ ಬಗ್ಗೆ ವಿಚಾರಿಸಿದ. ಆ ವೇಳೆಯಲ್ಲಿ ಅವರು ಕಾರ್ಯನಿಮಿತ್ತ ಬೇರೆ ಶಾಖೆಗೆ ಹೋಗಿದ್ದರಿಂದ ತಮ್ಮ ಸ್ಥಳದಲ್ಲಿರಲಿಲ್ಲ. ಆಗ ವೆಂಕಟೇಶ ನನ್ನ ಕೈಗೆ ಇಪ್ಪತ್ತು ರೂಪಾಯಿ ಕೊಟ್ಟು "ಚಂದ್ರುವಿನಿಂದ ಮೂವತ್ತುರೂಪಾಯಿ ಸಾಲ ಕೇಳಿದ್ದೆ; ಐವತ್ತು ರೂಪಾಯಿನ ನೋಟೊಂದನ್ನು ಕೊಟ್ಟು ಬಾಕಿ ಹಣವನ್ನು ಚಿಲ್ಲರೆ ಮಾಡಿಸಿ ಕೊಡಲು ಹೇಳಿದ್ದರು. ಅದರಂತೆ ಮೂವತ್ತು ರೂಪಾಯಿ ಇಟ್ಟುಕೊಂಡು ಉಳಿದ ಇಪ್ಪತ್ತು ರೂಪಾಯಿ ಕೊಡಬೇಕಿತ್ತು. ಅವರು ಬಂದ ಮೇಲೆ ಕೊಟ್ಟುಬಿಡಿ" ಎಂದು ಹೇಳಿ ಹೊರಟು ಹೋದ. ಹಲವಾರು ಹವ್ಯಾಸಗಳಿಗೆ ದಾಸನಾಗಿದ್ದ ಆತ ಎಲ್ಲರಿಂದಲೂ ಆಗಾಗ ಸಾಲ ಪಡೆದು ಹಿಂದಿರುಗಿಸುತ್ತಿದ್ದುದರಿಂದ ಇದೊಂದು ಮಾಮೂಲು ವಿಷಯವೆಂದು ಸುಮ್ಮನಾದೆ. ಸ್ವಲ್ಪ ಸಮಯದ ಬಳಿಕ ಚಂದ್ರು ತಮ್ಮ ಸ್ಥಳಕ್ಕೆ ಹಿಂದಿರುಗಿ ಬಂದಾಗ, ವಿಷಯ ತಿಳಿಸಿ, ಇಪ್ಪತ್ತು ರೂಪಾಯಿ ಕೊಟ್ಟೆ. ಅವರು ಸ್ವಲ್ಪ ಆಶ್ಚರ್ಯದಿಂದ "ವೆಂಕಟೇಶ ನಿಜಕ್ಕೂ ಇಪ್ಪತ್ತು ರೂಪಾಯಿ ಕೊಟ್ಟನೇ?" ಎಂದು ಕೇಳಿದರು. ಹೌದೆಂದೆ. "ನಾನು ಆತನಿಗೆ ಕೊಟ್ಟಿದ್ದು ನೂರು ರೂಪಾಯಿ ನೋಟನ್ನು. ಎಪ್ಪತ್ತು ರೂಪಾಯಿ ಹಿಂದಿರುಗಿಸಬೇಕಾಗಿತ್ತು" ಎಂದು ಅವರು ಹೇಳಿದಾಗ, ಆಶ್ಚರ್ಯಗೊಳ್ಳುವ ಸರದಿ ನನ್ನದಾಯಿತು. ಅನಗತ್ಯವಾಗಿ ಸಂಶಯದ ಸಂದರ್ಭದಲ್ಲಿ ಸಿಲುಕಿದ್ದಕ್ಕೆ ಬೇಸರವೂ ಆಯಿತು. ಆಗ ಚಂದ್ರುವೇ ನನ್ನನ್ನು ಸಮಾಧಾನಪಡಿಸಿ, ಸೋಮವಾರ ವಿಚಾರಿಸೋಣ ಎಂದು ಹೇಳಿದರು.

ಸೋಮವಾರ ವೆಂಕಟೇಶ ಬಂದಾಗ, ಇಬ್ಬರೂ ಒಟ್ಟಿಗೆ ಆತನನ್ನು ಕರೆದು ವಿಚಾರಿಸಿದೆವು. ಆತ, "ಬಹಳ ಅಗತ್ಯವಾಗಿ ಹೆಚ್ಚಿನ ಹಣ ಬೇಕಾಗಿದ್ದರಿಂದ ಉಳಿದ ಐವತ್ತು ರೂ.ಗಳನ್ನೂ ನಾನೇ ಇಟ್ಟುಕೊಂಡೆ. ಈ ವಿಷಯವನ್ನು ಮೊನ್ನೆ ತಿಳಿಸಿದ್ದರೆ ನೀವು ಒಪ್ಪುತ್ತಿರಲಿಲ್ಲವೆಂದುಕೊಂಡು ಹೇಳಲಿಲ್ಲ. ಮುಂದಿನ ಸಂಬಳದಲ್ಲಿ ಹಿಂದಿರುಗಿಸುತ್ತೇನೆ" ಎಂದಾಗ, ನನಗೆ ನಿರಾಳವಾಗಿ ಉಸಿರಾಡುವಂತಾಯಿತು.

'ನಾನು ಶನಿವಾರ ಇವರ ಕೈಗೆ ಕೊಟ್ಟಿದ್ದು ಎಪ್ಪತ್ತು ರೂಪಾಯಿಗಳನ್ನೇ' ಎಂದೇನಾದರೂ ಆತ ಹೇಳಿಬಿಟ್ಟರೆ? ಎಂಬ ಯೋಚನೆಯಲ್ಲಿ ಆ ಭಾನುವಾರ ನನ್ನ ಪಾಲಿಗೆ ಮಾನಸಿಕ ವೇದನೆಯ ದಿನವಾಗಿತ್ತು. ಏಕೆಂದರೆ, ಇಲ್ಲಿ ಹಣದ ಮೊತ್ತಕ್ಕಿಂತ ನಂಬಿಕೆಯ ಹಾಗೂ ಸ್ನೇಹದ ಮೊತ್ತ ಹೆಚ್ಚಾಗಿತ್ತು.

–ಪಿ. ಅರವಿಂದ

ಸದ್ಯದ ಮಟ್ಟಿಗೆ ಹೇಳುವುದಾದರೆ ಭಾರತದಲ್ಲಿ
ಕೆಲವು ಮಟ್ಟಿಗೆ ಹೌದು, ಕೆಲವು ಮಟ್ಟಿಗೆ ಅಲ್ಲ.

# ಆತ್ಮಹತ್ಯೆ ಅಪರಾಧವೇ?

ಸಂಜೀವ

ಭಾರತೀಯ ದಂಡ ಸಂಹಿತೆಯ ೩೦೯ನೇ ಕಲಮಿನ ಪ್ರಕಾರ ಆತ್ಮಹತ್ಯೆ ಮಾಡಿಕೊಳ್ಳಲು ಯತ್ನಿಸುವುದು ಅಪರಾಧವಾಗಿದೆ. ಕಾನೂನಿನ ಈ ಸೂಕ್ಷ್ಮಾಂಶವನ್ನು ಪ್ರಶ್ನಿಸಿ ಮನುಷ್ಯನಿಗೆ ಆತ್ಮಹತ್ಯೆ ಹಕ್ಕೇ ಆಗಬೇಕು ಎಂಬರ್ಥ ಬರುವಂತಹ ಲೇಖನವನ್ನು ಕನ್ನಡದಲ್ಲಿ ಪ್ರಾಯಶಃ ಶ್ರೀ ರಂಗನಾಥ ದಿವಾಕರರು ೧೯೭೨ರಲ್ಲಿ 'ಸಂಯುಕ್ತ ಕರ್ನಾಟಕ'ದಲ್ಲಿ ಬರೆದಿದ್ದರು. ಆಗ ಅದು ಪತ್ರಿಕೆಯ ಪ್ರಾಜ್ಞ ಓದುಗರಲ್ಲಿ ಸಾಕಷ್ಟು ಆಸಕ್ತಿಯನ್ನು ಕೆರಳಿಸಿ, ಕೆಲ ದಿನ ಪತ್ರಿಕಾವಲಯದಲ್ಲಿ ಚರ್ಚೆಯ ವಿಷಯವಾಗಿ ಕಾವು ಇಳಿದ ನಂತರ ತಣ್ಣಗಾಗಿಬಿಟ್ಟಿತ್ತು. ಆದರೆ ದಿಲ್ಲಿ ಮತ್ತು ಮುಂಬಯಿ ಶ್ರೇಷ್ಠ ನ್ಯಾಯಾಲಯಗಳು ಈ ಕಲಮಿಗೆ ಸಂಬಂಧಿಸಿದಂತೆ ಇತ್ತೀಚೆ ನೀಡಿದ ತೀರ್ಪುಗಳು ಈ ಕಲಮಿನ ಸಿಂಧುತ್ವಕ್ಕೇ ಸವಾಲೊಡ್ಡಿವೆ.

ಕಳೆದ ವರ್ಷ ಆಗ ದಿಲ್ಲಿಯ ಶ್ರೇಷ್ಠ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಯಾಗಿದ್ದ ಶ್ರೀ ರಾಜಿಂದರ ಸಾಚಾರವರು, ಆತ್ಮಹತ್ಯೆಗೆ ಯತ್ನಿಸಿ ವಿಫಲರಾಗಿದ್ದವರ ವಿರುದ್ಧ ದಾಖಲು ಮಾಡಿದ್ದ ಮೊಕದ್ದಮೆಗಳನ್ನೆಲ್ಲ ಕಿತ್ತೊಗೆದರು. ಆದರೆ ಕಳೆದ ಸಪ್ಟೆಂಬರ್‌ನಲ್ಲಿ ಮುಂಬಯಿ ಶ್ರೇಷ್ಠ ನ್ಯಾಯಾಲಯದ ನ್ಯಾಯಮೂರ್ತಿಗಳಾದ ಪಿ. ಬಿ. ಸಾವಂತ ಮತ್ತು ಬಿ. ಜಿ. ಕೋಳ್ಸೆ-ಪಾಟೀಲ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಭಾರತೀಯ ದಂಡ ಸಂಹಿತೆಯ ೩೦೯ನೇ ಕಲಮು ಅಸಂವಿಧಾನಾತ್ಮಕ ಎಂದು ಹೇಳಿ ಅದನ್ನು ರದ್ದುಪಡಿಸಿಬಿಟ್ಟರು. ಈ ನಿರ್ಣಯದಿಂದಾಗಿ ಈಗ ಮಹಾರಾಷ್ಟ್ರದಲ್ಲಿ ಆತ್ಮಹತ್ಯೆಗೆ ಪ್ರಯತ್ನಿಸುವುದು ಅಪರಾಧವಾಗಿ ಉಳಿಯುವುದಿಲ್ಲ.

ಈ ನಿರ್ಣಯಕ್ಕೆ ಕಾರಣೀಭೂತವಾದದ್ದು ಒಂದು ರಿಟ್ ಅರ್ಜಿ.

೧೯೮೫ರ ಎಪ್ರಿಲ್‌ನಲ್ಲಿ ಮುಂಬಯಿಯ ಪೋಲೀಸ್ ಪೇದೆ, ೩೯ ವರ್ಷ ವಯಸ್ಸಿನ ಮಾರುತಿ ಶ್ರೀಪತಿ ದುಬಾಳ ಆತ್ಮಹತ್ಯೆ ಮಾಡಿಕೊಳ್ಳಲೆತ್ನಿಸಿದ. ರಸ್ತೆ ಅಪಘಾತದಲ್ಲಿ ತಲೆಗೆ ಗಾಯವಾದ ನಂತರ ದುಬಾಳ ಕೊಂಚ ಬುದ್ಧಿ ಭ್ರಮಣೆಗೊಳಗಾಗಿದ್ದ. ತನ್ನ ಅಸ್ವಸ್ಥ ಗಂಡನ ಆದಾಯಕ್ಕೆ ಪೂರಕವಾಗುವಂತೆ ರಸ್ತೆಗಳಲ್ಲಿ ತಿರುಗುತ್ತ, ವ್ಯಾಪಾರ ಮಾಡುವ ಲೈಸೆನ್ಸನ್ನು ಅವನ ಹೆಂಡತಿಗೆ ನೀಡುವುದಾಗಿ ಅಧಿಕಾರಿಗಳು ಒಂದು ಹಂತದಲ್ಲಿ ಭರವಸೆ ನೀಡಿಬಿಟ್ಟರು, ಆದರೆ ಅಧಿಕಾರಶಾಹಿಯ ಗೊಂಡಾರಣ್ಯದಲ್ಲಿ ಆ ಭರವಸೆ ಭರವಸೆಯಾಗಿಯೇ ಉಳಿಯಿತು. ಇದರಿಂದ ಮತ್ತಷ್ಟು ಜಿಗುಪ್ಸೆಗೊಂಡ ದುಬಾಳ

( ಆಧಾರ: 'ಇಂಡಿಯಾ ಟುಡೆ' )



364 14

ಒಂದು ದಿನ ಮುಂಬಯಿ ಮುನಿಸಿಪಲ್ ಕಮಿಶನರರ ಕಚೇರಿ ಪ್ರವೇಶಿಸಿ, ಮೈಮೇಲೆ ಸೀಮೆ ಎಣ್ಣೆ ಸುರಿದುಕೊಂಡು ಬೆಂಕಿ ಹಚ್ಚಿಕೊಳ್ಳಲೆತ್ನಿಸಿದ. ಆದರೆ ಅಷ್ಟರಲ್ಲಿ ಕಚೇರಿಯ ಸಿಬ್ಬಂದಿ ಅವನನ್ನು ತಡೆದದ್ದರಿಂದ ಅವನ ಪ್ರಯತ್ನ ಕೈಗೂಡಲಿಲ್ಲ.

ಮಾನಸಿಕ ಭ್ರಾಂತಿಗೊಳಗಾಗಿರುವ ದುಬಾಳನಿಗೆ ಈ ಘಟನೆಯ ಸಂಪೂರ್ಣ ಅರಿವು ಇಲ್ಲ. "ಆಗ ನನ್ನ ಹೆಂಡತಿ ಮತ್ತು ನಾಲ್ವರು ಮಕ್ಕಳು ಊರಿಗೆ ಹೋಗಿದ್ದರು. ಮನೆಯಲ್ಲಿ ನಾನೊಬ್ಬನೇ ಇದ್ದೆ. ಮಾನಸಿಕ ಒತ್ತಡ ತಡೆಯಲಾರದಂತಾಯಿತು. ನಾನು ಮುನಿಸಿಪಲ್ ಕಚೇರಿಗೆ ಹೋಗುವ ಮೊದಲು ನಡೆದ ಘಟನೆಗಳು ನೆನಪಿವೆ. ಕಚೇರಿಯೊಳಗೆ ಹೋದುದೂ ನೆನಪಿದೆ. ಆದರೆ ಆತ್ಮಹತ್ಯೆ ಘಟನೆಯ ಬಗ್ಗೆ ಬೇರೆಯವರು ಹೇಳಿದ್ದಷ್ಟೇ ನನಗೆ ಗೊತ್ತಿದೆ" ಎಂದು ಅವನು ಹೇಳುತ್ತಾನೆ. ಆದರೆ ಅವನ ಈ ಮಾನಸಿಕ ಅವಸ್ಥೆ ಅವನಿಗೆ ಯಾವ ರಕ್ಷಣೆಯನ್ನೂ ನೀಡಲಿಲ್ಲ. ಪೋಲೀಸರು ದಂಡ ಸಂಹಿತೆಯ ೩೦೯ನೆಯ ಕಲಮನ್ನು ಅವನಿಗೆ ಅನ್ವಯಿಸಿ ಕಾನೂನು ಕ್ರಮ ಕೈಕೊಂಡರು.

ಆದರೆ ದುಬಾಳನ ಅದೃಷ್ಟ ಚೆನ್ನಾಗಿತ್ತೇನೊ. ಕ್ರಿಮಿನಲ್ ಲಾಯರ್ ಶ್ರೀಕಾಂತ ಭಟ್ಟ, ದುಬಾಳನ ಅವಸ್ಥೆಗೆ ಮರುಕಪಟ್ಟು ಅವನ ವಿಷಯದಲ್ಲಿ ಆಸಕ್ತಿ ವಹಿಸಿದರು. "ನನ್ನನ್ನು ಭೆಟ್ಟಿಯಾಗಲು ಬಂದಾಗ ದುಬಾಳ ನಡುಗುತ್ತಿದ್ದ. ಸರಿಯಾಗಿ ಮಾತನಾಡಲು ಸಹ ಅವನಿಗೆ ಆಗುತ್ತಿರಲಿಲ್ಲ," ಎಂದು ಭಟ್ಟ ಹೇಳುತ್ತಾರೆ.

ದುಬಾಳನ 'ಕಥೆ' ಕೇಳಿದ ನಂತರ ಭಟ್ಟರು ದಂಡ ಸಂಹಿತೆಯ ೩೦೯ನೆಯ ಕಲಮಿನ ಸಿಂಧುತ್ವವನ್ನೇ ಪ್ರಶ್ನಿಸಲು ನಿರ್ಧರಿಸಿದರು. ಅದಕ್ಕಾಗಿ ಮುಂಬಯಿ ಶ್ರೇಷ್ಠ ನ್ಯಾಯಾಲಯದಲ್ಲಿ ರಿಟ್ ಅರ್ಜಿಯೊಂದನ್ನು ಸಲ್ಲಿಸುತ್ತ ಅವರು ೧೮೩೩ರಲ್ಲಿ ಸಿದ್ಧವಾದ ಈ ಕಲಮು ಇದುವರೆಗೂ ಕಿಂಚಿತ್ತೂ ಬದಲಾಗದೇ ಹಾಗೆಯೇ ಉಳಿದು ಬಂದುದನ್ನು ನ್ಯಾಯಾಲಯದ ಗಮನಕ್ಕೆ ತಂದರು. ನ್ಯಾಯಾಲಯ ಭಟ್ಟರ ವಾದವನ್ನು ಎತ್ತಿ ಹಿಡಿದು ಸಪ್ಟಂಬರ್ ೨೫ರಂದು ಮಹಾರಾಷ್ಟ್ರ ರಾಜ್ಯದಲ್ಲಿ ಈ ಕಲಮಿನನ್ವಯ ದಾಖಲಾಗಿದ್ದ ಎಲ್ಲ ಪ್ರಕರಣಗಳನ್ನೂ ಕಿತ್ತಿಹಾಕಿಬಿಟ್ಟಿತು.

"ಮಾನಸಿಕ ಅಸ್ವಾಸ್ಥ್ಯದಿಂದ ಬಳಲಿ ಆತ್ಮಹತ್ಯೆಗೆ ಪ್ರಯತ್ನಿಸುವವರಿಗೆ ಮಾನಸಿಕ ಚಿಕಿತ್ಸೆ ನೀಡಬೇಕೇ ವಿನಾ ಜೈಲು ಶಿಕ್ಷೆಯನ್ನಲ್ಲ. ಅವರನ್ನು ಜೈಲಿಗೆ ನೂಕುವುದರಿಂದ ಅವರ ಪರಿಸ್ಥಿತಿ ಮತ್ತಷ್ಟು ಹದಗೆಡುತ್ತದೆ. ದೈಹಿಕ ಅಸ್ವಾಸ್ಥ್ಯದಿಂದ ಬಳಲಿ ಬೆಂಡಾಗಿ ಜೀವಿತದಲ್ಲಿ ಆಸ್ಥೆ ಕಳೆದುಕೊಂಡವರಿಗೆ ಯೋಗ್ಯ ಸ್ಥಾನ ಸೆರೆಮನೆಯಲ್ಲ, ಆಸ್ಪತ್ರೆ. ಅವರಿಗೆ ಸಿಗಬೇಕಾದದ್ದು ಯೋಗ್ಯ ವೈದ್ಯಕೀಯ ಚಿಕಿತ್ಸೆಯೇ ಹೊರತು ಅವರನ್ನು ಸೆರೆಮನೆಯ ನಾಲ್ಕು ಗೋಡೆಗಳ ಮಧ್ಯೆ ಬಂಧಿಸಿಟ್ಟರೆ ಆತ್ಮಹತ್ಯೆಯ ಪ್ರಯತ್ನವನ್ನು ಅವರು ಮತ್ತೆ ಮಾಡಲಾರರೆಂದೇನಲ್ಲ. ಸಾಮಾಜಿಕ ಇಲ್ಲವೆ ರಾಜಕೀಯ ಉದ್ದೇಶದಿಂದ ಪ್ರೇರಿತರಾಗಿ ತಮ್ಮನ್ನೇ ಬಲಿಗೊಡಲು ಸಿದ್ಧರಾದವರನ್ನು, ಇಲ್ಲವೆ ಜೀವಿತದಲ್ಲಿ ಆಸಕ್ತಿಗೇ ಎರವಾಗಿ ಇಹದಿಂದ ಮುಕ್ತರಾಗಬಯಸುವವರನ್ನು ಕಾನೂನಿನ ಭಯವೆಂದಿಗೂ ತಡೆಯದು ಎಂದು ನ್ಯಾಯಮೂರ್ತಿಗಳು ಸ್ಪಷ್ಟವಾಗಿ ಹೇಳಿದ್ದಾರೆ.

ಮುಂಬಯಿ ನ್ಯಾಯಾಲಯದ ಈ ತೀರ್ಪು ಅದಕ್ಕೂ ಮುಂಚಿನ ದಿಲ್ಲಿ ಶ್ರೇಷ್ಠ ನ್ಯಾಯಾಲಯದ ಒಂದು ತೀರ್ಪನ್ನೇ ಇನ್ನಷ್ಟು ವಿಸ್ತರಿಸಿ ಈ ಕಲಮೇ ಅಸಿಂಧುವೆಂದು ಸಾರಿದೆ. ಸಂಜಯ ಕುಮಾರ ಭಾಟಿಯಾ ಎಂಬೊಬ್ಬ ಯುವಕನ ಆತ್ಮಹತ್ಯಾಯತ್ನದ ಪ್ರಕರಣದಲ್ಲಿ ದಿಲ್ಲಿ ನ್ಯಾಯಾಲಯ ೩೦೯ನೇ ಕಲಮು ಇನ್ನೂ ಮುಂದುವರಿದಿರುವುದನ್ನು ಕಟುವಾಗಿ ಟೀಕಿಸಿದೆ. "ನಮ್ಮಂತಹ ಸುಸಂಸ್ಕೃತ ಸಮಾಜದಲ್ಲಿ ಈ ಕಲಮು ಇನ್ನೂ ಇರುವುದು ತೀರ ಅಸಂಗತ. ಈ ತರುಣನನ್ನು ಮಾನಸಿಕ ಚಿಕಿತ್ಸಾಲಯಕ್ಕೆ ಕಳುಹಿಸುವುದರ ಬದಲು ಸಮಾಜ ಅವನನ್ನು ಇತರ ಅಪರಾಧಿಗಳೊಡನೆ ಜೈಲಿಗಟ್ಟಿ ತೃಪ್ತಿಪಡುತ್ತದೆ. ಆದರೆ ಭಾಟಿಯಾನಂಥವರಿಗೆ ಬೇಕಾಗಿರುವುದು ವೈದ್ಯಕೀಯ ಚಿಕಿತ್ಸೆಯೇ ಹೊರತು ಪೋಲೀಸರ ಹಿಂಸೆ, ಜೈಲಿನ ಶಿಕ್ಷೆಯಲ್ಲ" ಎಂದು ಅವರು ಸಂಜಯ ಭಾಟಿಯಾನನ್ನು ಬಿಡುಗಡೆ ಮಾಡಿದರು.

ಆದರೆ ದಿಲ್ಲಿ ಶ್ರೇಷ್ಠ ನ್ಯಾಯಾಲಯದ ಅಭಿಪ್ರಾಯ ಇಷ್ಟೊಂದು ಸುಸ್ಪಷ್ಟವಿದ್ದಾಗಲೂ ದಿಲ್ಲಿಯಲ್ಲಿ ಪೋಲೀಸರು ೩೦೯ನೆಯ ಕಲಮಿನನ್ವಯ ಪ್ರಕರಣಗಳನ್ನು ದಾಖಲು ಮಾಡಿಕೊಳ್ಳುತ್ತಲೇ ಇದ್ದಾರೆ. ನಿವೃತ್ತ ಮುಖ್ಯನ್ಯಾಯಮೂರ್ತಿ ಸಾಚೇರರಿಗೆ ಇದು ತೀವ್ರ ಅಸಮಾಧಾನ ತಂದಿದೆ. ಆದರೆ ಅವರ ನ್ಯಾಯಾಲಯ ಭಾಟಿಯಾ ಪ್ರಕರಣದಲ್ಲಿ ಈ ಕಲಮನ್ನು ಅಸಿಂಧುವೆಂದು ಸಾರದೇ ಬಿಟ್ಟುದೇ ಈ ಅವಸ್ಥೆಗೆ ಕಾರಣ.

ಮನುಷ್ಯನಿಗೆ ಮರಣ ಹೊಂದುವ ಹಕ್ಕೇ ಇರಬೇಕೆಂದು ಪ್ರತಿಪಾದಿಸುವ ಒಂದು ಜಾಗತಿಕ ಮಟ್ಟದ ಸಂಸ್ಥೆಯೇ ಇದೆ. ಅದರ ಅಧ್ಯಕ್ಷ ಭಾರತೀಯರೇ ಆದ ಶ್ರೀ ಮೀನೂ ಮಸಾನಿ. "ದಿಲ್ಲಿ ಮತ್ತು ಮಹಾರಾಷ್ಟ್ರ ಶ್ರೇಷ್ಠ ನ್ಯಾಯಾಲಯಗಳ ನಿರ್ಣಯಗಳು ನ್ಯಾಯಾಂಗ ಪ್ರಜ್ಞೆ ಕಾನೂನಿಗಿಂತ ಮುಂದುವರೆದಿದೆ ಎಂಬುದನ್ನು ಸ್ಪಷ್ಟಪಡಿಸುತ್ತವೆ. ಆದರೆ ಭಾರತದ ಉಳಿದೆಲ್ಲ ಭಾಗಗಳಲ್ಲಿ ೩೦೯ನೆಯ ಕಲಮು ಜಾರಿಯಲ್ಲಿ ಉಳಿದಿರುವುದರಿಂದ ಭಾರತೀಯ ಸಂವಿಧಾನದಲ್ಲಿ ಈ ಬಗ್ಗೆ ಸೂಕ್ತ ತಿದ್ದುಪಡಿ ಮಾಡಬೇಕು" ಎಂದವರು ಸಲಹೆ ನೀಡಿದ್ದಾರೆ.

ಶ್ರೀ ಮಸಾನಿಯವರ ಅಭಿಪ್ರಾಯ ಎಂದಿನಿಂದಲೂ ಸುವೇದ್ಯವೇ ಇದೆ. ಈಗ ಇತರ ಪ್ರಗತಿಗಾಮಿ ವ್ಯಕ್ತಿಗಳೂ ಈ ಕಡೆಗೆ ಗಮನ ಹರಿಸಿದ್ದಾರೆ. ಮಾನಸಿಕ ಅಸ್ತವ್ಯಸ್ತತೆಯಿಂದ ಬಳಲುವವರಿಗೆ ನೆರವಾಗಲೋಸುಗ ಮುಂಬಯಿಯಲ್ಲಿ 'ಸಮಾರಿಟನ್ಸ್' ಎಂಬ ಸಂಸ್ಥೆಯಿದೆ. ಅದರ ನಿರ್ದೇಶಕಿ ಡಾ. ಸಾರಾ ದಸ್ತೂರ್. 'ಸಂಜೀವನಿ' ಎಂಬ ಇಂಥದೇ ಸಂಸ್ಥೆ ದಿಲ್ಲಿಯಲ್ಲೂ ಇದೆ. ವತ್ಸಲಾ ಶಿವಸುಬ್ರಹ್ಮಣ್ಯಂ ಅದರ ವರಿಷ್ಠೆ. ಇವರು ಈ ನಿರ್ಣಯ ಪ್ರಗತಿಪರವೆಂದು ಸ್ವಾಗತಿಸಿದ್ದಾರೆ. "ಆತ್ಮಹತ್ಯೆಗೆ ಯತ್ನಿಸುವವರು ಹತಾಶ ಜೀವಿಗಳು. ಅವರಿಗೆ ಸಹಾಯ ಮಾಡುವುದರ ಬದಲು ಶಿಕ್ಷೆ ವಿಧಿಸುವುದು ನಾಚಿಗೆಗೇಡು" ಎಂದು ಇವರಿಬ್ಬರೂ ಭಾವಿಸುತ್ತಾರೆ.

ಕಾನೂನು ಆಯೋಗದ ಅಧ್ಯಕ್ಷರಾದ ಡಿ. ಎ. ದೇಸಾಯಿ ಸಹ ಇದನ್ನು ಅನುಮೋದಿಸುತ್ತಾರೆ. "ಒಬ್ಬ ಮನುಷ್ಯನ ಜೀವನ ನಿರರ್ಥಕವಾದಾಗ ಅವನಿಗೆ ಅದನ್ನು ಸ್ವತಃ ಕೊನೆಗೊಳಿಸುವ ಅಧಿಕಾರವಿಲ್ಲವೆ? ಅವನ ಜೀವ ಅಷ್ಟು ಅಮೂಲ್ಯವೆ?" ಎಂದು ಅವರು ಪ್ರಶ್ನಿಸಿದ್ದಾರೆ. "ಆದರೆ ಆತ್ಮಹತ್ಯೆಗೆ ಪ್ರಚೋದನೆ ನೀಡುವುದರ ವಿರುದ್ಧ ಕ್ರಮಗಳನ್ನು ಬಲಪಡಿಸಬೇಕು. ಒಬ್ಬ ವ್ಯಕ್ತಿಗೆ ಆತ್ಮಹತ್ಯೆಯನ್ನುಳಿದರೆ ಬೇರೆ ಮಾರ್ಗವೇ ಇಲ್ಲವೆಂಬಂಥ ಪರಿಸ್ಥಿತಿಯನ್ನು ತಂದೊಡ್ಡುವುದು ಕೊಲೆ ಮಾಡಿದಂತೆಯೇ ಎಂದು ಕಾನೂನು ಆಯೋಗ ಹೇಳುತ್ತದೆ," ಎನ್ನುತ್ತಾರವರು.

ಮುಂಬಯಿ ಶ್ರೇಷ್ಠ ನ್ಯಾಯಾಲಯದ ಈ ಐತಿಹಾಸಿಕ ತೀರ್ಪಿಗೆ ಕಾರಣನಾದ ದುಬಾಳ ಮಾತ್ರ ಅದರಿಂದುಂಟಾಗಿರುವ ಕೋಲಾಹಲದ ಬಗ್ಗೆ ಹೆಚ್ಚು ಮಾತನಾಡಲಿಚ್ಛಿಸುತ್ತಿಲ್ಲ. "ಆತ್ಮಹತ್ಯೆಗೆ ಯತ್ನಿಸಿದವರ ವಿರುದ್ಧ ಪೋಲೀಸರು ಮೊಕದ್ದಮೆ ದಾಖಲು ಮಾಡುವುದರಿಂದ ಏನನ್ನೂ ಸಾಧಿಸಿದಂತಾಗುವದಿಲ್ಲ. "ಸಿರ್ಫ್ ನುಕ್ಸಾನ್ ಹಿ ನುಕ್ಸಾನ್ ಹೈ (ಇದೆಲ್ಲಾ ವ್ಯರ್ಥ) ಇದರ ಬಗ್ಗೆ ನಾನೇನು ಹೇಳಲಿ? ಇದರ ಬಗ್ಗೆ ಮೇಲಿನವರು ಯೋಚಿಸಬೇಕು." ಆದರೆ 'ಮೇಲಿನವರಾದ' ಸರ್ವೋಚ್ಚ ನ್ಯಾಯಾಲಯ ಮತ್ತು ಕೇಂದ್ರ ಸರಕಾರ ಈ ಬಗ್ಗೆ ಯಾವುದೇ ಯೋಚನೆ ಮಾಡಿದಂತೆ ತೋರುವುದಿಲ್ಲ. ಆದರೆ ಮುಂಬಯಿ ಶ್ರೇಷ್ಠ ನ್ಯಾಯಾಲಯದ ಈ ತೀರ್ಪಿನ ವಿರುದ್ಧ ಸರಕಾರ ಮೇಲ್ಮನವಿ ಮಾಡಿಕೊಳ್ಳಲಿಕ್ಕಿಲ್ಲವೆಂದು ನಿರೀಕ್ಷಿಸಬಹುದಾಗಿದೆ. ಈ ವಿಷಯದಲ್ಲಿ ದೇಶದಲ್ಲಿಯ ಬೇರಾವುದಾದರೂ ಶ್ರೇಷ್ಠ ನ್ಯಾಯಾಲಯ ಭಿನ್ನ ನಿಲುಮೆ ತಳೆದಾಗಲೇ ಸರ್ವೋಚ್ಚ ನ್ಯಾಯಾಲಯ ತನ್ನ ಕೊನೆಯ ನಿರ್ಣಯವನ್ನು ಹೇಳಲು ಅವಕಾಶವಿದೆ. ಅದು ವರೆಗೂ ದೇಶದ ಅಲ್ಪ ಭಾಗದಲ್ಲಾದರೂ ಆತ್ಮಹತ್ಯಾಯತ್ನ ಅಪರಾಧವೆನಿಸದು. ✡

# ಸಿರಿಗನ್ನಡಂಗೆಲ್ಗೆ! ಸಿರಿಗನ್ನಡಂ ಬಾಳ್ಗೆ!!

ಭವ್ಯ ಪರಂಪರೆಯ ಸಂಕೇತ ಕರ್ನಾಟಕ ಪ್ರಾಕೃತಿಕ ಹಾಗೂ ಸಾಂಸ್ಕೃತಿಕ ಸಂಪತ್ತಿನ ಆಗರ. ಕಲಾ ಸರಸ್ವತಿ ನೆಲಸಿರುವ ಪುಣ್ಯ ಭೂಮಿಕೆ ಎರಡು ಸಹಸ್ರ ವರ್ಷಗಳಿಗೂ ಮೀರಿದ ವೈಭವಯುತ ಇತಿಹಾಸವುಳ್ಳ ಪುಣ್ಯ ಭೂಮಿ ಇಂತಹ ಪವಿತ್ರ ಭೂಮಿಯ ಭಾಷೆ ಕನ್ನಡ— ಇದೊಂದು ಕಾವ್ಯ ಭಾಷೆ. ಇದರ ಪುನರುತ್ಥಾನವೇ ನಮ್ಮ ತಪಸ್ಸು ಕನ್ನಡ ನಾಡು ತನ್ನ ಭವ್ಯ ಪರಂಪರೆಯನ್ನುಳಿಸಿ ಕೊಳ್ಳಲು ಕರ್ನಾಟಕ ಸರ್ಕಾರವು ಹಲವಾರು ಯೋಜನೆಗಳನ್ನು ಕೈಗೊಂಡಿದೆ. ಈ ಕಾರ್ಯಕ್ರಮಗಳು ಕನ್ನಡ ಅಭಿವೃದ್ಧಿ ಹಾಗೂ ಸಾಹಿತ್ಯ ಮತ್ತು ಸಾಂಸ್ಕೃತಿಕ ಚಟುವಟಿಕೆಗಳನ್ನು ಕುರಿತು ರೂಪಿಸಿರುವಂಥವು.

ಕನ್ನಡ ಅಭಿವೃದ್ಧಿ: ಕನ್ನಡವನ್ನು ಆಡಳಿತದ ಎಲ್ಲ ಹಂತಗಳಲ್ಲಿಯೂ ಪರಿಣಾಮಕಾರಿಯಾಗಿ ಬಳಕೆಗೆ ತರಲು ಸರ್ಕಾರ ಕೈಗೊಂಡಿರುವ ಯೋಜನೆಗಳು.

* ಸರ್ಕಾರದ ಅಧಿಕಾರಿಗಳಿಗೆ, ನೌಕರರಿಗೆ ತಮ್ಮ ದೈನಂದಿನ ಆಡಳಿತ ವ್ಯವಹಾರದಲ್ಲಿ ಕನ್ನಡವನ್ನು ಸಮರ್ಥವಾಗಿ ಬಳಸಲು ಆರು ದಿನಗಳ ಕಾರ್ಯ ಶಿಬಿರ. * ಕನ್ನಡ ಬಾರದ ಸರ್ಕಾರಿ ಅಧಿಕಾರಿಗಳಿಗೆ, ನೌಕರರಿಗೆ ಅಂಚೆ ಮೂಲಕ ಕನ್ನಡ ಕಲಿಸುವ ಒಂದು ವರ್ಷದ ಯೋಜನೆ * ಸಾರ್ವಜನಿಕ ಉದ್ದಿಮೆಗಳ ಕನ್ನಡ ಸಿಬ್ಬಂದಿಗೆ ಸ್ಥಳೀಯ ಸಂಘ ಸಂಸ್ಥೆಗಳ ಸಹಾಯದಿಂದ ಕನ್ನಡ ಕಲಿಸುವ ಆರು ತಿಂಗಳ ಯೋಜನೆ. * ನೆರೆ ರಾಜ್ಯಗಳ ವಿಶ್ವವಿದ್ಯಾಲಯಗಳಲ್ಲಿ ಕನ್ನಡ ಸಂಶೋಧನೆಯಲ್ಲಿ ತೊಡಗಿರುವ ವಿದ್ಯಾರ್ಥಿಗಳಿಗೆ ಶಿಷ್ಯವೇತನ. * ಕನ್ನಡದ ಭಾಷೆಯನ್ನು ಆಡಳಿತ ಭಾಷೆಯಾಗಿ ಸಮರ್ಥವಾಗಿ ಬಳಸಲು ಪ್ರತಿ ಇಲಾಖೆಗೂ ತನ್ನದೇಆದ ಪಾರಿಭಾಷಿಕ ಶಬ್ದಕೋಶ, ಕೈಪಿಡಿ, ಸಿವಿಲ್ ಸೇವಾ ನಿಯಮಾವಳಿ, ಆರ್ಥಿಕ ಸಂಹಿತೆ, ಖಜಾನೆ ಸಂಹಿತೆ, ಮುಂತಾದ ಆಡಳಿತ ಸಾಹಿತ್ಯದ ಪರಿಷ್ಕರಣ. * ಕನ್ನಡ ಭಾಷೆಯಲ್ಲಿ ಭಾರತದ ಸಂವಿಧಾನ, ರಾಜ್ಯ ಅಧಿನಿಯಮಗಳು, ಕಾನೂನು ಪುಸ್ತಕಗಳು ಮುಂತಾದುವುಗಳ ಪ್ರಕಟಣೆ. * ಸರ್ಕಾರಿ ಇಲಾಖೆಗಳ ಇಂಗ್ಲೀಷ ಬೆರಳಚ್ಚುಗಾರರಿಗೆ ಹಾಗೂ ಶೀಘ್ರಲಿಪಿಗಾರರಿಗೆ ಕನ್ನಡ ಬೆರಳಚ್ಚು ಹಾಗೂ ಶೀಘ್ರಲಿಪಿಯಲ್ಲಿ ತರಬೇತಿ. * ನಿರುದ್ಯೋಗಿ ಕನ್ನಡ ಬೆರಳಚ್ಚುಗಾರರಿಗೆ 'ಜಾಬ್ ಟೈಪಿಂಗ್'ಗಾಗಿ ಕನ್ನಡ ಬೆರಳಚ್ಚು ಯಂತ್ರ ಖರೀದಿಸಲು ಸಾಲದ ನೆರವು. * ಪದವಿ ಮಟ್ಟದಲ್ಲಿ ಕನ್ನಡ ಮಾಧ್ಯಮ ತೆಗೆದುಕೊಂಡು ಓದುವ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ. * ಕೆಎಎಸ್, ಐಎಎಸ್, ಎಂಬಿಬಿಎಸ್, ಎಲ್‌ಎಲ್‌ಬಿ, ಮುಂತಾದ ಪರೀಕ್ಷೆಗಳಲ್ಲಿ ಕನ್ನಡವನ್ನು ಬಳಸಿ ಉತ್ತೀರ್ಣರಾದವರಿಗೆ ಬಹುಮಾನ. * ಶ್ರೀ ಸಾಮಾನ್ಯರಿಗೆ ಅರ್ಥವಾಗುವಂಥ ಸರಳ ಆಡಳಿತ ಕನ್ನಡ ಭಾಷೆಯ ಬಳಕೆಗಾಗಿ ಕನ್ನಡ ಭಾಷಾಂತರ ಸರಳೀಕರಣ ಸಮಿತಿ. * ಕನ್ನಡ ಭಾಷೆಯನ್ನು ಆಡಳಿತ ಭಾಷೆಯಾಗಿ ಅನುಷ್ಠಾನಕ್ಕೆ ತರಲು ಕನ್ನಡ ಕಾವಲು ಸಮಿತಿ.

## ಸಾಹಿತ್ಯ ಮತ್ತು ಸಂಸ್ಕೃತಿ ಚಟುವಟಿಕೆಗಳು:-

ಕರ್ನಾಟಕ ಸರಕಾರದ ವತಿಯಲ್ಲಿ ಸ್ಥಾಪಿತವಾಗಿರುವ ವಿವಿಧ ಅಕಾಡಮಿಗಳಾದ ಕರ್ನಾಟಕ ಸಾಹಿತ್ಯ ಅಕಾಡೆಮಿ. ಸಂಗೀತ ನೃತ್ಯ ಅಕಾಡೆಮಿ, ನಾಟಕ ಅಕಾಡೆಮಿ, ಲಲಿತಕಲಾ ಅಕಾಡೆಮಿ, ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಮತ್ತು ಉರ್ದು ಅಕಾಡೆಮಿಗಳು ಸಾಹಿತ್ಯ ಮತ್ತುಕಲೆಯ ಅಭಿವೃದ್ಧಿಗಾಗಿ ಶ್ರಮಿಸುತ್ತವೆ.

ಪುರಾಣ ಮತ್ತು ಜಗತ್ಪ್ರಸಿದ್ಧ ಜನಪ್ರಿಯ ಗ್ರಂಥಗಳ ಪ್ರಕಟಣೆಗೆ ಧನಸಹಾಯ. ಕನ್ನಡ ಸಾಹಿತ್ಯ ಪರಿಷತ್ತು ಮುಂತಾದ ಸಂಘ ಸಂಸ್ಥೆಗಳಿಗೆ ಆರ್ಥಿಕ ಪ್ರೋತ್ಸಾಹ ಸಾಂಸ್ಕೃತಿಕ ಕಾರ್ಯಕ್ರಮಗಳ ಅಂಗವಾಗಿ ಕಲಾವಿದರಿಗೆ ಪ್ರೋತ್ಸಾಹ, ಕಲಾವಿದರಿಗೆ ಗೌರವ ಧನ, ಮಾಸಾಶನ, ಅಶಕ್ತ ಕಲಾವಿದರಿಗೆ ವೈದ್ಯಕೀಯ ನೆರವು ಗಣನೀಯ ಸೇವೆಗೈದ ಕಲಾವಿದರಿಗೆ ರಾಜ್ಯೋತ್ಸವ ಪ್ರಶಸ್ತಿ ಇವೇ ಮುಂತಾದವುಗಳು ಸರ್ಕಾರ ಹಾಗೂ ಅಕಾಡಮಿಗಳಿಂದ ನಡೆಯುತ್ತಿರುವ ಚಟುವಟಿಕೆಗಳು: ನಮ್ಮ ನಾಡ ನುಡಿ, ಕಲೆ, ಸಂಸ್ಕೃತಿ ಪರಂಪರೆಗಳ ಪುನಃ ಚೇತನಕ್ಕಾಗಿ ನಾವೆಲ್ಲಾ ಒಂದಾಗಿದುಡಿಯೋಣ.

# ಡಾನ್ ನದಿಯ ತೀರದಲ್ಲಿ

ಮೂಲ ರಶಿಯನ್: ಮಿಖಾಯಿಲ್ ಎ ಶೊಲೊಖೊವ್

ಸಂಗ್ರಹಾನುವಾದ: ವಿ ವಿ ಉಪಾಧ್ಯಾಯ



# ಡಾನ್ ನದಿಯ ತೀರದಲ್ಲಿ

ರಶಿಯದ ಬಲ್ಜಾಕ್ ಎಂದು ಕರೆಯಲ್ಪಡುವ ಮಿಖಾಯಿಲ್ ಶೊಲೊಖೊವ್‌ನ And Quiet Flows the Don ಕಾದಂಬರಿಯ ಸಂಗ್ರಹ ಇದು. ೧೯೬೫ರಲ್ಲಿ ಈ ಪುಸ್ತಕಕ್ಕಾಗಿ ನೋಬೆಲ್ ಪುರಸ್ಕಾರ ಪಡೆದ ಶೋಲೊಖೊವ್ ತನ್ನ ಬಾಲ್ಯವನ್ನೆಲ್ಲ ಡಾನ್ ನದಿಯ ತೀರದಲ್ಲೇ ಕಳೆದ. ರಶಿಯನ್ ಕ್ರಾಂತಿಯ ಚಿತ್ರಣ ನೀಡುವ ಈ ಕಾದಂಬರಿ ಶಾಂತಿ, ಯುದ್ಧ, ಕ್ರಾಂತಿ ಮತ್ತು ಅಂತಃಕಲಹದ ಕಾಲಘಟ್ಟಗಳಿಗೆ ತಕ್ಕಂತೆ ನಾಲ್ಕು ಭಾಗಗಳಲ್ಲಿ ಪ್ರಕಟವಾಗಿದೆ. ಮ್ಯಾಕ್ಸಿಂ ಗಾರ್ಕಿ ಈ ಕಾದಂಬರಿಯನ್ನು ಟಾಲ್‌ಸ್ಟಾಯ್‌ನ War and Peaceನೊಂದಿಗೆ ಹೋಲಿಸಿದ್ದಾನೆ.

ಸೋವಿಯತ್ ಒಕ್ಕೂಟದ ೪೪ ಭಾಷೆಗಳಲ್ಲಿಯೂ ತರ್ಜುಮೆಸಲ್ಪಟ್ಟ ಈ ಕಾದಂಬರಿ ಈವರೆಗೆ ೨೦೦ ಪುನರ್ಮುದ್ರಣಗಳನ್ನು ಕಂಡಿದೆ! ಜಗತ್ತಿನ ಇತರ ೩೬ ಭಾಷೆಗಳಲ್ಲೂ ಇದರ ಅನುವಾದಗಳು ಪ್ರಕಟವಾಗಿವೆ.

೧೯೧೪. ತಾರತಾರಸ್ಕ ಗ್ರಾಮದ ಗಡಿಯ ಬಲ ಬದಿಯಲ್ಲಿ ಮೆಲಖೊವ್ ಕುಟುಂಬದ ಹೊಲಗಳಿದ್ದವು. ಹಳ್ಳಿಯ ಉತ್ತರ ದಿಕ್ಕಿನಲ್ಲಿದ್ದ ಡಾನ್ ನದಿಯೆಡೆಗೆ ಮುಖ ಮಾಡಿದ್ದ ಪ್ಯೆಂತಲಿ ಮೆಲಖೊವ್‌ನ ಮನೆಯಲ್ಲಿ ಸಂತಸ ನೆಲೆಸಿತ್ತು. ಆದರೆ ಸಿಟ್ಟಾದಾಗ ಆತ್ಮಸಂಯಮವನ್ನೇ ಕಳ-ಕೊಳ್ಳುತ್ತಿದ್ದ ಪ್ಯೆಂತಲಿ. ಅವನ ಈ ಸ್ವಭಾವದಿಂದಾಗಿ ಅವನ ಹೆಂಡತಿ ಇಲಿನಿಚ್ನಾ ಚಿಕ್ಕ ವಯಸ್ಸಿನಲ್ಲಿಯೇ ಮುದುಕಿಯಂತಾದಳು. ಅವರ ಹಿರಿಯ ಮಗ ಪ್ಯೋತ್ರ ತಾಯಿಯನ್ನೇ ಹೋಲುತ್ತಿದ್ದರೆ ಕಿರಿಯ ಮಗ ಗ್ರಿಗೋರಿ ತಂದೆಯಂತೆಯೆ ಇದ್ದ. ಗ್ರಿಗೋರಿ ಪ್ಯೋತ್ರನಿಗಿಂತ ಆರು ವರ್ಷ ಚಿಕ್ಕವ.

ದೊಡ್ಡ ಕಣ್ಣಿನ ಕೃಶಾಂಗಿ ಮನ್ಯಾ ತಂದೆಯ ಮುದ್ದಿನ ಮಗಳು. ಪ್ಯೋತ್ರನ ಹೆಂಡತಿ ದಾರ್ಯಾ ಚಿಕ್ಕ ಮಗುವಿನ ತಾಯಿ.

೨

ಕುದುರೆಗೆ ನೀರು ಕುಡಿಸುತ್ತ ಗ್ರಿಗೋರಿ ಆಕಾಶದತ್ತ ನೋಡಿದ. ಬೇಗ ಮನೆಗೆ ಬಂದವನೆ ತಾಯಿಯ ಬಳಿ ಹೋದ.

"ಹೋಗು ಸ್ಟಿಫಾನನನ್ನು ಎಬ್ಬಿಸು. ಅವನೂ ಪ್ಯೋತ್ರನ ಜೊತೆ ಹೋಗ್ತಾನೆ," ಅಂದಳು ತಾಯಿ.

ಗ್ರಿಗೋರಿ ಕೂಡಲೆ ಸ್ಟಿಫಾನನ ಮನೆಗೆ

ಹೋಗಿ, "ಮನೆಯೊಳಗೆ ಯಾರಿದ್ದೀರಿ? ಹೇಳಿ," ಎಂದ ಕರ್ಕಶವಾಗಿ.

"ಯಾರು?" ಎನ್ನುತ್ತಲೆ ಎದ್ದು ತನ್ನ ಲಂಗವನ್ನು ಸರಿಪಡಿಸಿಕೊಳ್ಳತೊಡಗಿದಳು. ಅಕ್ಸಿನ್ಯಾ. ಊರಿನ ಮೂವತ್ತು ಜನ ಕೊಸಕರು ಮೇ ತಿಂಗಳಿನಲ್ಲಿ ತರಬೇತಿಗಾಗಿ ಸೈನಿಕರ ಶಿಬಿರಕ್ಕೆ ಹೋಗುವವರಿದ್ದರು.

ಹಬ್ಬದ ನಂತರ ಬೆಳೆಯ ಕಟಾವು ಪ್ರಾರಂಭವಾಯಿತು. ಮೆಲಖೊವ್ ಕುಟುಂಬದವರ ಗದ್ದೆಗಳ ಕಟಾವು ಪ್ರಾರಂಭವಾಗಲು ತಡವಾಯಿತು. ಗ್ರಾಮದ ಉಳಿದವರ ಕಟಾವು ಅರ್ಧ ಮುಗಿದಾಗ ಮೆಲಖೊವರು ಗದ್ದೆಗಳತ್ತ ಹೊರಟರು.

ಮುಂಜಾನೆಯ ತನಕ ಎಲ್ಲರೂ ಹುಲ್ಲು ಕಿತ್ತಿದರು. ಮಧ್ಯ ರಾತ್ರಿಯ ಹೊತ್ತಿಗೆ ಗ್ರಿಗೋರಿ ಅವರು ಅಡಿಗೆ ಮಾಡಿದ್ದ ಜಾಗಕ್ಕೆ ಬಂದ. ಗಾಡಿಯಲ್ಲಿ ಮಲಗಿಕೊಂಡಿದ್ದ ಅಕ್ಸಿನ್ಯಾ ನಿಧಾನವಾಗಿ ಗ್ರಿಗೋರಿಯ ಬಳಿ ಬಂದಳು. ಸತ್ತ ಕುರಿಯನ್ನು ತನ್ನ ಬೆನ್ನ ಮೇಲಿರಿಸಿಕೊಂಡೋಡುವ ತೋಳದಂತೆ ಅವಳನ್ನೆತ್ತಿಕೊಂಡು ಗ್ರಿಗೋರಿ ಏದುತ್ತಾ ಓಡಿದ. ಅಕ್ಸಿನ್ಯಾಳನ್ನು ಕಾಮ-ಲಾಲಸೆಯ ಭೂತ ಹಿಡಿದಿತ್ತು. ಕಾಮೋದ್ರೇಕದಿಂದ ಗ್ರಿಗೋರಿಯೂ ಹುಚ್ಚನಾಗಿದ್ದ.

ಅವರಿಬ್ಬರೂ ಮಾನ ಮರ್ಯಾದೆಗಳಿಗೆ ಅಂಜದೆ ಸಹಜೀವನ ನಡೆಸುತ್ತಿದ್ದರು.

"ಗ್ರಿಷ್ಕಾ, ಇನ್ನು ಕೇವಲ ಒಂಭತ್ತು ದಿನಗಳು ಉಳಿದಿವೆ. ನನ್ನನ್ನಾತ ಕೊಂದೇ ಬಿಡುತ್ತಾನೆ. ಸ್ಟಿಫಾನ್‌ಗೆ ಇದು ಗೊತ್ತಾದರೆ ನನ್ನ ಕಥೆ ಮುಗಿದಂತೆಯೆ......ಅದಕ್ಕೇ ನಾವಿಬ್ಬರೂ ಎಲ್ಲಿಗಾದರೂ ಹೋಗುವುದೊಳಿತು. ನನ್ನ ಗಂಡನನ್ನಷ್ಟೇ ಅಲ್ಲ, ಇಡೀ ಪ್ರಪಂಚವನ್ನೇ ನಿನಗಾಗಿ ತ್ಯಜಿಸಲು ನಾನು ಸಿದ್ಧ," ಎಂದಳು. ಅಕ್ಸಿನ್ಯಾ.

## ೩

ಅಕ್ಸಿನ್ಯಾ ಕರವಸ್ತ್ರವನ್ನು ಅದುಮಿ ಹಿಡಿದುಕೊಂಡು ಬೆಂಚಿನಲ್ಲಿ ಕುಳಿತಾಗ ಅಂಗಳದಲ್ಲಿ ಹೆಜ್ಜೆಯ ಸಪ್ಪಳ ಕೇಳಿಸಿತು. ಅದು ಜಗುಲಿಯನ್ನು ಸಮೀಪಿಸಿತು. ಬಾಗಿಲ ಬಳಿಯೂ ಬಂದಂತಾಯಿತು.

ಸ್ಟಿಫಾನ್! ಬಂದವನೆ ಬಾಗಿಲಲ್ಲಿ ನಿಂತುಕೊಂಡ. ಆಶ್ಚರ್ಯ ವ್ಯಕ್ತಪಡಿಸುತ್ತ, "ವಿರಹವೇದನೆಯನ್ನು ಅದು ಹೇಗೆ ಸಹಿಸಿಕೊಂಡೆ? ಗಂಡನ ಮರ್ಯಾದೆಯನ್ನು ಉಳಿಸಲಿಕ್ಕಾ? ಸುಮ್ಮನೇಕಿರುವಿ? ಮಾತಾಡು!" ಎಂದ. ಗುದ್ದಿನಂಥ ಮಾತಿನಿಂದ ಅಕ್ಸಿನ್ಯಾಳ ಕಾಲ ಕೆಳಗಿನ ನೆಲ ಬಿರುಕು ಬಿಟ್ಟಂತಾಯಿತು. ಸ್ಟಿಫಾನ್ ಹಿಡಿದು ಅವಳನ್ನು ಬಾಗಿಲಿನತ್ತ ದೂಡಿದ. ಬಾಗಿಲ ಚೌಕಟ್ಟಿಗೆ ಅವಳ ತಲೆ ಬಡಿಯಿತು.

ಎತ್ತರದ ಬೇಲಿಯನ್ನು ಹಕ್ಕಿಯಂತೆ ಹಾರಿದ ಗ್ರಿಗೋರಿ ಹಿಂದಿನಿಂದ ಓಡಿಹೋಗಿ ಸ್ಟಿಫಾನ್‌ನನ್ನು ಗುದ್ದಿದ. ಪ್ಯೋತ್ರನೂ ಜೊತೆಗಿದ್ದ. ಇಬ್ಬರೂ ಸೇರಿ ಸ್ಟಿಫಾನ್‌ನನ್ನು ಎದುರಿಸಿದರು. ಅದೇ ಹೊತ್ತಿಗೆ ಅಲ್ಲಿಗೆ ಬಂದ ಕ್ರಿಸ್ತೊನ್ಯಾ ಅವರನ್ನು ತಡೆದ.

ತಾರತಾರಸ್ಕ ಗ್ರಾಮದಲ್ಲಿ ಕೋರ್ಶನೌರದು ಅತ್ಯಂತ ಶ್ರೀಮಂತ ಕುಟುಂಬ. ಮೆಲಖೊವ್ ಕುಟುಂಬದವರು ಕೋರ್ಶನೌನ ಹಿರಿಯ ಮಗಳು ನತಾಲ್ಯಾಳನ್ನು ನೋಡಿ ಹೋದ ನಂತರ; ಆಕೆ ತಂದೆ ತಾಯಿಯೊಂದಿಗೆ ಹೇಳಿದ್ದಳು—"ಗ್ರಿಗೋರಿ ಬಯಸಿದರೆ, ನಾನು ಬೇರೆ ಯಾರನ್ನೂ ಮದುವೆಯಾಗುವುದಿಲ್ಲ." ಎಂದು ನತಾಲ್ಯಾಳ ಆಗ್ರಹಕ್ಕೆ ಮಣಿದು ಕೊನೆಗೆ ಕೋರ್ಶನೌ ತನ್ನ ನಿರ್ಧಾರವನ್ನು ಪ್ಯೆಂತಲಿಗೆ ತಿಳಿಸಿದ: "ನಮ್ಮ ಮಗಳನ್ನು ನಿಮ್ಮ ಮಗನಿಗೆ ಕೊಡಲು ನಿಶ್ಚಯಿಸಿದ್ದೇವೆ."

ಗ್ರಿಗೋರಿ-ನತಾಲ್ಯಾರ ಮದುವೆಯಾಯಿತು.

ಆ ರಾತ್ರಿ ಗ್ರಿಗೋರಿಯು ನತಾಲ್ಯಾಳನ್ನು ಬದಿಯಿಂದ ನೋಡಿದ. ಅವಳ ಮೇಲ್ದುಟಿ ಬಾತುಕೊಂಡು ಅದು ಕೆಳದುಟಿಯ ಮೇಲೆ ಬೀಳುವಂತಿತ್ತು. ಆಕೆಯ ಬಲಗೆನ್ನೆಯ ಮೇಲೊಂದು ಕಂದು ಬಣ್ಣದ ಮಚ್ಚೆಯಿತ್ತು. ಮಚ್ಚೆಯ ಮೇಲೆ ಬಂಗಾರದ ಬಣ್ಣದ ಎರಡು ಕೂದಲುಗಳೂ ಕಾಣಿಸಿದವು ಗ್ರಿಗೋರಿಗೆ. ಆತ ಕಸಿವಿಸಿಗೊಂಡ. ಅವನಿಗೆ ಅಕ್ಸಿನ್ಯಾಳ ನೀಳವಾದ ಕತ್ತು. ಗುಂಗುರುಗೂದಲಿನ ನೆನಪಾಯಿತು.

೪

ಚಳಿಗಾಲದ ಒಂದು ಸಂಜೆ. ಲೂಕಿಷ್ನಾಕ್ಯಳ ಗುಡಿಸಲಿನಲ್ಲಿ ಬಾಡಿಗೆದಾರನಾಗಿದ್ದ, ಸ್ಟೋಕಮನ್ ಕರೆಯುತ್ತಿದ್ದ. ಚಳಿಗಾಲದಲ್ಲಿ ಚಿಕ್ಕ ಸಂತೋಷ ಕೂಟ ನೆರೆದಿತು. ಆ ಕೂಟದಲ್ಲಿ ಕ್ರಿಸ್ತೊನ್ಯಾ ಮತ್ತು ನೇವ್ ಕೂಡ ಇದ್ದರು. ಮೂರು ತಿಂಗಳಿಂದ ನಿರುದ್ಯೋಗಿಯಾಗಿದ್ದರೂ ಸದಾ ಪ್ರಸನ್ನಚಿತ್ತನಾಗಿಯೆ ಇರುತ್ತಿದ್ದ - ಡೇವಿಡ್ಕಾ ಅಲ್ಲಿದ್ದ. ಯಂತ್ರ ಚಾಲಕ ಇವಾನ್ ಹಾಗೂ ಸಮಗಾರ ಫಿಲ್ಕಾ ಕೂಡ ಒಮ್ಮೊಮ್ಮೆ ಇಂಥ ಕೂಟದಲ್ಲಿ ಸೇರಿಕೊಳ್ಳುತ್ತಿದ್ದರು. ಈ ತನಕ ಮಿಲಿಟರಿ ತರಬೇತಿಗೆ ಹೋಗದೆ ಉಳಿದ ನವ ಯುವಕ ಮಿಶಾ ಕೊಶೆವ್ಯ್ ಪ್ರತಿದಿನ ತಪ್ಪದೆ ಆ ಕೂಟಕ್ಕೆ ಹಾಜರಾಗುತ್ತಿದ್ದ. ಕೆಲದಿನಗಳ ನಂತರ ನಕ್ರಸೊವನ ಒಂದು ಕವಿತಾ ಸಂಗ್ರಹ ವನ್ನು ಸ್ಟೋಕಮನ್ ತಂದ. ಅದನ್ನು ತುಂಬ ಆಸಕ್ತಿಯಿಂದ ಎಲ್ಲರೂ ಗಟ್ಟಿಯಾಗಿ ಓದ ತೊಡಗಿದರು.

ನಿತ್ಯದ ಕೆಲಸ ಮಾಡಿ ಮುಗಿದ ನಂತರ ಸ್ಟೋಕಮನ್ನನ ಕಾರ್ಖಾನೆಯಲ್ಲಿ ಹತ್ತು ಜನ ಕೊಸೆಕ*ರದೊಂದು ಕೂಟ ಸೇರತೊಡಗಿತು. ಸ್ಟೋಕ್‌ಮನ್ ಈ ಕೂಟದ ಜೀವಾಳವಾಗಿದ್ದ.

೫

ಸುತ್ತಮುತ್ತಲಿನ ಐನೂರು ಮಂದಿ ಕೊಸೆಕ್ ನವಯುವಕರೊಂದಿಗೆ ವೈರನ್‌ಸ್ಕಾಯಾದ ಇಗರ್ಜಿಯೆದುರು ಝಾರ್ ಚಕ್ರವರ್ತಿಗೆ ನಿಷ್ಠಾವಂತನಾಗಿರುತ್ತೇನೆಂದು ಶಪಥ ಮಾಡಿ ಗ್ರಿಗೋರಿ ಊರಿಗೆ ಮರಳಿದ. ಪಾದ್ರಿ ಯಾವ ಶಬ್ದಗಳಲ್ಲಿ ಶಪಥವನ್ನು ಓದಿಸಿದ್ದನೆಂಬುದನ್ನೂ ಆತ ಗಮನಿಸಿರಲಿಲ್ಲ. ಬೆಳ್ಳಿಯ ಶಿಲುಬೆಯನ್ನು ಚುಂಬಿಸುವ ವಿಧಿಯನ್ನು ಪೂರೈಸುತ್ತಿದ್ದಾಗ, ಆತ ಅಕ್ಸಿನ್ಯಾಳ ತುಟಿಗಳ ಕುರಿತು ಯೋಚಿಸುತ್ತಿದ್ದ. ಸಂಜೆಯ ಹೊತ್ತಿಗೆ ಮನೆಗೆ ಮರಳಿದ.

ಆತನನ್ನು ಕಂಡೊಡನೆ ಹುಸಿ ಕೆಮ್ಮು ಕೆಮ್ಮುತ್ತಾ ಪ್ರೊಂತಲಿ ಕೇಳಿದ— "ನತಾಲ್ಯಾ ತವರಿಗೆ ಹೋಗುತ್ತಾಳಂತಲ್ಲ, ಯಾಕೆ?"

"ನನಗೆ ಗೊತ್ತಿಲ್ಲ—" ಗ್ರಿಗೋರಿ ಎದ್ದು ಹೇಳಿದ.

"ಆದರೆ ನನಗೆ ಗೊತ್ತಿದೆ—" ಮುದುಕನ ಸ್ವರ ತಾರಕಕ್ಕೇರಿತು, "ಅದಕ್ಕೇ ನೀನು ಈ ಮನೆಯನ್ನು ತಕ್ಷಣ ಬಿಟ್ಟು ಹೋಗು."

"ಆಗಲಿ, ಹೋಗುತ್ತೇನೆ," ಎಂದವನೆ ಗ್ರಿಗೋರಿ ಧಡಧಡನೆ ಹೊರಟು ಹೋದ.

ಗ್ರಿಗೋರಿ ಮನೆಯಿಂದ ನೇರವಾಗಿ ಅಕ್ಸಿನ್ಯಾಳ ಬಳಿ ಹೋದ. ಅವಳೊಂದಿಗೆ ಯಾಗೋಡ್ನೊಯೆ ಕೃಷಿ ಕ್ಷೇತ್ರಕ್ಕೆ ಓಡಿದ. ಒಡೆಯ ಲಿಸ್ತನಿಸ್ಕಿ ನಿವೃತ್ತ ಜನರಲ್. ಅವನ ಮಗ ಯೂಜನ್ ಲಿಸ್ತನಿಸ್ಕಿ ಲೈಫ್‌ಗಾರ್ಡ್ ರೆಜಿಮೆಂಟಿನಲ್ಲಿ ಲೆಫ್ಟಿನೆಂಟ್ ಆಗಿದ್ದ. ಯೂಜನ್ ತನ್ನ ರಜಾಕಾಲದ ಕೊನೆಯ ದಿನಗಳನ್ನು ಹೆಚ್ಚಾಗಿ ಗ್ರಿಗೋರಿಯ ಬಿಡಾರದಲ್ಲಿಯೆ ಕಳೆಯುತ್ತಿದ್ದ. ಒಂದು ದಿನ ಆತ ಸ್ಟೂಲಿನಮೇಲೆ ಕುಳಿತು ಅಕ್ಸಿನ್ಯಾಳನ್ನು ಕಾಮುಕ ದೃಷ್ಟಿಯಿಂದ ನೋಡಿದ. ಗ್ರಿಗೋರಿ ಬಂದಾಗ ಯೂಜನ್ ಅವನಿಗೊಂದು ಸಿಗರೇಟು ಕೊಟ್ಟು ಹೊರಗೆ ಹೋದ.

೬

ತೌರಿನಲ್ಲಿ ಇದ್ದ ನತಾಲ್ಯಾ ಅಡಿಗೆ ಮನೆಯಲ್ಲೊಂದು ದಿನ ಆತ್ಮಹತ್ಯೆ ಮಾಡಿಕೊಳ್ಳಲು ಯತ್ನಿಸಿದಳು, ಅಡಿಗೆ ಮನೆಯ ಬಾಗಿಲು ತೆರೆಯಿತು. ಇಲಿನಿಚ್ನಾ ಒಳಗೆ ಬಂದಳು. ಇಗರ್ಜಿಯಿಂದ ಘಂಟಾನಾದ ಕೇಳಿಸುತ್ತಿತ್ತು. ಡಾನ್‌ನಲ್ಲಿ ಹಿಮ ಬಂಡೆಗಳು ತೇಲುತ್ತಿದ್ದುದರಿಂದ ವಿಚಿತ್ರ ಶಬ್ದ ಕೇಳಿಸುತ್ತಿತ್ತು. ಈ ಮನೆಯಲ್ಲಿ ಆತ್ಮಹತ್ಯೆಯ ಪ್ರಯತ್ನದಲ್ಲಿ ವಿಫಲಳಾದ ನತಾಲ್ಯಾ ರಕ್ತದ ಮಡುವಿನಲ್ಲಿ ತೊಯ್ದು ಹೋಗಿ ಮೂರ್ಛಿತಳಾಗಿ ಬಿದ್ದಿದ್ದಳು.

ಡಿಸೆಂಬರಿನಲ್ಲಿ ಜಿಲ್ಲೆಯ ಮಿಲಿಟರಿ ಕಾರ್ಯಾಲಯದಿಂದ ಗ್ರಿಗೋರಿಗೆ ಕರೆಬಂತು. ಒಡೆಯ

* ರಶಿಯದ ಅಶ್ವದಳದಲ್ಲಿ ಪರಂಪರಾಗತವಾಗಿ ಸೇವೆಸಲ್ಲಿಸುತ್ತಾ ಬಂದ ಒಂದು ಜನಾಂಗದ ಹೆಸರು. -ಸಂ.

[illegible] ಪಡೆದು ಗ್ರಿಗೋರಿ ಹೊರಟ.

ವಸಂತ ಋತುವಿನ ಒಂದು ಬೆಚ್ಚನೆಯ [illegible] ದಿನ ನತಾಲ್ಯಾ ವಾಪಸ ಮನೆಗೆ ಮರಳಿದಳು. ಕುಟುಂಬದ ಎಲ್ಲ ಸದಸ್ಯರಂತೆ ಇರ ತೊಡಗಿದಳು.

ಅಣಕುಯುದ್ಧಗಳ ನಿರಂತರ ಅಭ್ಯಾಸದಿಂದಾಗಿ ಬಳಲಿದ್ದ ಗ್ರಿಗೋರಿ ಹಾಗೂ ಅವನ ತುಕಡಿಯ ಎಲ್ಲ ಸಂಗಾತಿಗಳೂ [illegible] ತಮ್ಮ ಮನೆಗಳಲ್ಲಿ ಮಲಗಿದ್ದಾಗ ಅವರ ಕಮಾಂಡರ್ ಅಲ್ಲಿಗೆ ಬಂದವನೆ, "ಈ ಬಾರಿ ನಿಜವಾದ ಯುದ್ಧ ಆಗಲಿದೆ," ಎಂದ.

"ಸುಳ್ಳು," ಎಂದುಬಿಟ್ಟ ಗ್ರಿಗೋರಿ. ಆತ ಕಮಾಂಡರನ ಮಾತನ್ನು ನಂಬಲು ಸಿದ್ಧನಿರಲಿಲ್ಲ.

"ಆದರೆ ಇದು ದೇವವಾಣಿಯಷ್ಟೇ ಸ್ಪಷ್ಟವಾಗಿದೆ. ಸಾರ್ಜೆಂಟ್ ಮೇಜರ್ ನನಗೆ ಹೇಳಿದ್ದಾರೆ."

ಆಸ್ಟ್ರಿಯದ ಸೈನಿಕರು ನಗರದತ್ತ ಧಾವಿಸುತ್ತಿದ್ದರು. ಅವರನ್ನು ಕೊಸೆಕರ ಕುದುರೆಗಳು ಓಡಾಡಿಸುತ್ತಿದ್ದವು. ನಗರದ ಓಣಿಗಳಲ್ಲಿ ನಿರಂತರವಾಗಿ ಗುಂಡುಗಳು ಹಾರಾಡುತ್ತಿದ್ದವು. ಗ್ರಿಗೋರಿಯ ತಲೆ ಸೀಸದಂತೆ ಭಾರವಾಯಿತು. ಆತ ಕುದುರೆಯಿಂದಿಳಿದು ತಲೆಯನ್ನು ಅಲ್ಲಾಡಿಸುತ್ತ ನಿಂತುಕೊಂಡ. ಅವನ ಕಾಲು ಚಲಿಸಲು ನಿರಾಕರಿಸುತ್ತಿತ್ತು. ಜಿಗುಪ್ಸೆ—ದಿಗ್ಭ್ರಮೆಗಳು ಅವನ ಆತ್ಮವನ್ನು ಹಿಂಡುತ್ತಿದ್ದವು.

೭

ಗ್ರಿಗೋರಿ ರಜೆ ಪಡೆದು ಮನೆಗೆ ಹೊರಟ. ಎರಡನೇ ದಿನ ಸಂಜೆಗೆ ಯಾಗೋಡ್ನೋಯೆ ತಲಪಿದ. ಆವರಣವನ್ನು ದಾಟಿ ಕುದುರೆಯ ಲಾಯಕ್ಕೆ ಬಂದ. ಶಷ್ಕಾ ಕೆಮ್ಮುವುದು ಕೇಳಿಸಿತು.

ಶಷ್ಕಾ ಹೊರಬಂದವನೆ ಗ್ರಿಗೋರಿಯನ್ನು ಆಲಿಂಗಿಸಿಕೊಂಡ.

"ಅಕ್ಸಿನ್ಯಾ ಹೇಗಿದ್ದಾಳೆ?" ಕೇಳಿದ ಗ್ರಿಗೋರಿ.

"ಚೆನ್ನಾಗಿದ್ದಾಳೆ!"

"ಅಕ್ಸಿನ್ಯಾ ಎಲ್ಲಿದ್ದಾಳೀಗ?"

"ನೀನು ಸಾಕಿದ ಆ ಸರ್ಪಿಣಿ ಈಗ ಯೂಜಿನ್ನೊಂದಿಗೆ ಸರಸವಾಡುತ್ತಿದ್ದಾಳೆ."

ಬಾಗಿಲನ್ನು ಯಾರೋ ಒದ್ದಂತೆ [illegible] ಅಕ್ಸಿನ್ಯಾ ಬಾಗಿಲು ತೆರೆದು ನಾಲ್ಕು ಕಡೆಗೂ ದಿಟ್ಟಿಸಿದಳು.

"ರಾಕ್ಷಸಿ!" ಎಂದಬ್ಬರಿಸುತ್ತ ಗ್ರಿಗೋರಿ ಚಾಟಿಯಿಂದ ಅಕ್ಸಿನ್ಯಾಳ ಮುಖಕ್ಕೆ ಹೊಡೆದು ಹೊರನಡೆದ. ಸ್ವಲ್ಪ ದೂರ ಹೋಗಿ ನಿಂತು ಹಿಂತಿರುಗಿ ನೋಡಿದ. ಅಕ್ಸಿನ್ಯಾ ಏದುಸಿರು ಬಿಡುತ್ತ ಓಡುತ್ತ ಅವನನ್ನೇ ಹಿಂಬಾಲಿಸಿ ಬರುತ್ತಿದ್ದಳು. "ಗ್ರಿಗೋರಿ, ನನ್ನನ್ನು ಕ್ಷಮಿಸು!" ಎಂದರಚುತ್ತಿದ್ದಳು. ಗ್ರಿಗೋರಿ ನಿಲ್ಲಲಿಲ್ಲ.

ತಾರತಾರಸ್ಕದ ಬಳಿ ಹೋದೊಡನೆ ಗ್ರಿಗೋರಿ ಕೈಲಿದ್ದ ಚಾಟಿಯನ್ನು ದೂರಕ್ಕೆಸೆದು ಊರನ್ನು ಪ್ರವೇಶಿಸಿದ.

ಮನೆಯ ಬಾಗಿಲು ತೆರೆಯಿತು. ಗ್ರಿಗೋರಿ ಅಂಗಳಕ್ಕಿಳಿದ. ಮುದಿ ತಾಯಿ ಅಳುತ್ತ ಅವನತ್ತ ಓಡಿಬಂದು ಅಪ್ಪಿಕೊಂಡಳು. ಆಕೆಯ ಕಣ್ಣೀರಿನಿಂದ ಅವನ ನಿಲುವಂಗಿ ತೊಯ್ದಿತು. ನತಾಲ್ಯಾ ಬಾಗಿಲು ಮರೆಯಿಂದ ವೀಕ್ಷಿಸುತ್ತಿದ್ದಳು. ಅನ್ಯಮನಸ್ಕನಾಗಿದ್ದ ಗ್ರಿಗೋರಿ ಆಕೆಯತ್ತ ದೃಷ್ಟಿ ಹರಿಸಿದಾಗ, ನತಾಲ್ಯಾ ಮೆಲ್ಲನೆ ಮರೆಯಾದಳು.

ರಾತ್ರಿ ಎಲ್ಲರೂ ಮಲಗಿಕೊಂಡಾಗ, ಪ್ಯಾಂತಲೆ ಮೆಲಖೋವ್ ಹೆಂಡತಿಗೆ ಮೆಲ್ಲಗೆ ಹೇಳಿದ—"ಇಬ್ಬರೂ ಒಟ್ಟಿಗೆ ಮಲಗಿದ್ದಾರೆಯೆ ಇಲ್ಲವೆ ನೋಡಿಕೊಂಡು ಬಾ."

ಇಲಿನಿಚ್ನಾ ಎದ್ದು ಹೋಗಿ ಆ ಕೋಣೆಯ ಬಾಗಿಲು ಸಂದಿನಿಂದ ನೋಡಿ ಹಿಂತಿರುಗಿ ಬಂದು ಪಿಸುಗುಟ್ಟಿದಳು— "ಹೌದು, ಇಬ್ಬರೂ ಒಟ್ಟಿಗೆ ಮಲಗಿದ್ದಾರೆ!"

೮

೧೯೧೪ರ ಅಕ್ಟೋಬರ್ ತಿಂಗಳಿನ ಒಂದು ರಾತ್ರಿ. ಪೋಲೆಸ್ಯ ಪ್ರದೇಶದ ಜೌಗು ಭೂಮಿಯಲ್ಲಿ ಹಿಮಮಿಶ್ರಿತ ಕೆಸರು ತುಂಬಿದ ಕಂದಕಗಳು. ಅವುಗಳೆದುರುಗಡೆ ಮುಳ್ಳುಬೇಲಿಯ [illegible] ಅಲ್ಲಲ್ಲಿ ಬೆಳಕು ಹರಡಿತ್ತು.

ಬಂಚಕ್‌ನ ಭಾವಚಿತ್ರವಿದ್ದ ಕಾಗದದಲ್ಲಿ ಲಿಸ್ತನಿಸ್ಕಿ ಪ್ರಧಾನ ಕಚೇರಿಗೊಂದು ವರದಿಯನ್ನು ಬರೆದ. ಬಂಚಕ್ ಕ್ರಾಂತಿಕಾರಿಯಾಗಿದ್ದ ನೆಂಬುದರಲ್ಲಿ ಈಗ ಯಾವ ಸಂಶಯವೂ ಉಳಿದಿಲ್ಲವೆಂಬುದನ್ನು ವರದಿಯಲ್ಲಿ ಕಾಣಿಸಿದ. ಅವನನ್ನು ಕೂಡಲೇ ದಸ್ತಗಿರಿ ಮಾಡಿ ಮಿಲಿಟರಿ ನ್ಯಾಯಾಲಯದ ಮುಂದೆ ಹಾಜರುಪಡಿಸಬೇಕೆಂದೂ ಮಶಿನ್‌ಗನ್ನಿನ ತುಕಡಿಯನ್ನು ವಿಸರ್ಜಿಸಬೇಕೆಂದೂ ಆತ ತನ್ನ ವರದಿಯಲ್ಲಿ ಶಿಫಾರಸು ಮಾಡಿದ.

ಮರುದಿನ ಮರ್ಕುಲೊವ್ ಓಡುತ್ತ, ಏದುತ್ತ ಬಂದು ಲಿಸ್ತನಿಸ್ಕಿಯನ್ನು ಏಕಾಂತದಲ್ಲಿ ಕರೆದು ಹೇಳಿದ... "ಬಂಚಕ್ ನಿನ್ನೆ ರಾತ್ರಿ ಓಡಿ ಹೋದ."

ಎರಡು ದಿನಗಳ ನಂತರ ಒಬ್ಬ ಸಾರ್ಜೆಂಟ್ ಮೇಜರ್ ಲಿಸ್ತನಿಸ್ಕಿಯ ಸುರಂಗಕ್ಕೆ ಬಂದ. ಸಂಕೋಚಪಟ್ಟುಕೊಳ್ಳುತ್ತ, "ಇವತ್ತು ಕೊಸೆಕರಿಗೆ ತಮ್ಮ ಕಂದಕದಲ್ಲಿ ಈ ಕಾಗದ ಸಿಕ್ಕಿತು." ಎಂದ.

ಲಿಸ್ತನಿಸ್ಕಿ ಆ ಕಾಗದವನ್ನು ಓದತೊಡಗಿದ—

"ಪ್ರಪಂಚದ ಕಾರ್ಮಿಕರೇ, ಒಗ್ಗಟ್ಟಾಗಿ.

"ಸಂಗಾತಿ ಸೈನಿಕರೇ,

"ಎರಡು ವರ್ಷಗಳಿಂದ ಈ ದುರದೃಷ್ಟಕರವಾದ ಯುದ್ಧ ನಡೆಯುತ್ತಿದೆ. ಯುದ್ಧಾರಂಭದಿಂದಲೂ ತಾವು ಕಂದಕಗಳಲ್ಲಿ ಕೊಳೆಯುತ್ತ ಅನ್ಯರ ಸ್ವಾರ್ಥವನ್ನು ರಕ್ಷಿಸುತ್ತ ಬಂದಿದ್ದೀರಿ. ಕಳೆದ ಎರಡು ವರ್ಷಗಳಿಂದಲೂ ಪ್ರಪಂಚದ ಕಾರ್ಮಿಕರ ಮತ್ತು ರೈತರ ರಕ್ತ ಹರಿಯುತ್ತಿದೆ. ಲಕ್ಷಾಂತರ ಮಂದಿ ಸತ್ತರು. ಎಷ್ಟೋ ಲಕ್ಷ ಜನ ಗಾಯಗೊಂಡರು. ವಿಧವೆಯರಾದವರೂ ಅಸಂಖ್ಯ. ಅನಾಥರಾದ ಮಕ್ಕಳೂ ಬಹಳ. ಪ್ರಪಂಚದ ಬಂಡವಾಳಶಾಹಿಗಳು ಮಾರುಕಟ್ಟೆಯ ವಿಭಜನೆಗಾಗಿ ಹೋರಾಡುತ್ತಿದ್ದಾರೆ. ನೀವು ಅವರ ನೀಚ ಸ್ವಾರ್ಥಕ್ಕಾಗಿ ನಡೆಯುವ ಈ ಯುದ್ಧದಲ್ಲಿ ಸ್ವತಃ ಸಾಯುತ್ತಿದ್ದೀರಿ... ಶ್ರಮಿಕರೇ. ಎಚ್ಚರಗೊಳ್ಳಿ! ನಿಮ್ಮ ಶತ್ರು ಹಂಗೆರಿ ಅಥವಾ ಆಸ್ಟ್ರಿಯದ ಸೈನಿಕರಲ್ಲ: ನಿಮ್ಮನ್ನಾಳುವ ಝಾರ್ ಚಕ್ರವರ್ತಿ. ಈ ಬಂಡವಾಳಶಾಹಿಗಳು ಹಾಗೂ ಭೂಮಾಲೀಕರು ನಿಮ್ಮ ಶತ್ರುಗಳು... ಸಾಮ್ರಾಜ್ಯಶಾಹಿ ಯುದ್ಧಗಳು ಕೊನೆಗೊಳ್ಳಲಿ! ಪ್ರಪಂಚದ ಶ್ರಮಜೀವಿಗಳ ಒಗ್ಗಟ್ಟಿಗೆ ಜಯವಾಗಲಿ."

ಆ ಕಾಗದವನ್ನು ಓದಿದ ಮೇಲೆ ಲಿಸ್ತನಿಸ್ಕಿಯ ಕೋಪ ನೆತ್ತಿಗೇರಿತು.

ತುಂಬ ಮುತುವರ್ಜಿಯಿಂದ ಶೋಧ ಕಾರ್ಯ ಪ್ರಾರಂಭವಾಯಿತು. ಓದುಬರಹ ತಿಳಿಯದಿದ್ದ ಮುದಿ ಕೊಸೆಕನೊಬ್ಬನ ಕಿಸೆಯಲ್ಲಿ ಒಂದು ಕಾಗದ ಸಿಕ್ಕಿತು. ವಿಚಾರಣೆ ನಡೆದಾಗ ಆತ ದುಃಖಮಿಶ್ರಿತ ನಡುಗುವ ಧ್ವನಿಯಲ್ಲಿ ಗಟ್ಟಿಯಾಗಿ ಹೇಳಿದ— "ಕ್ಷಮಿಸಿ ಸ್ವಾಮಿ, ನನಗೆ ಓದು ಬರಹ ಗೊತ್ತಿಲ್ಲ. ಸಿಗರೇಟು ಸುರುಳಿ ಸುತ್ತಲು ನನ್ನ ಬಳಿ ಕಾಗದವಿರಲಿಲ್ಲವಾದ್ದರಿಂದ ನಾನು ಆ ಚೂರನ್ನು ಎತ್ತಿಕೊಂಡೆ."

ಲಿಸ್ತನಿಸ್ಕಿ ಕೆಮ್ಮುತ್ತ ತನ್ನ ಡೇರೆಯತ್ತ ನಡೆದ. ಉಳಿದ ಅಧಿಕಾರಿಗಳು ಅವನನ್ನು ಹಿಂಬಾಲಿಸಿದರು.

ಸಮರ್ಥ ಕೊಸೆಕ್ ಎನಿಸಿದ್ದ ಗ್ರಿಗೋರಿ ರಣರಂಗಕ್ಕೆ ಹಿಂದಿರುಗಿದ. ಅವನ ಮನಸ್ಸಿನಲ್ಲಿ ಯುದ್ಧ ವ್ಯರ್ಥವೆಂಬ ವಿಚಾರ ಸ್ಪಷ್ಟವಾಗಿತ್ತಾದರೂ ಕೊಸೆಕರ ಗೌರವವುಳಿಸಲು ಎಲ್ಲ ಯತ್ನಗಳನ್ನೂ ಮಾಡುತ್ತಿದ್ದ.

೧೯೧೬ರ ಮೇ ತಿಂಗಳಿನಲ್ಲಿ ಜರ್ಮನಿಯ ಉಕ್ಕಿನ ತುಕಡಿ ಒಂದೇ ಸಮನೆ ಮುಂದುವರಿಯುತ್ತಿದ್ದಾಗ, ಕೊಸೆಕರ ೧೨ನೆಯ ರೆಜಿಮೆಂಟ್ ಶೌರ್ಯ ಪ್ರದರ್ಶಿಸಿ ಅದನ್ನು ತಡೆಯಿತು. ತನ್ನ ರೈಫಲ್ಲಿನ ಏಟಿನಿಂದ ಗ್ರಿಗೋರಿ ಒಬ್ಬ ಜರ್ಮನ್ ಲೆಫ್ಟಿನೆಂಟನನ್ನು ಹೊಡೆದು ಕೊಂದ. ಮೂವರನ್ನು ಸೆರೆಹಿಡಿದ. ೧೯೧೬ರ ಜುಲೈಯಲ್ಲಿ ಆತ ಆಸ್ಟ್ರಿಯನ್ನರ ಕೈಯಿಂದ ಇಡಿ ಒಂದು ತೋಫಿನ ಕಾರ್ಖಾನೆಯನ್ನೇ ಕಸಿದುಕೊಂಡ.

ಒಂದು ದಿನ ಗ್ರಿಗೋರಿಯ ಭೇಟಿ ಅವನ ಕಡು ವೈರಿಯಾಗಿದ್ದ ಸ್ಟಿಫಾನನ ಜೊತೆ ವಿಚಿತ್ರ ರೀತಿಯಲ್ಲಾಯಿತು. ಸ್ಟಿಫಾನನ ಮುಖ ಬಾಡಿತ್ತು. ಬಲಗಾಲಿನ ಬೆರಳಿನಿಂದ ಧಾರೆಯಾಗಿ ರಕ್ತ ಹರಿಯುತ್ತಿತ್ತು. ಕುಂಟುತ್ತ ಆತ ಒಂದು ಓಕ್ ಮರದ ಕೆಳಗೆ ಮಲಗಿಬಿಟ್ಟ. ಇಬ್ಬರ ಕಣ್ಣುಗಳೂ ಸಂಧಿಸಿದವು. ಸ್ಟಿಫಾನ್ ಹೇಳಿದ— "ನೀನು ನನ್ನನ್ನು ಮೃತ್ಯುವಿನಿಂದ ರಕ್ಷಿಸಿದಿ...

ನಿನಗೆ ನಾನು ಕೃತಜ್ಞ. ಆದರೆ, ಅಕ್ಸಿನ್ಯಾಳ [illegible] ಕ್ಷಮಿಸಲಾರೆ... ಈಗ ನನ್ನ ಕೈಗಳು [illegible]... ಗ್ರಿಗೋರಿ, [illegible] ನನ್ನನ್ನು [illegible]ವಾಗಿ ಮಾಡಬೇಡ."

೯

ಲ್ವೊವ್ ಎಂಬಲ್ಲಿ ಜರುಗಿದ ಯುದ್ಧದಲ್ಲಿ ಗ್ರಿಗೋರಿ ತನ್ನ ಕಂಪನಿಯ ಕಮಾಂಡರನಾಗಿದ್ದ. ಜರ್ಮನ್ನರ ಹೌವಿತ್ಸರ್ ತೋಫಖಾನೆಯ ಫಿರಂಗಿ ದಳವನ್ನು ಅದರ ಚಾಲಕನನ್ನೂ ಸೆರೆ ಹಿಡಿದ. ತನ್ನ [illegible] ಶಕ್ತಿ ಪ್ರದರ್ಶನಕ್ಕೆ ಸಿಕ್ಕಿದ ಸಂದರ್ಭಗಳನ್ನು ಗ್ರಿಗೋರಿ ಎಂದೂ ಬಿಡುತ್ತಿರಲಿಲ್ಲ. ಹೆಜ್ಜೆಹೆಜ್ಜೆಗೂ ಗಂಡಾಂತರಗಳನ್ನೆದುರಿಸಲು, ವೇಷ ಮರೆಸಿಕೊಂಡು ಶತ್ರುಗಳ [illegible] ಅವರನ್ನು [illegible]ತ್ತಿದ್ದ. [illegible]ಕೊಳ್ಳುತ್ತಿದ್ದ. [illegible] ಹಾರಿಸುತ್ತಿದ್ದ. ಒಂದು [illegible] ಅವನ [illegible] ಕಲ್ಲಾಗಿತ್ತು. ಅದರಲ್ಲಿ ದಯೆ [illegible] ಇರಲಿಲ್ಲ. [illegible] ಅವನಿಗೆ ನಾಲ್ಕು ಸಂತ ಜಾರ್ಜರ ಪದಕಗಳು ದೊರೆತವು. ಕವಾಯತು ನೆಡೆದಾಗ ಅವನು ಧ್ವಜದ ಕೆಳಗೆ ಶಿಸ್ತಿನಿಂದ ನಿಂತುಕೊಳ್ಳುತ್ತಿದ್ದ.

ಯೂರಿಪಿನ್ ಕೆಲ ವರ್ಷಗಳಿಂದ ಗ್ರಿಗೋರಿಯೊಂದಿಗೆ ಒಂದೇ ಸುರಂಗದಲ್ಲಿ ವಾಸಮಾಡುತ್ತಿದ್ದ. ಒಮ್ಮೆ ಯೂರಿಪಿನ್ ಹೇಳಿದ—"ನೆನ[illegible]ದೆ. ಬೇರೆ [illegible]ವುದಿಲ್ಲ. ಕೊಸೆಕರಾದ ನಮ್ಮ ಒಂದೇ ಒಂದು ಬೇಡಿಕೆ [illegible]—[illegible] ಸಂಗಾತಿ[illegible]? [illegible] ಕೊಡುತ್ತಾರೆ? ನಮಗೆ ಭೂಮಿಯ ಕೊರತೆ ಇಲ್ಲ."

"ನೀನು ಸದಾ ವಿಕಪಕ್ಷೀಯವಾಗಿಯೆ ಯೋಚಿಸುತ್ತಿ"—ಗ್ರಿಗೋರಿಯ ಸ್ವರದಲ್ಲಿ ಸಂಕೋಚವಿತ್ತು.

"ನೀನು ಮೂರ್ಖತನದ ಮಾತುಗಳನ್ನಾಡುತ್ತಿದ್ದಿ. ನೀನಿನ್ನೂ ನವಯುವಕ. ಪ್ರಪಂಚವನ್ನು ನೋಡಿಲ್ಲ. ಸ್ವಲ್ಪ ದಿನ ತಾಳು. ನನ್ನ ಮಾತು ಸರಿಯೆಂಬುದು ಗೊತ್ತಾಗುತ್ತದೆ"—ಹೀಗೆ ಇಂಥ ಚರ್ಚೆಗಳು ಇದೇ ರೀತಿ ಕೊನೆಗೊಳ್ಳುತ್ತಿದ್ದವು.

ಗ್ರಿಗೋರಿಯ ತುಕಡಿ ಒಂದು ದಿನ ಶತ್ರುಗಳನ್ನೆದುರಿಸಲು ಹೊರಟಿತು. ಶತ್ರುಗಳು ಹಾರಿಸಿದ್ದ ಗುಂಡುಗಳ ಪ್ರಥಮ ಸುತ್ತಿನಲ್ಲೇ ಗ್ರಿಗೋರಿ ದೂರಕ್ಕೆಸೆಯಲ್ಪಟ್ಟ. ಚೇತರಿಸಿಕೊಳ್ಳುತ್ತ ನೆಲದ ಮೇಲೆ ಉರುಳಿದ. [illegible] ಮಿಶಾಕೊಶೆವ್ಯಾನ ಭುಜಕ್ಕೆ ನೇತಾಡಿಕೊಂಡು ಕಾಡಿಗೆ ನುಗ್ಗಿದ.

ಯುದ್ಧದ ಮೂರನೇ ವರ್ಷ. ಊರಿನಲ್ಲಿ ಅದರ ಪ್ರಭಾವ ಸ್ಪಷ್ಟವಾಗಿ ಕಂಡುಬಂತು. ಗಂಡಸರೆಲ್ಲ ಹೊರಟುಹೋದ ಮೇಲೆ ಗುಡಿಸಲುಗಳನ್ನು ನೋಡಿಕೊಳ್ಳುವವರು ಯಾರು? ಸೂರುಗಳಲ್ಲಿ ತೂತುಗಳು ಕಾಣಿಸಿಕೊಂಡವು. ಅಂಗಳಗಳಲ್ಲೆಲ್ಲ ಹುಲ್ಲು ಬೆಳೆಯಿತು. [illegible] ಮೆಲಖೊವ್‌ನ ಮನೆ ಮಾತ್ರ ತನ್ನ ಹಿಂದಿನ ಆಕೃತಿಯನ್ನೇ ಉಳಿಸಿಕೊಂಡಿತ್ತು. ಪ್ಯೋತ್ರ ಮತ್ತು ಗ್ರಿಗೋರಿ ಮನೆಯಿಂದ ದೂರವಿದ್ದರಷ್ಟೆ. ನತಾಲ್ಯಾ ಒಂದು ಗಂಡು ಮಗುವನ್ನೂ ಒಂದು ಹೆಣ್ಣು ಮಗುವನ್ನೂ ಹೆತ್ತದ್ದರಿಂದ ಅವಳ ಅತ್ತೆ ಮಾವಂದಿರು ಸಂತೋಷದಲ್ಲಿದ್ದರು.

೧೦

ಮಾರ್ಚಿನಲ್ಲಾದ ಕ್ರಾಂತಿಗೆ ಮುನ್ನ ಪದಾತಿ ಸೇನೆಯ ಮೊದಲ ವಿಭಾಗವನ್ನು ಡಾನ್‌ಕೊಸೆಕ್ ರೆಜಿಮೆಂಟಿನ ೧೭ನೇ ವಿಭಾಗದೊಂದಿಗೆ ಪೆಟ್ರೋಗ್ರಾಡಿನ ಉದ್ರಿಕ್ತ ವಾತಾವರಣವನ್ನು ಹತೋಟಿಯಲ್ಲಿ ತರಲು ಕಳುಹಿಸಲಾಯಿತು. ಆ ಸಂದರ್ಭ

ತುಕಡಿಗಳು ರೈಲಿನಲ್ಲಿ ಪೆಟ್ರೋಗ್ರಾಡಿಗೆ ಹೊರಟವು. ಆದರೆ ಘಟನೆಗಳು ರೈಲಿಗಿಂತಲೂ ಮಿಗಿಲಾದ ವೇಗದಿಂದ ಸಂಭವಿಸುತ್ತಿದ್ದವು. ರೈಲು, ಹೊರಡುವ ದಿನವೇ ಝಾರ್ ಚಕ್ರವರ್ತಿ ಸಿಂಹಾಸನ ಬಿಟ್ಟಿದ್ದಾರೆಂಬ ವದಂತಿ ಹಬ್ಬಿತು. ರೆಜಿಗಾನ್ ನಿಲ್ದಾಣದಲ್ಲಿ ೨೭ ನೇ ಕೊಸೆಕ್ ರೆಜಿಮೆಂಟನ್ನು ರೈಲುಗಾಡಿಯಿಂದ ಇಳಿಸಲಾಯಿತು. ಕಮಾಂಡರ್ ಅಲ್ಲಿಗೆ ಬಂದು,

"ಕೊಸೆಕರೇ,ಜನತೆಯ ಅಪೇಕ್ಷೆಯಂತೆ ಝಾರ್ ರಾಜೀನಾಮೆ ನೀಡಿದ್ದಾರೆ. ನಡುಗಾಲ ಸರಕಾರ ಸ್ಥಾಪನೆಗೊಂಡಿದೆ. ದೇಶವನ್ನು ರಕ್ಷಿಸುವುದೇ ಕೊಸೆಕರ ಏಕೈಕ ಕರ್ತವ್ಯವಾಗಿದೆ. ಸರಕಾರ ಹೇಗಿರಬೇಕೆಂಬುದನ್ನು ಜನತೆಯೇ ನಿರ್ಧರಿಸಬೇಕು. ಸೇನೆಗೆ ರಾಜಕೀಯದೊಂದಿಗೆ ಯಾವ ಸಂಬಂಧವೂ ಇಲ್ಲ. ಕೊಸೆಕರೇ, ನೀವು ನಿಮ್ಮ ಅಧಿಕಾರಿಗಳ ಆಜ್ಞೆಗಳನ್ನು ಪಾಲಿಸುತ್ತ ಹಿಂದಿಗಿಂದಲೂ ಹೆಚ್ಚು ಉತ್ಸಾಹದೊಂದಿಗೆ ರಾಷ್ಟ್ರ ರಕ್ಷಣೆಯ ಕಾರ್ಯದಲ್ಲಿ ನಿರತರಾಗಿ," ಎಂದು ಭಾಷಣ ಬಿಗಿದ.

ಜುಲೈ ತಿಂಗಳು ಬಂತು. ಒಂದು ಕ್ಷಣವೂ ವಿಳಂಬ ಮಾಡದೆ ಪೆಟ್ರೋಗ್ರಾಡಿನತ್ತ ಹೋಗುವಂತೆ ಕೊಸೆಕರ ರೆಜಿಮೆಂಟಿಗೆ ಆದೇಶ ನೀಡಲಾಯಿತು. ನಾಲ್ಕು ದಿನಗಳೊಳಗೆ ಕೊಸೆಕರ ಕುದುರೆಗಳ ಖುರಪುಟದ ಸದ್ದು ರಾಜಧಾನಿಯ ರಸ್ತೆಗಳಲ್ಲಿ ಮೊಳಗಿತು. ಅವರಿಗೆ ಪರಸ್ಪರ ವಿರೋಧವಾದ ಆದೇಶಗಳು ಬರುತ್ತಿದ್ದವು. ಒಂದು ತಂತಿ ಸಂದೇಶದಲ್ಲಿ ಕಾರ್ನಿಲೊವ್ ದೇಶಭಕ್ತಿಯ ಶಪಥ ಮಾಡಿದ್ದ. ತನ್ನ ಕರ್ತವ್ಯನಿಷ್ಠೆ ದೇಶಪ್ರೇಮದಿಂದಲೇ ಪ್ರೇರೇಪಿತವಾಗಿದೆಯೆಂದು ಹೇಳಿದ್ದ. ತನ್ನನ್ನು ದೇಶದ ವರಪುತ್ರನೆಂದೂ ಕರೆದುಕೊಂಡಿದ್ದ. ಕೊನೆಯಲ್ಲಿ ತಾನು ಕೆರೆನ್‌ಸ್ಕಿ ಸರಕಾರದ ಆಜ್ಞೆಯನ್ನು ಪಾಲಿಸಲು ನಿರಾಕರಿಸಿದ್ದೇನೆಂದೂ ಬರೆದಿದ್ದ. ಈ ಸರಕಾರ ಲಂಚದ ಆಧಾರದಿಂದಲೆ ನಡೆಯುತ್ತಿದೆಯೆಂದೂ, ಇದರಿಂದಾಗಿ ರಶಿಯ ನರಕದತ್ತ ಸಾಗುತ್ತಿದೆಯೆಂದೂ, ಇದರ ಕೈಯಲ್ಲಿ ಜನತೆಯ ಹಿತ ಅಥವಾ ಸ್ವಾತಂತ್ರ್ಯ-ಸುರಕ್ಷಿತವಾಗಿಲ್ಲವೆಂದೂ ಬರೆದಿದ್ದ. ಸ್ವಲ್ಪ ಸಮಯದ ನಂತರ ಕಮಾಂಡರ್ ಇನ್ನೊಂದು ತಂತಿಯನ್ನು ಓದಿ ಹೇಳಿದ. ಅದರಲ್ಲಿ ಕೊರ್ನಿಲೋವ್ ದೇಶದ್ರೋಹಿಯೆಂದು ಕೆರೆನ್‌ಸ್ಕಿ ಬರೆದಿದ್ದ.

ಕೆರೆನ್‌ಸ್ಕಿ ಸರಕಾರವನ್ನು ಪದಚ್ಯುತಗೊಳಿಸಲು ಕೋರ್ನಿಲೊವ್ ಕರೆದಿದ್ದ ಸೇನೆಯ ತುಕಡಿಗಳು ಪಶ್ಚಿಮ ದಕ್ಷಿಣ ಪೂರ್ವ ಹಾಗೂ ಇತರ ದಿಕ್ಕುಗಳಿಂದ ಬರುತ್ತಿದ್ದ ಎಂಟು ದಾರಿಗಳಲ್ಲಿ ಹರಡಿಕೊಂಡಿದ್ದವು. ಈ ಸೇನೆಯ ತುಕಡಿಗಳ ಸಂಘಟನೆ ಅಸ್ತವ್ಯಸ್ತವಾಗಿತ್ತು. ಕ್ಷಣಕ್ಷಣಕ್ಕೂ ಬದಲಾಗುತ್ತಿದ್ದ ಪರಸ್ಪರ ವಿರೋಧಿ ಆದೇಶಗಳು ಕೇಳಿ ಬರುತ್ತಿದ್ದುದರಿಂದ ಈ ಅವ್ಯವಸ್ಥೆ ಉಂಟಾಗಿತ್ತು. ರೈಲ್ವೆ ಕಾರ್ಮಿಕರ ವಿರೋಧದಿಂದಾಗಿ ಸಮಸ್ಯೆ ಮತ್ತಷ್ಟು ಜಟಿಲವಾಯಿತು. ರಾತ್ರಿಯಾಗುವುದರಲ್ಲಿತ್ತು. ಲಾಟೀನಿನತ್ತ ಮುಖ ತಿರುಗಿಸಿ ಮೆಲ್ಲನೆ ಬಂಚಕ್ ಹೇಳತೊಡಗಿದ:

"ಸಹೋದರರೇ, ನೀವು ಪೆಟ್ರೋಗ್ರಾಡಿಗೆ ಹೋಗುವುದು ಬೇಡ. ಅಲ್ಲಿ ಯಾವ ಬಂಡುಕೋರರೂ ಇಲ್ಲ. ಕೆರೆನ್‌ಸ್ಕಿಯ ಸರಕಾರವನ್ನು ಕಿತ್ತೊಗೆಯಲು ನಿಮ್ಮನ್ನು ಅಲ್ಲಿಗೆ ಕಳುಹಿಸುತ್ತಿದ್ದಾರೆ. ಇವರ ಮುಖಂಡತ್ವ ಝಾರನ ಮಾಜಿ ಸೇನಾಪತಿ ಕೋರ್ನಿಲೊವ್‌ನ ಕೈಯಲ್ಲಿ. ಆತ ಕೆರೆನ್‌ಸ್ಕಿಯನ್ನೇಕೆ ಪದಚ್ಯುತಗೊಳಿಸಬೇಕೆನ್ನುತ್ತಾನೆಂದು ಗೊತ್ತೆ? ಝಾರನ ಸಿಂಹಾಸನದಲ್ಲಿ ತಾನು ಕೂಡಬೇಕೆಂಬಾಸೆಯಿಂದ. ಝಾರನಿಗಿಂತ ಕೆರೆನ್‌ಸ್ಕಿ ಎಷ್ಟೋ ವಾಸಿ. ಆದರೆ ಎಲ್ಲಕ್ಕಿಂತಲೂ ಮಿಗಿಲಾದ ವ್ಯವಸ್ಥೆ ಬರಬೇಕಾದರೆ, ಶಾಸನ ಬೋಲ್‌ಶೆವಿಕರ ಕೈಗೆ ಸಿಗಬೇಕು. ಆಗ ಯುದ್ಧ ನಿಲ್ಲುತ್ತದೆ. ನಾವು ನೆಮ್ಮದಿಯಿಂದಿರಬಹುದು. ನಾನು ಕೆರೆನ್-ಸ್ಕಿಯ ಪಕ್ಷಪಾತಿಯಲ್ಲ. ಆತ ಎಷ್ಟು ಬೇಗ ನಾಶವಾದಷ್ಟೂ ಒಳ್ಳೆಯದು. ಆದರೆ ಅವನ ಸ್ಥಾನದಲ್ಲಿ ಕೋರ್ನಿಲೊವ್ ಕುಳಿತು ಕಾರ್ಮಿಕರ ನೆತ್ತರಿನಿಂದ ಓಕುಳಿ ಆಡುತ್ತಾನೆ. ಆದ್ದರಿಂದ ನೀವೀಗ ಕೆರೆನ್‌ಸ್ಕಿಯ ಸರಕಾರವನ್ನು ರಕ್ಷಿಸಬೇಕು. ನಮಗದನ್ನು ಈಗ ರಕ್ಷಿಸಲು ಸಾಧ್ಯವಾದರೆ, ಮುಂದೊಂದು ದಿನ ಅವನ ಕೈಯಿಂದ ಅಧಿಕಾರವನ್ನು ಕಸಿದುಕೊಳ್ಳಲು ಸಾಧ್ಯವಾಗ

ಬಹುದು. ಅದನ್ನು ಖಂಡಿತವಾಗಿ ಕಸಿದುಕೊಳ್ಳುತ್ತೇವಷ್ಟೇ ಅಲ್ಲ, ಶ್ರಮಜೀವಿಗಳ ಕೈಗೆ ಕೊಡುತ್ತೇವೆ."

"ಸ್ವಲ್ಪ ಯೋಚಿಸು. ಬೋಲ್‌ಶೆವಿಕರ ಶಾಸನ ಬಂದಾಗ ಆಳಿಕೆ ಯಾರ ಕೈಯಲ್ಲಿರುತ್ತದೆ? ಜನ ಯಾರನ್ನು ಚುನಾಯಿಸುತ್ತಾರೋ ಅವರ ಕೈಯಲ್ಲಿರುತ್ತದೆ- ನಿನ್ನ ಕೈಯಲ್ಲಿ ಅಥವಾ ಮಾಗಿನ ಕೈಯಲ್ಲಿ ಇಲ್ಲವೆ, ಮುದಿ ಅಜ್ಜಯ್ಯನ ಕೈಯಲ್ಲಿ. ಅದು ಮತದಾನದ ಮೂಲಕ ಆಯ್ಕೆಯಾಗುವ ಸರಕಾರ. ಅದನ್ನು ಪೂರ್ಣ ಪಂಚಾಯತ್ ರಾಜ್ಯ ವ್ಯವಸ್ಥೆಯೆಂದೇ ತಿಳಿದುಕೋ."

"ಅದರ ಸರ್ವೋನ್ನತ ಸ್ಥಾನದಲ್ಲಿ ಯಾರಿರುತ್ತಾರೆ?"

"ಜನರಿಂದ ಆಯ್ಕೆಯಾದವನೆ ಇರುತ್ತಾನೆ. ಜನರು ನಿನ್ನನ್ನು ಚುನಾಯಿಸಿದರೆ ನೀನೇ ಇರುತ್ತಿ."

ಈ ಎಲ್ಲ ಪ್ರಶ್ನೆಗಳಿಗೆ ಬಂಚಕ್ ಉತ್ತರ ಕೊಡುತ್ತ ಹೋದ. ಮಧ್ಯ ರಾತ್ರಿಯ ಹೊತ್ತಿಗೆ ಸಭೆ ಮುಗಿಯಿತು. ಎಂಟು ಗಂಟೆಗೆ ಆತ ಸ್ವತಃ ರೈಲು ಗಾಡಿಯ ಬಳಿ ಬಂದ.

ಆತ ಮಾಗಿನ್ನನೊಂದಿಗೆ ಸಭೆ ನಡೆಯುತ್ತಿದ್ದ ಸ್ಥಳಕ್ಕೆ ಹೋದ. ಅಲ್ಲಿ ಕೊಸಾಕರ ದೊಡ್ಡ ಗುಂಪು ಸೇರಿತ್ತು. ಕಾಲ್ಮಿಕೋವ್ ಮಾತನಾಡುತ್ತಿದ್ದ–"ವಿಜಯಗಳಿಸುವ ತನಕ ನಾವು ಈ ಹೋರಾಟವನ್ನು ಮುಂದುವರಿಸಲೇಬೇಕು. ಅವರು ನಮ್ಮನ್ನು ನಂಬುತ್ತಾರೆ. ನಾವು ವಿಶ್ವಾಸಾರ್ಹರೆಂಬುದನ್ನು ತೋರಿಸಿಕೊಡಬೇಕಾಗಿದೆ. ಬೋಲ್‌ಶೆವಿಕರೂ ಕೆರೆನ್‌ಸ್ಕಿಯ ದೂತರೂ ಸೇನೆ ಮುಂದುವರಿಯದಂತೆ ಅಡೆತಡೆಗಳನ್ನೊಡ್ಡುತ್ತಿದ್ದಾರೆ. ರೈಲಿನಿಂದ ಬರಲು ಸಾಧ್ಯವಾಗದಿದ್ದರೆ ಕುದುರೆಗಳ ಮೇಲಾದರೂ ಬರಬೇಕೆಂದು ನಮಗೆ ಸೇನಾಪತಿ ಅಜ್ಞೆ ನೀಡಿದ್ದಾರೆ."

ಬಂಚುಕ್ ಕೊಸಾಕರ ನಡುವೆ ಬಂದ. ತಾನ

ನಿಂತಲ್ಲಿಂದಲೇ, "ಕೊಸೆಕ್ ಸಹೋದರರೇ, ನನ್ನನ್ನು ಪೆಟ್ರೋಗ್ರಾಡಿನ ಕಾರ್ಮಿಕರು ಹಾಗೂ ಸೈನಿಕರು ಕಳುಹಿಸಿದ್ದಾರೆ. ನಿಮಗೆ ಗೊತ್ತೇ ನಿಮ್ಮ ಅಧಿಕಾರಿಗಳು ನಿಮ್ಮ ಮೂಲಕ ನಮ್ಮ ಸೋದರರ ರಕ್ತ ಕುಡಿಯಲು ಹಾಗೂ ಕ್ರಾಂತಿಯನ್ನು ವಿಫಲಗೊಳಿಸಲು ಬಯಸುತ್ತಾರೆ. ಪೆಟ್ರೋಗ್ರಾಡಿನ ಕಾರ್ಮಿಕರು ಮತ್ತು ಸೈನಿಕರು ತಮಗೆ ಹಾರ್ದಿಕ ಶುಭಾಶಯ ಕಳುಹಿಸಿದ್ದಾರೆ. ತಾವು ಅವರ ಶತ್ರುಗಳಾಗದೆ ಮಿತ್ರರಾಗಬೇಕೆಂಬುದು ಅವರ ಅಪೇಕ್ಷೆ," ಎಂದು ಎತ್ತರದ ಧ್ವನಿಯಲ್ಲಿ ಹೇಳಿದ.

ಚಿಕ್‌ಮಾಸವ್ ಪೀಪಾಯಿ ಹತ್ತಿ ಭುಜಗಳನ್ನು ಹಾರಿಸುತ್ತ, "ನಾವು ಪೆಟ್ರೋಗ್ರಾಡಿಗೆ ಹೋಗುವುದಿಲ್ಲ. ರೈಲು ಗಾಡಿಯಿಂದ ಕೆಳಗಿಳಿಯುವುದಿಲ್ಲ. ಕೊಸೆಕರು ಕೋರ್ನಿಲೊವ್‌ನಿಗೆ ಸಹಾಯ ಮಾಡುವ ಮಾತು ಕೊಟ್ಟಿದ್ದಾರೆಂದು ಕಾಲ್ಮಿಕೊವ್ ಹೇಳಿದ. ನಮ್ಮ ಸಹಾಯವನ್ನು ಕೋರಿದವರು ಯಾರು? ನಾವು ಕೋರ್ನಿಲೊವ್‌ನಿಗೆ ಮಾತು ಕೊಟ್ಟಿಲ್ಲ. ಅಧಿಕಾರಿಗಳು ಮಾತು ಕೊಟ್ಟರು. ಅವರೇ ಅವನಿಗೆ ಸಹಾಯ ಮಾಡಲಿ," ಎಂದು ಕೂಗಿಕೊಂಡ. ಸೆಪ್ಟೆಂಬರ್ ಒಂದರಂದು ಅಲೆಕ್ಸೆವಿಚ್ ಪ್ರಧಾನ ಸೇನಾಪತಿಯ ಕಾರ್ಯಾಲಯವನ್ನು ವಶಕ್ಕೆ ತೆಗೆದುಕೊಂಡ. ಅದೇ ದಿನ ಸಂಜೆ ಹಂಗಾಮಿ ಸರಕಾರದ ಆಜ್ಞೆಯಂತೆ ಕೋರ್ನಿಲೊವ್‌ನನ್ನು ಬಂಧಿಸಿದ. ಕೋರ್ನಿಲೊವ್‌ನೊಂದಿಗಿದ್ದ ಇಬ್ಬರು ಸೇನಾಪತಿಗಳನ್ನು ಸಹ ಬಂಧಿಸಿದ. ಮರುದಿನ ದಕ್ಷಿಣ ಪಶ್ಚಿಮ ರಂಗದ ಕಮಾಂಡರ್ ಆಗಿದ್ದ ಡೆನಿಕಿನ್ ಹಾಗೂ ಅವನ ಮೂವರು ಸಂಗಾತಿಗಳನ್ನು ದಸ್ತಗಿರಿ ಮಾಡಲಾಯಿತು. ಹೀಗೆ ಕೋರ್ನಿಲೊವ್‌ನ ವಿದ್ರೋಹ ಕೊನೆಗೊಂಡಿತಾದರೂ ನಂತರ ಅವರಿಂದಾಗಿಯೇ ಒಂದು ಹೊಸ ಬಂಡಾಯ ಪ್ರಾರಂಭವಾಯಿತು.

## ೧೧

ಅಕ್ಟೋಬರ್ ಕೊನೆಯಲ್ಲಿ ಒಂದು ದಿನ ಮುಂಜಾನೆ, ತನ್ನ ಕಂಪೆನಿಯೊಂದಿಗೆ ಚಳಿಗಾಲದ ಅರಮನೆಯ ಮೈದಾನಕ್ಕೆ ಬರಬೇಕೆಂದು ಲಿಸ್ತನಿಸ್ಕಿಗೆ ರೆಜಿಮೆಂಟಿನ ಕಮಾಂಡರ್ ಆದೇಶಪತ್ರ. ಚಳಿಗಾಲದ ಅರಮನೆಯ ಮೈದಾನದಲ್ಲಿ ಒಂದು ಶಸ್ತ್ರಸಜ್ಜಿತ ಗಾಡಿ ಅತ್ತಿತ್ತ ತಿರುಗಾಡುತ್ತಿತ್ತು. ಅದಕ್ಕೆ ಕ್ಯಾಡೆಟ್‌ಗಳ ಬೆಂಗಾವಲಿತ್ತು. ಅರಮನೆಯ ಬಾಗಿಲಿನಲ್ಲಿ ನಾಲ್ಕನೆಯ ಕಂಪೆನಿಯ ಅಧಿಕಾರಿಗಳ ಹಾಗೂ ಕ್ಯಾಡೆಟ್‌ಗಳ ಒಂದು ದಳ ನಿಂತಿತ್ತು.

"ಈವತ್ತು ಬೋಲ್‌ಶೆವಿಕರು ಆಕ್ರಮಣವೆಸಗಲಿದ್ದಾರೆಂಬುದು ನಿನಗೆ ತಿಳಿದಿದೆಯೇ?" ಎಂದು ಲಿಸ್ತನಿಸ್ಕಿಯನ್ನು ಕಮಾಂಡರ್ ಕೇಳಿದ. ಲಿಸ್ತನಿಸ್ಕಿ ತನ್ನ ಕಂಪೆನಿಯನ್ನು ಅಂಗಳಕ್ಕೆ ಕೊಂಡು ಹೋದ.

ಸಂಜೆ ಸಾಧಾರಣವಾದ ಹಿಮಪಾತವಾಯಿತು. ಕೊನೆಗೆ ಲೆಗುತಿನ್ ಕೊಸೆಕರನ್ನು ಗೋಡೆಯ ಬಳಿ ಕರೆದುಕೊಂಡು ಹೋಗಿ, ಅರಮನೆಯ ಕಿಟಕಿಯತ್ತ ಕಣ್ಣಿಟ್ಟು ಹೇಳಿದ— "ಕೊಸೆಕ್ ಸೋದರರೇ, ಪರಿಸ್ಥಿತಿ ಕೆಟ್ಟಿದೆ. ಇಲ್ಲಿ ನಮಗೆ ಯಾವ ಕೆಲಸವೂ ಇಲ್ಲ. ನಾವೀಗ ಹೊರಗೆ ಹೋಗುವುದೊಳಿತು. ಇಲ್ಲಿದ್ದರೆ ಸುಮ್ಮನೆ ಕಷ್ಟಕ್ಕೊಳಗಾಗಬೇಕಾದೀತು. ಅವರು ಅರಮನೆಯ ಮೇಲೆ ಗುಂಡು ಹಾರಿಸಿದಾಗ ನಮ್ಮ ಗತಿ ಏನಾಗಬಹುದು? ಅಧಿಕಾರಿಗಳು ಓಡಿ ಹೋಗಿದ್ದಾರೆ. ನಮ್ಮನ್ನಿಲ್ಲಿ ಸಾಯಲು ಬಿಟ್ಟಿದ್ದಾರೆ. ನಾವು ನಮ್ಮ ಮನೆಗಳಿಗೆ ಮರಳುವಾ."

ಕೆಲದಿನಗಳ ನಂತರ ಸರಕಾರವೇ ಅಧಿಕೃತ ಸುದ್ದಿಯನ್ನು ಪ್ರಕಟಿಸಿತು. ಹಂಗಾಮಿ ಸರಕಾರ ಉರುಳಿ ಬೋಲ್‌ಶೆವಿಕರು ಅಧಿಕಾರ ವಹಿಸಿಕೊಂಡಿದ್ದರು.

೧೯೧೭ರ ಚಳಿಗಾಲದ ಕೊನೆಯಲ್ಲಿ ಕೊಸೆಕರು ರಣರಂಗದಿಂದ ತಮ್ಮ ಊರುಗಳಿಗೆ ಮರಳತೊಡಗಿದರು. ಫೆಡೋಟ್, ರ್ಯಾಕೊವ್, ಮಿಶಾ ಕೊಶೆವ್ಯಾ ಮೊದಲಾದವರೆಲ್ಲ ಒಬ್ಬೊಬ್ಬರಾಗಿ ಬಂದರು. ಫೆಡೋಟ್ ಒಂದು ಕೆಂಪು ಕುದುರೆಯ ಮೇಲೆ ಬಂದ. ತಾನು ಇದೇ ಕುದುರೆಯನ್ನೇರಿ ವೆರೋನೆಸ್‌ನಿಂದ ಬಂದಿರುವುದಾಗಿಯೂ, ದಾರಿಯಲ್ಲಿ ಸಿಕ್ಕಿದ ಊರುಗಳಲ್ಲಿ

ಕ್ರಾಂತಿಯ ಜ್ವಾಲೆಗಳು ಪ್ರಜ್ವಲಿಸುತ್ತಿವೆ ಯೆಂದೂ ಆತ ಹೇಳಿದ. ಫ್ರೋಮಿತ್ರ ಇಬ್ಬರು ಸಂಗಾತಿಗಳೊಂದಿಗೆ ಓಡಿದ. ಅವನ ರೆಜಿಮೆಂಟ್ ಬೋಲ್ಶೆವಿಕರಿಗೆ ಬೆಂಬಲ ನೀಡಿತ್ತು. ಆದ್ದರಿಂದ ಆತ ಓಡಿ ಬಂದಿದ್ದ. ಗ್ರಿಗೋರಿ ಬೋಲ್ಶೆವಿಕರೊಂದಿಗೆ ಇದ್ದನೆಂದೂ ಈಗ ಕ್ರೆಮ್ಲಿನ್‌ಕಾವಲ್ಲಿ ಹೋರಾಡುತ್ತಿದ್ದನೆಂದೂ ಫ್ರೋಮಿತ್ರ ಹಾಗೂ ಅವನ ಸಂಗಾತಿಗಳು ಹೇಳಿದರು.

೧೯೧೭ರ ಜನವರಿಯಲ್ಲಿ ಗ್ರಿಗೋರಿಗೆ ಅಧಿಕಾರಿಯೆಂದು ಬಡ್ತಿ ಸಿಕ್ಕಿತು. ನವಂಬರದ ರಾತ್ರಿಯ ನಂತರ ಅವನನ್ನು ಕಂಪೆನಿಯ ಕಮಾಂಡರ್‌ನ ಹುದ್ದೆಗೆ ನೇಮಿಸಲಾಯಿತು. ಇದೇ ಹೊತ್ತಿಗೆ ಅವನ ವಿಚಾರಗಳಲ್ಲಿ ಗಂಭೀರ ಪರಿವರ್ತನೆ ಕಂಡುಬಂತು. ಮನೆಯಿಂದ ಮರಳಿದೊಡನೆ ಅವನಿಗೆ ಇಜವಾರಿನ್ನನ ಪರಿಚಯವಾಯಿತು. ಇಜವಾರಿನ್ ಯೋಗ್ಯತಾವಂತ, ಪ್ರತಿಭಾವಂತ, ವಿದ್ಯಾವಂತ ಹಾಗೂ ಸಾಧಾರಣ ಕೊಸೆಕ್ ಅಧಿಕಾರಿಗಳಿಗಿಂತ [illegible] ಮನುಷ್ಯ. ಡಾನ್ ಪ್ರದೇಶ ಸ್ವತಂತ್ರವಾಗಿ, ಅಲ್ಲಿಯ ಮಣ್ಣಿನ ಮಕ್ಕಳು ಉಕ್ರೈನ್ ಮತ್ತು ರಶಿಯನ್ನರೊಡನೆ ಯಾವ ತೆರನಾ ಸಂಬಂಧ ಹೊಂದಿರುವ ಬದ್ಧತೆ ಅರಿತು ಹೋಗಬೇಕೆಂದು ಆತ ಪ್ರತಿಪಾದಿಸುತ್ತಿದ್ದ.

ಗ್ರಿಗೋರಿ ತನ್ನ ಮಿತ್ರ ಪೊಗ್ರೆಬ್‌ದೋವ್‌ನನ್ನು ಭೇಟಿಯಾಗಲು ಹೋಗಿದ್ದಾಗ ಅಲ್ಲಿ ಒಬ್ಬ ದಷ್ಟಪುಷ್ಟ ಕೊಸೆಕ್‌ನನ್ನು ಕಂಡ. ಆ ಕೊಸೆಕ್‌ನ ಭುಜದಲ್ಲಿ ಸಾರ್ಜೆಂಟ್ ಮೇಜರ್‌ನ ಲಾಂಛನವಿತ್ತು. ಅವನ ಹೆಸರು ಪೊಡ್‌ತಿಲ್‌ಖೊವ್ ಎಂದಾಗಿತ್ತು.

"ಡಾನ್ ಪ್ರದೇಶದಲ್ಲಿ ಕೊಸೆಕ್ ಮಿಲಿಟರಿ ಸಮಿತಿಯ ಆಳ್ವಿಕೆ ಪ್ರಾರಂಭವಾಗಲಿದೆ."—ಗ್ರಿಗೋರಿ ಹೇಳಿದ.

"ತಮ್ಮ ಮಾತಿನ ಅರ್ಥ ಮಿಲಿಟರಿಯ ಮುಖಂಡ ಕಾಲೆದಿನ್‌ನ ಆಳ್ವಿಕೆ ಪ್ರಾರಂಭವಾಗಲಿದೆ ಎಂದೇನು?" ಪೊದ್‌ತಿಲ್‌ಖೊವ್ ಕೇಳಿದ.

"ಎರಡೂ ಒಂದೇ. ಅವರಲ್ಲಿ ಯಾವ ಅಂತರ ಇದೆ?"

"ಮಿಲಿಟರಿ ಮುಖಂಡರು ಜನರ ನೆತ್ತರನ್ನು ಹೀರುತ್ತಾರೆ. ನೀವು ಯಾವನಾದರೂ ಖಾವಿಂದನ ಬಳಿ ಹೋಗಬೇಕಾಗುತ್ತದೆ. ಆತ ನಿಮ್ಮನ್ನು ಚಾಟಿಯಿಂದ ಥಳಿಸುತ್ತಾನೆ. ನಿಮ್ಮ ಕುತ್ತಿಗೆಗೊಂದು ದೊಡ್ಡ ಬೀಸುಕಲ್ಲನ್ನು ಕಟ್ಟುತ್ತಾನೆ. ಇದರ ಹೊರತು ನಿಮಗೆ ಮತ್ತೇನೂ ದೊರೆಯಲಾರದು."

"ಹಾಗಾದರೆ ನಾವೇನು ಮಾಡಬೇಕು?"—ಗ್ರಿಗೋರಿ ಕೇಳಿದ.

"ನೀವು ಉಳಲು ಪ್ರಾರಂಭಿಸಿದ್ದೀರಿ. ಇನ್ನು ನೀವು ಬಿತ್ತಬೇಕು. ಝಾರನ ಸರಕಾರವನ್ನು ವಜಾಮಾಡಿ, ಕ್ರಾಂತಿ ವಿರೋಧಿ ಶಕ್ತಿಗಳನ್ನು ಸದೆಬಡಿದು ಜನತೆಯ ಸರಕಾರವನ್ನು ಸ್ಥಾಪಿಸಲು ಪ್ರಯತ್ನಿಸಬೇಕು. ಪ್ರಪಂಚದಲ್ಲೆಲ್ಲ ಜನತಾ ಸರಕಾರಗಳು ಅಧಿಕಾರಕ್ಕೆ ಬಂದಾಗ ನಮ್ಮ ಅಭ್ಯುದಯವಾಗುತ್ತದೆ. ಆಗ ಎಲ್ಲ ಯುದ್ಧಗಳು ಕೊನೆಗಾಣುತ್ತವೆ."

ಗ್ರಿಗೋರಿ ಕಿಟಕಿಯ ಬಳಿಹೋದ. ವೈಚಾರಿಕ ಗೊಂದಲದಿಂದಾಗಿ ಅವನ ಮನಸ್ಸಿನಲ್ಲಿ ಕತ್ತಲು ತುಂಬಿತ್ತು. ಆತ ಪ್ರಕಾಶ ಕಿರಣಗಳನ್ನು ಕಾಣಲು ವ್ಯಾಕುಲನಾಗಿದ್ದ. ಯಾವುದಾದರೂ ನಿರ್ಧಾರಕ್ಕೆ ಬರಲು ಪ್ರಯತ್ನಿಸುತ್ತಿದ್ದ.

## ೧೨

ಸಭೆ ಜರುಗಲಿದ್ದ ಮೈದಾನ ಜನರಿಂದ ತುಂಬಿತ್ತು. ಆಗಂತುಕ ಅಧಿಕಾರಿ ಮಾತನಾಡಿದ. "ಸಿಟ್ರಿಕೊವ್ ಎಂಬ ಗ್ರಾಮದಲ್ಲಿ ಏನಾಯಿತೆಂಬುದನ್ನು ತಾವು ಕೇಳಿರಬಹುದು. ಎರಡು ದಿನಗಳ ಹಿಂದೆ ಅಲ್ಲಿಗೆ ಕೆಂಪುಸೇನೆಯ ತುಕಡಿ ಬಂದಿತ್ತು. ಆ ಕೆಂಪು ಸೈನಿಕರು ಊರನ್ನು ತಲುಪಿದಾಕ್ಷಣ ಹೆಂಗಸರ ಶೀಲಹರಣ ಮಾಡಿದರು. ಕೊಸೆಕರ ಸಂಪತ್ತನ್ನು ಕಸಿದುಕೊಳ್ಳ ತೊಡಗಿದರು. ಜನರನ್ನು ಕಾನೂನುಬಾಹಿರವಾಗಿ ದಸ್ತಗಿರಿ ಮಾಡತೊಡಗಿದರು. ನೆರೆಕರೆಯ ಗ್ರಾಮಸ್ಥರಿಗೆ ಈ ಸುದ್ದಿ ತಿಳಿದಾಗ ಅವರು ಕೆಂಪು ಡಕಾಯಿತರ ಮೇಲೆ ಆಕ್ರಮಣಗೈದರು...ಪ್ರತಿ ಸ್ಥಳದಲ್ಲಿ ಸೈನಿಕರ ತುಕಡಿ

ಗಳನ್ನು ಸಿದ್ಧಗೊಳಿಸಲಾಗುತ್ತಿದೆ. ನೀವು ಸಹ ಆ ಜಂಗ್ಲಿ ಡಕಾಯಿತರ ಗುಂಪಿನಿಂದ ಆತ್ಮ ರಕ್ಷಣೆ ಮಾಡಿಕೊಳ್ಳಲು ನಿಮ್ಮದೇ ಆದ ತುಕಡಿ ಗಳನ್ನು ಸಿದ್ಧಪಡಿಸಬೇಕು. ನಾವು ನಮ್ಮದೇ ಆದ ಸರಕಾರವನ್ನು ರಚಿಸಬೇಕಾಗಿದೆ. ನಮಗೆ ಕೆಂಪು ಸರಕಾರ ಬೇಡ. ಅವರು ಸ್ವಾತಂತ್ರ್ಯದ ಹೆಸರಿನಲ್ಲಿ ದುರಾಚಾರವೆಸಗುತ್ತಿದ್ದಾರೆ..." ನಂತರ ಆ ಅಧಿಕಾರಿ ಊರಿನ ಕಮಾಂಡರನನ್ನು ಆರಿಸುವ ಪ್ರಶ್ನೆಯನ್ನು ಜನರ ಮುಂದಿಟ್ಟ.

"ಪ್ಯೋತ್ರನಿಗೆ ಕಮಾಂಡರ್ ಹುದ್ದೆ ಕೊಡಿ."

"ಗ್ರಿಗೋರಿ ಮೊದಲು ಸೈನಿಕನಾಗಿ ದುಡಿಯಲಿ. ನಮ್ಮಲ್ಲಿ ನಂಬಿಕೆ ಹುಟ್ಟಿಸಲಿ" ಜನರ ಸಲಹೆಯಂತೆ, ಪ್ಯೋತ್ರನನ್ನು ಕಮಾಂಡರ ನನ್ನಾಗಿ ನೇಮಿಸಲಾಯಿತು.

ಪೊದ್‌ತಿಲ್‌ಖೊವ್ ಇತ್ತೀಚೆಗೆ ಡಾನ್‌ನ ಸೋವಿಯತ್ ಸರಕಾರದ ಅಧ್ಯಕ್ಷನಾಗಿ ಆಯ್ಕೆಯಾಗಿದ್ದ. ಉತ್ತರದತ್ತ ಮುಂದುವರಿದು, ಅಲ್ಲಿರುವ ಹಳೆಯ ಸೈನಿಕರನ್ನು ಸೇರಿಸಿ ಮೂರು-ನಾಲ್ಕು ರೆಜಿಮೆಂಟುಗಳನ್ನು ಸಿದ್ಧಗೊಳಿಸಬೇಕೆಂದೂ, ಒಂದು ಕಡೆಯಿಂದ ಜರ್ಮನ್ನರ ಆಕ್ರಮಣವನ್ನು ತಡೆದು ಮತ್ತೊಂದು ಕಡೆ ಕ್ರಾಂತಿ ವಿರೋಧಿಗಳನ್ನು ಹತ್ತಿಕ್ಕಬೇಕೆಂದೂ ಲೆಗುತಿನ್ ಸಲಹೆ ನೀಡಿದ. ಇದಕ್ಕಾಗಿ ಐದು ಜನರ ಒಂದು ಸಮಿತಿಯನ್ನು ರಚಿಸಲಾಯಿತು. ಪೊದ್‌ತಿಲ್‌ಖೋವ್ ಆ ಸಮಿತಿಯ ಅಧ್ಯಕ್ಷನಾಗಿದ್ದ.

ದಂಡಯಾತ್ರೆಗೆಂದು ಹೊರಟ ಈ ದಳ ಕೆಲ ದಿನಗಳ ತನಕ ಡಾನ್ ಪ್ರದೇಶದ ಒಳನಾಡಿನಲ್ಲಿ ಸಂಚರಿಸಿತು. ಕೊಸೆಕರ ಗ್ರಾಮಗಳಿಗೆ ಹೋದಾಗ ಪೊದ್‌ತಿಲ್ಖೊವ್ ಮತ್ತು ಇತರ ಮುಖಂಡರಿಗೆ ಆಶ್ಚರ್ಯ ಕಾದಿತ್ತು. ಇವರನ್ನು ನೋಡಿದೊಡನೆ ಜನ ಹೆದರುತ್ತಿದ್ದರು. ಮಾತನಾಡಿಸಲು ಪ್ರಯತ್ನಿಸಿದಾಗ ಜನ ಓಡಿ ಹೋಗುತ್ತಿದ್ದರು. ಒಂದು ಊರಿನ ಹೆಂಗಸೊಬ್ಬಳು ಕೆಂಪು ಸೈನಿಕರನ್ನು ಪ್ರಶ್ನಿಸಿದಳು. "ನೀವು ದರೋಡೆ ಮಾಡಿ ಎಲ್ಲರನ್ನೂ ಗಲ್ಲಿಗೇರಿಸುತ್ತೀರಿ–ಎಂಬ ಸುದ್ದಿ ನಿಜವೆ?"

ಅವರೆಲ್ಲ ಬಂಡಿಯಿಂದ ಕೆಳಗಿಳಿದರು. ಪೊದ್‌ತಿಲ್‌ಖೋವ್ ಒಬ್ಬ ಮುದುಕನಿಗೆ ವಂದಿಸಿ ಕೇಳಿದ:

"ನೀವು ಹಳೆಯ ಧರ್ಮಾವಲಂಬಿಗಳನ್ನೆಲ್ಲ ಕೊಲ್ಲುತ್ತಿದ್ದೀರೆಂದು ಕೇಳಿದ್ದೇನೆ."

"ಸುಳ್ಳು! ಹೀಗೆ ಹೇಳಿದವರು ಯಾರು?"

"ಮುಖಂಡ ಮೂರುದಿನದ ಒಂದೆ ಸಭೆಯಲ್ಲಿ ಹೇಳಿದ್ದ."

ರಾತ್ರಿ ಕಳೆದ ನಂತರ, ಅವರು ಮುಂದಿನ ಗ್ರಾಮವನ್ನು ಪ್ರವೇಶಿಸಿದರು. ಲೆಗುತಿನ್ ಮುಂಜಾನೆ ಎದ್ದು ಅಂಗಳಕ್ಕಿಳಿದ. ಮನೆಯೊಡತಿ ಮೆಲ್ಲಗೆ ಹೇಳಿದಳು.

"ಬೆಟ್ಟದ ಮೇಲೆ ಕುದುರೆ ಸವಾರರು ಜಮಾಯಿಸುತ್ತಿದ್ದಾರೆ."

ಆತ ಓಡುತ್ತ ಹೊರಬಂದ. ಬೆಟ್ಟದತ್ತ ನೋಡಿದ. ಅಲ್ಲಿ ಕೊಸೆಕರ ದೊಡ್ಡ ಸೇನೆ ಜಮಾಯಿಸಿತ್ತು. ಅವರು ತಮ್ಮ ಕುದುರೆಗಳನ್ನು ವೇಗವಾಗಿ ಓಡಿಸುತ್ತ ಇಡಿ ಊರನ್ನು ಸುತ್ತುವರಿಯುವ ಪ್ರಯತ್ನದಲ್ಲಿದ್ದರು. ಕೆಲವೇ ನಿಮಿಷಗಳಲ್ಲಿ ನಾಲ್ವತ್ತು ಮಂದಿ ಕುದುರೆ ಸವಾರರು ಊರಿಗೆ ನುಗ್ಗಿದರು. ಉಳಿದವರು ಬೆಟ್ಟದ ಮೇಲೆ ನಿಂತುಕೊಂಡರು. ಪೊದ್‌ತಿಲ್‌ಖೋವ್ ಊರಿನ ಗಡಿಯ ಬಳಿ ಹೋಗಿ ಅವರೊಂದಿಗೆ ಆತ್ಮ ಸಮರ್ಪಣೆಯ ಕುರಿತು ಚರ್ಚಿಸಿದ. ಕೆಂಪು ಸೈನಿಕರು ಅರೆ ಮನಸ್ಸಿನಿಂದ ತಮ್ಮ ಆಯುಧಗಳನ್ನು ಸಮರ್ಪಿಸಲು ಪ್ರಾರಂಭಿಸಿದರು. ನಂತರ ಅವರ ಹೆಸರುಗಳನ್ನು ಬರೆದು ಎಲ್ಲರ ಹಾಜರಿ ಕರೆಯಲು ಉದ್ಯುಕ್ತರಾದಾಗ, ಕೈದಿಗಳಾಗಿದ್ದ ಕೆಂಪು ಸೈನಿಕರು ಸವಾಲೆಸೆದರು:

"ನಮ್ಮ ಹಾಜರಿ ಕರೆಯುತ್ತೀಯಾ? ನಾವೆಲ್ಲ ಇಲ್ಲಿಯೇ ಇದ್ದೇವೆ."

"ನಮ್ಮನ್ನು ಕ್ರಾಸ್ನೊಕುತ್‌ಸ್ಕಾಯಾಗೆ ಅಟ್ಟಿಕೊಂಡು ಹೋಗು."

ಕಾವಲುಗಾರರಾಗಿದ್ದ ಕೊಸೆಕರು ಕೈದಿಗಳನ್ನು ಹೊಡೆಯತೊಡಗಿದರು. ಅವರು ಪೊನೊಮಾರ್ಯೆವ್‌ನ್ನು ತಲುಪಿದಾಗ, ಸ್ಪಿರಿದೊನೊವ್ ಒಂದು ಅಂಗಡಿಯ ಮುಂದೆ ನಿಂತು ಹತ್ತಿರದಲ್ಲಿ ನಡೆಯುತ್ತಿದ್ದ ಕೈದಿಗಳನ್ನು ಪ್ರಶ್ನಿಸತೊಡಗಿದ. ಅವರನ್ನೆಲ್ಲ ಅದೇ ಅಂಗಡಿಯ ಒಳಗೆ ಇರಿಸಿ ಬೀಗ ಹಾಕಿ ಭದ್ರವಾದ ಕಾವಲಿನ ವ್ಯವಸ್ಥೆ ಮಾಡಿ,

ಅಲ್ಲಿಂದ ಹೊರಟ.

ಆ ಅಂಗಡಿಯ ಹೊರಗೆ ಒಂದುಕಡೆ ಕೊಸೆಕರು ತಾವು ಲೂಟಿ ಮಾಡಿದ್ದ ಸಾಮಾನನ್ನು ಹಂಚಿಕೊಳ್ಳುತ್ತಿದ್ದರು ಮತ್ತೊಂದು ಕಡೆ ಮಿಲಿಟರಿ ನ್ಯಾಯಾಲಯದ ನಾಟಕ ನಡೆಯುತ್ತಿತ್ತು. ಅದರ ಅಧ್ಯಕ್ಷ ಬಿಟ್ಟ ಗಡ್ಡವನ್ನು ಜಗ್ಗುತ್ತಿದ್ದ ಕೊಸೆಕ್ ಆಗಿದ್ದ.

"ಇವರನ್ನು ಖಂಡಿತವಾಗಿ ಗುಂಡಿಕ್ಕಿ ಹಾರಿಸಿಬಿಡಬೇಕು. ಈ ವಿಷಯದಲ್ಲಿ ಚರ್ಚೆ ಏತಕ್ಕೆ?" ಸ್ಪಿರಿದೊನೊವ್ ಕೋಪದಿಂದ ಹೇಳಿದ. ಅಧ್ಯಕ್ಷರ ಮೋರೆಯ ಬಣ್ಣ ಬದಲಾಯಿತು. ಅವನ ತುಟಿ ಕಲ್ಲಿನಂತೆ ಕಠೋರವಾಯಿತು.

"ಗುಂಡಿಕ್ಕುವುದು— ಹಾಗೆಯೇ ಬರಕೊಳ್ಳಿ" ಕಾರ್ಯದರ್ಶಿಗೆ ಆಜ್ಞೆಯಿತ್ತ.

"ಪೊದ್‌ತೆಲ್‌ಕೊವ್ ಮತ್ತು ಕ್ರಿವೊಶ್ಲಿಕೊವ್‌ರವರನ್ನು ಸಹ ಗುಂಡಿಕ್ಕಿ ಕೊಲ್ಲುವುದೆ?"

"ಅವರು ಮುಖಂಡರಾಗಿದ್ದರು. ಅವರನ್ನು ಗಲ್ಲಿಗೇರಿಸಬೇಕು"— ಅಧ್ಯಕ್ಷ ಉತ್ತರಿಸಿದ.

ಎಲ್ಲ ಕೆಂಪು ಸೈನಿಕರನ್ನು ಗುಂಡಿಕ್ಕಿ ಕೊಲ್ಲಲಾಯಿತು. ಅವರ ಹೆಣಗಳಿಂದ ಕಂದಕ ಪೂರ್ಣ ತುಂಬಿತು. ಪೊದ್‌ತೆಲ್‌ಕೊವ್ ಮತ್ತು ಕ್ರಿವೊಶ್ಲಿಕೊವ್‌ರರ ಹೆಣಗಳು ನೇತಾಡಿದವು.

## ೧೩

೧೯೧೮ರ ಬೇಸಗೆಯಲ್ಲಿ ಕೊಸೆಕರ ಸೇನೆ ಡಾನ್ ಪ್ರದೇಶದ ಗಡಿಗಳನ್ನು ದಾಟಿತು. ತಾರತಾರಸ್ಕ ಗ್ರಾಮದ ಕೊಸೆಕರ ಒಂದು ದಳ ಪ್ಯೋತ್ರನ ಮುಖಂಡತ್ವದಲ್ಲಿ ಹಳ್ಳಿಗಳ ಮೂಲಕ ಹಾದು ಉತ್ತರದತ್ತ ಸಾಗಿತು. ತಮ್ಮನೊಂದಿಗೆ ಮಾತಾಡಲು ಪ್ಯೋತ್ರ ಇಂತಹ ಸಂದರ್ಭಕ್ಕಾಗಿ ಕಾಯುತ್ತಿದ್ದ. ತಮ್ಮನೊಂದಿಗೆ ಅವನ ನಿವಾಸಕ್ಕೆ ಹೋದ.

"ನೀನು ನನ್ನ ಸ್ವಂತ ತಮ್ಮನಾಗಿದ್ದಿ. ಆದರೆ, ನಿನ್ನನ್ನು ಅರ್ಥಮಾಡಿಕೊಳ್ಳಲು ನನ್ನಿಂದಾಗಲಿಲ್ಲ. ದೇವರಾಣೆ ಹಾಕಿ ಹೇಳುತ್ತಿದ್ದೇನೆ- ನಿನ್ನನ್ನರಿತುಕೊಳ್ಳಲು ನನಗಿನ್ನೂ ಸಾಧ್ಯವಾಗಿಲ್ಲ. ನೀನು ಕೆಂಪು ಸೇನೆಯನ್ನು ಸೇರಬಹುದೆಂಬ ಹೆದರಿಕೆ ನನ್ನಲ್ಲಿ ಉಂಟಾಗಿದೆ."

"ನೀನು ನಿನ್ನನ್ನು ಅರ್ಥ ಮಾಡಿಕೊಂಡಿದ್ದಿಯಾ?"— ಗ್ರಿಗೋರಿ ಕೇಳಿದ.

"ಹೌದು. ನನ್ನ ಕರ್ತವ್ಯದ ಅರಿವು ನನಗಿದೆ. ನಾನು ಕರ್ತವ್ಯವಿಮುಖನಾಗುವಂತೆ ಮಾಡಲು ನಿನ್ನಿಂದ ಸಾಧ್ಯವಿಲ್ಲ. ನಿನ್ನಂತೆ ನಾನು ಎಡವುವುದಿಲ್ಲ."

"ಓಹೋ!"— ಗ್ರಿಗೋರಿಯ ತುಟಿಗಳು ನಗೆಯಿಂದಾಗಿ ತಿರುವಿದುವು.

"ಇಲ್ಲ. ನನ್ನಿಂದಾಗದು ನನ್ನ ಕುತ್ತಿಗೆಗೆ ಹಗ್ಗ ಬಿಗಿದು ನನ್ನನ್ನು ನೀನು ಕೆಂಪು ಸೇನೆಗೆ ಎಳೆದುಕೊಂಡು ಹೋಗಲಾರೆ. ಕೊಸೆಕರು ಅವರ ವಿರೋಧಿಗಳು. ನಾನೂ ಅವರನ್ನು ವಿರೋಧಿಸುತ್ತೇನೆ. ಕೊಸೆಕರನ್ನು ವಿರೋಧಿಸಲು ನಾನು ಬಯಸುವುದಿಲ್ಲ. ನನ್ನ ಭಾವನೆಗಳನ್ನು ಹೇಗೆ ವಿವರಿಸಲಿ? ಅವರನ್ನು ಸೇರುವುದರಲ್ಲಿ ಅರ್ಥವೇ ಇಲ್ಲ. ಅದು ನನ್ನ ವಿಚಾರಗಳಿಗೆ ಸರಿಹೊಂದುವುದಿಲ್ಲ."

"ಸಾಕು ನಿಲ್ಲಿಸು"— ಗ್ರಿಗೋರಿ ಬಳಲಿ ಬೆಂಡಾದನಂತೆ ಹೇಳಿದ.

"ಹೇಳು. ನನಗೀಗ ನಿನ್ನ ಅಂತರಂಗವನ್ನು ಅರಿಯಬೇಕಾಗಿದೆ... ಹೇಳು... ನೀನು ಅವರ ಪಾಳೆಯಕ್ಕೆ ಹೋಗುವುದಿಲ್ಲ ತಾನೆ?"

"ನಾನಿನ್ನೂ ಆ ಕುರಿತು ವಿಚಾರಮಾಡಿಲ್ಲ... ನನಗೆ ಗೊತ್ತಿಲ್ಲ!"

ಮರುದಿನ ಪ್ಯೋತ್ರ ತನ್ನ ದಳದ ಅರ್ಧ ಭಾಗವನ್ನು ಮರಳಿ ವೆಶೆನ್‌ಸ್ಕಾಯಾಗೆ ಕೊಂಡು ಹೋದ. ಮಿಕ್ಕುಳಿದ ಯುವಕರು ಗ್ರಿಗೋರಿಯ ಮುಖಂಡತ್ವದಲ್ಲಿ ಅರ್‌ಝಿನಾಸ್ಕಾಯಾಗೆ ತೆರಳಿದರು.

ಚಳಿಗಾಲದಲ್ಲಿ ಲಿಸ್ತನಿಸ್ಕಿ ಎರಡು ಬಾರಿ ಗಾಯಗೊಂಡ. ಒಂದು ತಿಂಗಳ ರಜೆ ಪಡೆದ. ಅವನ ತುಕಡಿಯಲ್ಲಿ ಅವನ ಸಂಗಾತಿಯಾಗಿದ್ದ ಕ್ಯಾಪ್ಟನ್ ಗೊರ್ಚಕೊವ್‌ನೂ ಅದೇ ವೇಳೆಗೆ ರಜೆ ಪಡೆದ. ನೊವೊಚೆರ್‌ಸ್ಕಾಯಾದಲ್ಲಿರುವ ತನ್ನ ಮನೆಗೆ ಬಂದು ತನ್ನೊಂದಿಗೆ ಕೆಲವು ದಿನ ಇರಬೇಕೆಂದು ಲಿಸ್ತನಿಸ್ಕಿಯನ್ನು ಗೊರ್ಚಕೊವ್ ಕೇಳಿಕೊಂಡ.

"ನನಗೆ ಮಕ್ಕಳಿಲ್ಲ. ನೀವು ಬಂದರೆ ನನ್ನ ಹೆಂಡತಿ ತುಂಬಾ ಸಂತೋಷಪಡುತ್ತಾಳೆ. ನಾನ

ವಳಿಗೆ ಬರೆದ ಪತ್ರಗಳಲ್ಲಿ ನಿಮ್ಮ ವಿಷಯ ಬರೆದಿದ್ದೇನೆ."

ಮಧ್ಯಾಹ್ನದ ಹೊತ್ತಿಗೆ ರೈಲುನಿಲ್ದಾಣದ ಬದಿಯಲ್ಲಿದ್ದ ಒಂದು ಚಿಕ್ಕಮನೆಗೆ ಅವರು ಹೋದರು.

"ಓಲ್ಗಾ, ಈತ ನನ್ನ ಮಿತ್ರ. ಲಿಸ್ತನಿಸ್ಕಿ." ಗೊರ್ಚಕೊವ್ ತನ್ನ ಮಡದಿಗೆ ಗೆಳೆಯನ ಪರಿಚಯ ಮಾಡಿಕೊಟ್ಟ.

ಹೆಂಗಸರಿಗಿರುವ ಸಹಜ ಜ್ಞಾನದಿಂದಾಗಿ ಲಿಸ್ತನಿಸ್ಕಿಯ ಮನೋಭಾವವನ್ನು ಓಲ್ಗಾ ಅರಿತುಕೊಂಡಳು. ಹೀಗಾಗಿ ತುಂಬಾ ಜಾಗ್ರತೆಯಿಂದ ಅವನೊಂದಿಗೆ ವರ್ತಿಸಿದಳು.

ರಜೆ ಮುಗಿದನಂತರ, ಮಿತ್ರರಿಬ್ಬರೂ ರಣರಂಗಕ್ಕೆ ಮರಳಿದರು.

ಹೋರಾಟದ ಮೊದಲಹಂತದಲ್ಲಿಯೇ ಗೊರ್ಚಕೊವ್‌ನ ಹೊಟ್ಟೆಗೆ ಸಿಡಿಮದ್ದು ತಗುಲಿತು. ಅವನನ್ನು ಹಿಂದಕ್ಕೆ ತರಲಾಯಿತು. ಜೀವನ್ಮರಣದ ತೂಗುಯ್ಯಾಲೆಯಲ್ಲಿದ್ದ ಆತ ಲಿಸ್ತನಿಸ್ಕಿಯನ್ನು ಕರೆದು. "ಲಿಸ್ತನಿಸ್ಕಿ, ನಾನೊಂದು ವೇಳೆ ಸತ್ತರೆ, ಓಲ್ಗಾಳ ಕೈ ಬಿಡಬೇಡ. ನನಗಾಗಲಿ ಅವಳಿಗಾಗಲಿ ಸಂಬಂಧಿಕರೆಂಬುವವರೇ ಇಲ್ಲ. ನನ್ನ ಪ್ರಾಮಾಣಿಕ ಗೆಳೆಯ ನೀನು. ದಯವಿಟ್ಟು ಅವಳನ್ನು ಮದುವೆಯಾಗು. ಆಗುವೆನೆಂದು ನನಗೆ ಮಾತು ಕೊಡು," ಎಂದ. ಲಿಸ್ತನಿಸ್ಕಿ ಮಾತು ಕೊಟ್ಟ. ಎರಡು ದಿನಗಳ ನಂತರ ಗೊರ್ಚಕೊವ್ ತೀರಿಕೊಂಡ.

ಮರುದಿನ ಲಿಸ್ತನಿಸ್ಕಿಯನ್ನು ಮುಂದಕ್ಕೆ ಕಳುಹಿಸಲಾಯಿತು. ಅವನ ಎಡಗೈ ಮತ್ತು ತೋಳಿಗೆ ಗಂಭೀರವಾದ ಗಾಯಗಳಾಗಿದ್ದವು. ಒಂದು ತಿಂಗಳು ಆಸ್ಪತ್ರೆಯಲ್ಲಿದ್ದು ಗುಣವಾದ ನಂತರ ಆತ ಓಲ್ಗಾಳನ್ನು ನೋಡಲು ಹೋದ.

"ಅಂಗವಿಕಲ ನಾನು. ನನ್ನನ್ನು ಮದುವೆಯಾಗಲು ನೀನು ಸಿದ್ಧಳಿರುವಿಯಾ?" ಎಂದಾತ ಓಲ್ಗಾಳನ್ನು ಕೇಳಿದ.

"ಈ ಕುರಿತು ನಾನು ಯೋಚಿಸಿದ್ದೇನೆ... ನನಗೆ ಒಪ್ಪಿಗೆಯಿದೆ."

"ನಮ್ಮ ತಂದೆಯವರ ಆಸ್ತಿ ಇರುವಲ್ಲಿಗೆ ಹೋಗಿ ಉಳಿದ ವಿಷಯಗಳನ್ನು ಅಲ್ಲಿಯೆ ಇತ್ಯರ್ಥಪಡಿಸೋಣ," ಎಂದ ಲಿಸ್ತನಿಸ್ಕಿ.

"ಸರಿ."

ನೊವೊಚೆರ್‌ಕಾಸ್ಕದಿಂದ ಹೊರಟ ನಂತರ ಅವರು ನಾಲ್ಕನೆಯದಿನ ಸಂಜೆ ಯಾಗೊಡ್ನೊಯೇ ತಲಪಿದರು. ಓಲ್ಗಾ ಎಲ್ಲರ ಮೇಲೂ ಪ್ರಭಾವ ಬೀರಿದಳು. ಅಕ್ಸಿನ್ಯಾ ಹೊಸ ಮನೆಯೊಡತಿಯನ್ನು ಮೆಚ್ಚಿಸಲು ಪ್ರಯತ್ನಿಸುತ್ತಿದ್ದಳು.

ಯುಜೆನ್ ಕೆಲಸದವರ ಬಿಡಾರಕ್ಕೆ ಹೋದ. ಬಾಗಿಲಿಗೆ ಬೆನ್ನು ಮಾಡಿ ನಿಂತಿದ್ದ ಅಕ್ಸಿನ್ಯಾಳನ್ನು ಕಂಡ.

"ಅಕ್ಸಿನ್ಯಾ, ನಿನ್ನ ಬಳಿ ಒಂದು ನಿಮಿಷ ಮಾತನಾಡಬೇಕಾಗಿದೆ. ತೋಟಕ್ಕೆ ಬಾ," ಎಂದ.

ಅವರಿಬ್ಬರೂ ಹೊರಗೆ ಬಂದಾಗ, ಯುಜೆನ್ ಕ್ಷೀಣಸ್ವರದಲ್ಲಿ ಹೇಳಿದ.

"ನಿನ್ನನ್ನು ಯಾಕೆ ಕರೆದೆಯೆಂಬುದು ತಿಳಿಯಿತೆ? ಅಂದಿನಂತೆ, ನಾನಿನ್ನು ನಿನ್ನ ಸಂಗಡ ಇರಲಾರೆ. ನನಗೀಗ ಮದುವೆಯಾಗಿದೆ."

ಮೌನವೇ ಆಕೆಯ ಉತ್ತರವಾಗಿತ್ತು.

"ನಿನಗೆ ಹಣ ಕೊಡುತ್ತೇನೆ. ನೀನು ದೂರ ಹೋಗಿ ಬಿಡು."

"ಇನ್ನೊಂದು ವಾರ ಇಲ್ಲಿದ್ದರೆ, ತಿಂಗಳು ಪೂರ್ತಿಯಾಗುತ್ತಿದೆ. ಅಷ್ಟುದಿನ ನಾನು ಇಲ್ಲಿ ಇರಬಹುದೆ?"

"ಅದಕ್ಕೇನಂತೆ? ಇರು."

## ೧೪

ಹಲವುದಿನಗಳ ವರೆಗೆ ಮುಂದುವರಿದ ವೈಶೆನ್‌ಸ್ಕಾಯಾ ರೆಜಿಮೆಂಟು ಹಿಂದಕ್ಕೆ ಹೋಗುತ್ತಿದ್ದ ಕೆಂಪುಸೇನೆಯನ್ನು ಆಕ್ರಮಿಸಿತು. ಗ್ರಿಗೋರಿ ನಿಧಾನವಾಗಿ ಬೋಲ್ಶೆವಿಕರನ್ನು ದ್ವೇಷಿಸತೊಡಗಿದ. ಅವರು ಅವನ ಬದುಕಿನಲ್ಲಿ ಶತ್ರುಗಳಾಗಿ ಧುಮುಕಿದ್ದರು, ಅವನನ್ನು ತನ್ನ ಜಮೀನಿನಿಂದ ದೂರ ಸೆಳೆದಿದ್ದರು. ಇತರ ಕೊಸೆಕರಲ್ಲಿಯೂ ಅದೇ ಭಾವನೆ ಇದ್ದುದನ್ನು ಆತ ಕಂಡುಕೊಂಡ.

ಕೈದಿಗಳನ್ನು ಆದಷ್ಟು ಕಡಿಮೆ ಸಂಖ್ಯೆಯಲ್ಲಿ ಅದೂ ಯಾವ ವಿಚಾರಣೆಯೂ ಇಲ್ಲದೇ ಸ್ಥಳದಲ್ಲಿಯೇ ಬಂಧಿಸಿ ಕೊಲ್ಲಲಾಗುತ್ತಿತ್ತು. ರಣರಂಗದಲ್ಲಿ ದರೋಡೆ ಹೆಚ್ಚಾಯಿತು. ಕೊಸೆಕರು ಕೆಂಪು

ಸೈನಿಕರ ಕುಟುಂಬದವರನ್ನು ಲೂಟಿಮಾಡುತ್ತಿದ್ದರು. ಬೋಲ್ಶೆವಿಕರ ಪರವಾಗಿ ಸಹಾನುಭೂತಿ ಇದ್ದವರೆಲ್ಲ ಸಂಶಯಕ್ಕೆ ಗುರಿಯಾದವರೆಲ್ಲ ಚಿತ್ರಹಿಂಸೆಯನ್ನು ಎದುರಿಸಬೇಕಾಗುತ್ತಿತ್ತು. ಕೈದಿಗಳನ್ನು ಬತ್ತಲೆ ಮಾಡಲಾಗುತ್ತಿತ್ತು.

ಗ್ರಿಗೋರಿಯ ದಳದಲ್ಲಿದ್ದ ಕೊಸೆಕರು, "ನಾವು ಕೆಂಪು ಸೇನೆಯನ್ನು ನಮ್ಮ ಪ್ರದೇಶ ದಿಂದ ಓಡಿಸುತ್ತೇವೆ. ಅವರನ್ನು ಮುಗಿಸಿಬಿಡುತ್ತೇವೆ. ಅದಕ್ಕಿಂತ ಹೆಚ್ಚಿನದನ್ನೂ ನಾವು ಮಾಡುವುದಿಲ್ಲ." ಎಂದು ಪದೇಪದೇ ಹೇಳುತ್ತಿದ್ದರು.

ಶರತ್ಕಾಲದ ಕೊನೆಯವರೆಗೂ ಹೋರಾಟ ನಿಧಾನವಾಗಿ ಸಾಗಿದರೂ ಯಾವ ಪಕ್ಷಕ್ಕೂ ನಿರ್ಣಾಯಕವಾದ ಜಯ ದೊರೆಯಲಿಲ್ಲ.

ನವೆಂಬರ್ ಕೊನೆಯಲ್ಲಿ ಬ್ರಿಟನ್ ಮತ್ತು ಫ್ರಾನ್ಸಿನ ಸೇನಾನಿಯೋಗಗಳ ಪ್ರತಿನಿಧಿಗಳು ನೊವೊಚರ್‌ಸ್ಕಾಯಾಕ್ಕೆ ಆಗಮಿಸಿದರು. ಬೋಲ್ಶೆವಿಕರ ವಿರುದ್ಧ ಹೋರಾಟವನ್ನು ಮುಂದುವರಿಸುವ ಕುರಿತು ಸಮಾಲೋಚಿಸಲು ಮತ್ತು ಡಾನ್ ಪ್ರದೇಶದ ಪರಿಸ್ಥಿತಿಯನ್ನರಿತು ಕೊಳ್ಳಲು ಆ ಪ್ರತಿನಿಧಿಗಳು ಬಂದಿದ್ದರು. ಕೊಸೆಕರ ಸೇನೆಯ ಜನರಲ್ ಕ್ರಾಸ್ನೊವ್ ಪ್ರತಿನಿಧಿಗಳನ್ನು ಸ್ವಾಗತಿಸುತ್ತ, "ರಶಿಯದ ಜನತೆಯ ಸರ್ವಶ್ರೇಷ್ಠ ಪ್ರತಿನಿಧಿಗಳು ಬೋಲ್ಶೆವಿಕರ ಜೈಲುಗಳಲ್ಲಿ ಸಾಯುತ್ತಿದ್ದಾರೆ. ಅವರೆಲ್ಲ ತಮ್ಮತ್ತ ನೋಡುತ್ತಿದ್ದಾರೆ. ಅವರು ತಮ್ಮ ಸಹಾಯವನ್ನು ನಿರೀಕ್ಷಿಸುತ್ತಿದ್ದಾರೆ; ನಾವು ನಿಮ್ಮ ಜೊತೆ ಮಾಸ್ಕೋದ ರಾಷ್ಟ್ರಗೀತೆಯನ್ನು ಹಾಡುತ್ತ ಕ್ರೆಮ್ಲಿನ್ ಅರಮನೆಗೆ ಹೋಗಬೇಕು. ನಾವೆಲ್ಲ ಒಟ್ಟಾಗಿ ಸ್ವಾತಂತ್ರ್ಯ ಮತ್ತು ಶಾಂತಿಯ ಸವಿಯನ್ನುಣ್ಣುವ"— ಎಂದು ಹೇಳಿದ.

ಉತ್ತರದ ರಣರಂಗದಲ್ಲಿ ಪರಿಸ್ಥಿತಿ ಎಷ್ಟು ಜಟಿಲವಾಗಿತ್ತೆಂದರೆ ಕ್ರಾಸ್ನೊವ್ ಸ್ವತಃ ಕಾರ್ಗಿನ್ ಸ್ಕಾಯಾಗೆ ಹೋಗಲು ನಿರ್ಧರಿಸಿದ.

ಜನೆವರಿಯ ಕೊನೆಯಲ್ಲಿ ಇವಾನ್ ಅಲೆಕ್ಸಿವಿಚ್‌ನನ್ನು ವೈಶೆನ್‌ಸ್ಕಾಯಾದಲ್ಲಿದ್ದ ಜಿಲ್ಲಾ ಕ್ರಾಂತಿಕಾರಿ ಸಮಿತಿಯ ಅಧ್ಯಕ್ಷ ಕರೆದ. ಆತ

ಅದೇ ದಿನ ಸಂಜೆ ತಾರತಾರಸ್ಕ ಗ್ರಾಮಕ್ಕೆ ಬರುವವನಿದ್ದ. ಮಿಶಾಕೊಶೆವ್ಯಾ ಮ್ಯಾಖೊವ್‌ನ ಖಾಲಿ ಮನೆಯಲ್ಲಿ ಅವನಿಗಾಗಿ ಕಾದು ಕುಳಿತಿದ್ದ. ಅಷ್ಟರಲ್ಲಿ ಜಗಲಿಯಲ್ಲಿ ಯಾರೋ ಬಂದಂತಾಯಿತು. ಬಂದಾತ ಗ್ರಿಗೋರಿ. ಕೆಲವೇ ನಿಮಿಷಗಳಲ್ಲಿ ಇವಾನ್ ಅಲೆಕ್ಸಿವಿಚ್ ಬಂದ. "ನಾನು ಅಧ್ಯಕ್ಷನನ್ನು ಕಂಡೆ. ಅವನ ಕಾರ್ಯಾಲಯಕ್ಕೆ ಹೋಗಿ ಕೈ ಕುಲುಕಿದೆ. 'ಕಾಮ್ರೇಡ್ ಕುಳಿತುಕೊಳ್ಳಿ' ಎಂದು ಆತ ಹೇಳಿದ. ಈ ಅಧ್ಯಕ್ಷ ಹಿಂದೆ ಮೇಜರ್ ಜನರಲ್ ಆಗಿದ್ದ. ಹಿಂದೆಯಾದರೆ, ನಾನು ಅವನ ಮುಂದೆ ನಿಂತುಕೊಂಡಿರಬೇಕಿತ್ತು. ಆದರೆ, ಸಮಾನತೆಯನ್ನು ಘೋಷಿಸುವ ಹೊಸ ಸರಕಾರದಿಂದಾಗಿ ಎಲ್ಲ ಬದಲಾಗಿದೆ."

"ಇವಾನ್ ಅಲೆಕ್ಸಿವಿಚ್, ಇದರಲ್ಲಿ ಸಂತಸಪಡುವಂಥಾದ್ದೇನಿದೆ? ಈಗಂತೂ ಜನರಲ್‌ಗಳೂ ಖಾಕಿ ಅಂಗಿ ಹಾಕಿಕೊಂಡು ತಿರುಗಾಡುತ್ತಿದ್ದಾರೆ," ಎಂದ ಗ್ರಿಗೋರಿ.

"ಜನರಲ್‌ಗಳು ಅನಿವಾರ್ಯವಾಗಿ ಹಾಗೆ ಮಾಡಬೇಕಾಯಿತು. ಆದರೆ, ಕಮ್ಯುನಿಸ್ಟರ ಸಂಸ್ಕೃತಿಯೇ ಸಮಾನತೆಯನ್ನು ಅವಲಂಬಿಸಿದೆ. ಅಂದರೆ ಅಂತರ ತಿಳಿಯಿತಲ್ಲ?"

"ಯಾವ ವ್ಯತ್ಯಾಸವೂ ಇಲ್ಲ"— ಗ್ರಿಗೋರಿ ತಲೆ ಅಲ್ಲಾಡಿಸಿದ.

"ಹಾಗಾದರೆ, ಈ ಸರಕಾರಕ್ಕೂ ಹಿಂದಿನ ಸರಕಾರಕ್ಕೂ ಯಾವ ವ್ಯತ್ಯಾಸವೂ ಇಲ್ಲವೆ? ನೀನೇಕೆ ಹೋರಾಡಿದೆ?"

"ನಾನು ನನಗಾಗಿಯೇ ಹೋರಾಡಿದೆ. ಸತ್ಯ ಹೇಳುವುದಾದರೆ, ನಾನು ಎರಡೂ ಸರಕಾರಗಳನ್ನು ಮೆಚ್ಚುವುದಿಲ್ಲ."

"ಹಾಗಾದರೆ, ನೀನು ಯಾವುದನ್ನು ಮೆಚ್ಚುತ್ತಿ?"

"ಏಕೆ? ಯಾವುದನ್ನೂ ಇಲ್ಲ!"

ಮಿಶಾ ಕೇಳಿದ— "ಗ್ರಿಗೋರಿ, ನಿನಗೆ ಏನಾಗಬೇಕೆಂಬುದು ನಿನಗೇನೇ ಗೊತ್ತಿಲ್ಲ."

ಅವರೆಲ್ಲ ಆ ಮನೆಯಿಂದ ಹೊರಟರು. ಗ್ರಿಗೋರಿ ತನ್ನ ವಿಚಾರಗಳನ್ನು ಬಹಿರಂಗಪಡಿಸಿದ್ದಕ್ಕಾಗಿ ಪಶ್ಚಾತ್ತಾಪಪಟ್ಟ. ಮಿಶಾ ಮತ್ತು ಇವಾನ್ ಒಟ್ಟಿಗೆ ಹೋದರು.

ಮಾರ್ಚ್ ತಿಂಗಳ ಮೊದಲ ವಾರದಲ್ಲಿ ಇವಾನ್ ಅಲೆಕ್ಸಿವಿಚ್ ತಾರತಾರಸ್ಕದಲ್ಲಿ ಗ್ರಾಮಸಭೆಯನ್ನು ಕರೆದ. ಸ್ಟೋಕಮನ್ ತನ್ನ ಭಾಷಣವನ್ನು ಪ್ರಾರಂಭಿಸಿದ. "ನೀವೆಲ್ಲ ನಮ್ಮನ್ನು ನಂಬುವುದಿಲ್ಲ, ವದಂತಿಗಳನ್ನು ನಂಬುತ್ತೀರಿ. ಸೋವಿಯತ್ ಸರಕಾರದಿಂದ ನಿಮ್ಮ ದಮನ ಸಾಮೂಹಿಕ ಹತ್ಯೆ ಇತ್ಯಾದಿಗಳ ಕುರಿತು ವದಂತಿಗಳು ಹಬ್ಬಿವೆ. ನಾವೀಗ ಪರಸ್ಪರ ವಿಚಾರವಿನಿಮಯದ ಮೂಲಕ ಸಂಶಯವನ್ನು ನಿವಾರಿಸಿಕೊಳ್ಳಬೇಕು."

"ಗುಂಡಿಕ್ಕಿ ಕೊಲ್ಲಲಾಗಿಲ್ಲವೆಂದು ನೀವು ಹೇಳುತ್ತಿದ್ದೀರಿ. ಹಾಗಾದರೆ, ನಮ್ಮ ಏಳು ಮಂದಿ ಎಲ್ಲಿಗೆ ಹೋದರು?"— ಹಿಂದಿನಿಂದ ಯಾರೋ ಕೂಗಿಕೊಂಡರು.

"ಕಾಮ್ರೇಡ್, ಸೋವಿಯತ್ ಸರಕಾರದ ಶತ್ರುಗಳನ್ನು ನಾವು ಗುಂಡಿಕ್ಕಿ ಕೊಂದಿದ್ದೇವೆ. ಅವರೆಲ್ಲ ಭೂಮಾಲಿಕರ ಶಾಸನಗಳನ್ನು ಮತ್ತೆ ನಮ್ಮ ಮೇಲೆ ಹೇರಲು ಯೋಚಿಸುತ್ತಿದ್ದಾರೆ. ನಾವು ಎಲ್ಲ ಯುದ್ಧಗಳನ್ನು ಕೊನೆಗಾಣಿಸಿ ಜನಾಂಗಗಳ ನಡುವೆ ಭ್ರಾತೃತ್ವ ಬೆಳೆಯಬೇಕೆಂದು ಪ್ರತಿಪಾದಿಸುತ್ತೇವೆ."

ಭಾಷಣಗಳು ಮುಗಿದ ನಂತರ, ಕ್ರಾಂತಿಕಾರಿ ಸಮಿತಿಯ ಕೊಠಡಿಯಲ್ಲಿ ಕೊಶೆವ್ಯಾ ಇವಾನ್ ಅಲೆಕ್ಸಿವಿಚ್ ಮತ್ತು ಸ್ಟೋಕಮನ್ ಮುಂದಿನ ಕಾರ್ಯಾಚರಣೆಯ ಕುರಿತು ಯೋಚಿಸಿದರು.

ಡಾನ್‌ನ ಮೇಲ್ಭಾಗದಲ್ಲಿದ್ದ ಎಲ್ಲ ಜಿಲ್ಲೆಗಳಲ್ಲಿ ವಿದ್ರೋಹಿಗಳು ವ್ಯಾಪಕವಾಗಿ ದಂಗೆಯೆದ್ದರು. ಈ ವಿದ್ರೋಹವನ್ನು ಸದೆಬಡಿಯಲು ಕೆಂಪು ಸೇನೆಯ ರೆಜಿಮೆಂಟು ಆಗಮಿಸಿತು. ಅದು ಹಳ್ಳಿಗಳ ಮೂಲಕ ಹಾದು ಹೋಯಿತು. ಅನೇಕ ಗ್ರಾಮಗಳು ಕೆಂಪುಸೇನೆಯ ವಶವಾದವು. ಪ್ಯೋತ್ರ ಎರಡು ತುಕಡಿಗಳೊಂದಿಗೆ ಕೆಂಪುಸೇನೆಯನ್ನು ಎದುರಿಸಲು ಯೆಲಂಸ್ಕಾಯಾಗೆ ಹೋದ. ಅವನೊಂದಿಗೆ ಗ್ರಿಗೋರಿಯೂ ಹೊರಟ.

ಹಠಾತ್ತಾಗಿ ಕೆಂಪು ಸೇನೆಯ ಅಶ್ವದಳ ಅವರ ಮೇಲೆ ಆಕ್ರಮಣಗೈದಿತು. "ಕೊಸೆಕ್ ಸಹೋದರರೇ, ಕಾಲುಮೆಯುತ್ತ ಹೋಗಿ!" ಪ್ಯೋತ್ರ

ಕೂಗಿಕೊಂಡ.

ಅಷ್ಟರಲ್ಲಿ ಕೆಂಪುಸೇನೆಯ ಪಂಥಾಹ್ವಾನ ಕೇಳಿ ಬಂತು: "ಪ್ಯೋತ್ರ ಮೆಲಿಖೊವ್, ಹೊರಗೆ ಬಾ."

ಕೊಸೆಕರ ಪರವಾಗಿ ಅಂಟಿಪ್ ಉತ್ತರ ಕೊಟ್ಟ: "ನಮಗೆ ಹೋಗಲು ಬಿಟ್ಟರೆ ನಾವು ಹೊರಬರುತ್ತೇವೆ; ಇಲ್ಲವಿದ್ದರೆ ಗುಂಡು ಹಾರಿಸುತ್ತೇವೆ."

ಒಂದು ಕ್ಷಣದ ಮೌನದ ನಂತರ ಮೇಲ್ಪದಿಯಿಂದ ಉತ್ತರ ಬಂತು:

"ನಿಮ್ಮನ್ನು ಹೋಗಲು ಬಿಡುತ್ತೇವೆ."

ಎಲ್ಲ ಕೊಸೆಕರು ಕಾಲುವೆಯಿಂದ ಹೊರ ಬಂದರು. ಅವರನ್ನು ಕೆಂಪು ಸೈನಿಕರು ಸುತ್ತುವರಿದರು. ಮಿಶಾ ತನ್ನ ರೈಫಲ್ಲನ್ನೆತ್ತಿ ಎದೆಯ ಮಟ್ಟದಲ್ಲಿ ಹಿಡಿದುಕೊಂಡ. ರೈಫಲ್ಲಿನಿಂದ ಗುಂಡುಗಳು ಹಾರಿದವು. ಪ್ಯೋತ್ರ ಹಾಗೂ ಅವನ ಹತ್ತು ಮಂದಿ ಹಿಂಬಾಲಕರು ಆ ಗುಂಡುಗಳಿಗೆ ಆಹುತಿಯಾದರು.

## ೧೫

ಕೆಂಪು ಸೈನಿಕರು ಕಾರ್ಗಿನ್‌ಸ್ಕಾಯಾದಲ್ಲಿ ಬೀಡು ಬಿಟ್ಟರು. ಫಿರಂಗಿ ದಳದ ಸಮೀಪ ದಿನ್ನೆಯೊಂದರ ಮೇಲೆ ನಿಂತುಕೊಂಡಿದ್ದ ಗ್ರಿಗೋರಿ ಕೆಂಪು ಪದಾತಿ ಸೇನೆ ಕಾರ್ಗಿನ್‌ಸ್ಕಾಯಾದಲ್ಲಿ ನೆಲೆಯೂರಿದ್ದನ್ನೂ, ಚಿರ್ ನದಿಯ ಬಳಿ ಸಮಾವೇಶಗೊಳ್ಳುತ್ತಿದ್ದುದನ್ನೂ ಕಂಡ. ಅವರ ಮೇಲೆ ಗುಂಡು ಹಾರಿಸುವಂತೆ ಆಜ್ಞಾಪಿಸಿದ. ಕೆಂಪು ಸೇನೆಯ ಎರಡನೇ ಫಿರಂಗಿ ದಳ ಸೇತುವೆಯಲ್ಲಿ ಹೋಗುತ್ತಿದ್ದಾಗಲೇ ಮೊದಲ ಗುಂಡು ಸೇತುವೆಯ ಕೊನೆಗೆ ತಾಗಿತು. ಸೇತುವೆಯಲ್ಲಿ ಹೋಗುತ್ತಿದ್ದ ಆರು ಮಂದಿ ಸೈನಿಕರಲ್ಲಿ ಒಬ್ಬ ಮಾತ್ರ ಉಳಿದುಕೊಂಡ.

ಗ್ರಿಗೋರಿ ದಿನ್ನೆಯನ್ನೇರಿದ. ಅಷ್ಟರಲ್ಲಿ ಕೊಸೆಕರ ತುಕಡಿಗಳು ಬರಲಾರಂಭಿಸಿದುವು. ಕೆಂಪು ಸೈನಿಕರು ಗುಂಪುಗುಂಪಾಗಿ ಮುಂದಿನ ಗ್ರಾಮದತ್ತ ಓಡಿ ಹೋದರು. ಅವರು ಓಡುತ್ತಿದ್ದಾಗ ಕೊಸೆಕರು ತಮ್ಮ ಖಡ್ಗಗಳನ್ನು ಬೀಸಿ ಅವರನ್ನು ಕೊಲ್ಲುತ್ತಿದ್ದರು. ಒಂದು ನೂರಾ ನಾಲ್ವತ್ತೇಳು ಮಂದಿ ಕೆಂಪು ಸೈನಿಕರು ಈ ಹೋರಾಟದಲ್ಲಿ

ಮ್ಯಾರಾದರು. ಗ್ರಿಗೋರಿಯ ಆಜ್ಞೆಯಂತೆ ಕಾರ್ಗಿನ್‌ಸ್ಕಾಯಾ ಮತ್ತು ಆರ್ಕಿಪ್ರೋವ್ಕಾದ ನಿವಾಸಿಗಳು ಆ ಹೆಣಗಳನ್ನು ಊರ ಹೊರಗೆ ಎಳೆದುಕೊಂಡು ಹೋಗಿ ಆಳವಿಲ್ಲದ ಕಂದಕ ಗಳಲ್ಲಿ ಅವುಗಳನ್ನು ಹೂಳಿಬಿಟ್ಟರು.

ಈ ಹೋರಾಟದ ನಂತರ ಒಂದು ವಾರ ವಿರಾಮ ಸಿಕ್ಕಿತು. ಕೆಂಪು ಸೇನೆ ವಿದ್ರೋಹಿಗಳ ಎರಡನೇ ವಿಭಾಗದ ವಿರುದ್ಧ ಹೋರಾಡುತ್ತಿತ್ತು. ಮಿಗುಲಿನ್‌ಸ್ಕಾಯಾ ಜಿಲ್ಲೆಯಲ್ಲಿ ಕೆಂಪು ಸೇನೆಗೆ ಯಶಸ್ಸು ದೊರೆಯಿತು. ಅನೇಕ ಗ್ರಾಮಗಳು ಅವರ ವಶವಾದವು. ಅಂತಃಕಲಹದ ಈ ಕಾಲ ಘಟ್ಟ ತುಂಬಾ ವಿಚಿತ್ರವಾಗಿತ್ತು. ಈಗ ವಾಸ್ತ-ವಿಕವಾದ ರಣರಂಗವಿರಲಿಲ್ಲ.

ಕ್ರಿಮೊವ್ಕಾದ ಬಳಿ ನಡೆದ ಹೋರಾಟದಲ್ಲಿ ಗ್ರಿಗೋರಿ ಸಕ್ರಿಯವಾಗಿ ಭಾಗವಹಿಸಿದ. ಎಪ್ರಿಲಿನಲ್ಲಿ ಒಂದು ಮಧ್ಯಾಹ್ನ ಕೆಂಪು ಸೇನೆ ಆ ಗ್ರಾಮವನ್ನು ಪ್ರವೇಶಿಸಿತು; ಗ್ರಾಮದ ಗಡಿಯ ಬಳಿಯಲ್ಲಿಯೇ ಗ್ರಿಗೋರಿಯ ಮುಂದಾಳತ್ವದಲ್ಲಿ ಕೊಸೆಕರು ವ್ಯೂಹ ರಚಿಸಿದರು. ಗ್ರಿಗೋರಿ ಒಂಟಿಯಾಗಿಯೇ ವೇಗವಾಗಿ ಕುದುರೆಯನ್ನು ಓಡಿಸುತ್ತ ಕೆಂಪು ಸೇನೆಯತ್ತ ಹೋದ, ಅವನಿಂದ ಹೆಜ್ಜೆ ಮುಂದಕ್ಕೆ ಕೆಂಪು ಸೇನೆಯ ನೌಕಾಪಡೆಯವರು ಮಶಿನ್‌ಗನ್ನುಗಳಿಂದ ಗುಂಡು ಹಾರಿಸುತ್ತಿದ್ದರು. ಗ್ರಿಗೋರಿ ಮೊದಲ ನಾವಿಕನನ್ನು ಖಡ್ಗದಿಂದ ಇರಿದ. ಅವನ ಕತೆ ಮುಗಿಯಿತು. ಎರಡನೆಯ ನಾವಿಕ ಗ್ರಿಗೋರಿಯ ಭುಜಕ್ಕೆ ಗುಂಡು ಹೊಡೆದ. ಆದರೆ ಗ್ರಿಗೋರಿಯ ಹಿಂದಿದ್ದ ಪ್ರೊಖೊರ್ ಖಡ್ಗದಿಂದ ಅವನ ತಲೆಯನ್ನು ಸೀಳಿದ. ಮಶಿನ್‌ಗನ್ ಚಲಾಯಿಸುತ್ತಿದ್ದ ನಾವಿಕನನ್ನು ಗ್ರಿಗೋರಿ ಕೊಂದನಲ್ಲದೆ ಒಮ್ಮೆಲೇ ಮತ್ತೆ ನಾಲ್ಕು ಮಂದಿ ನಾವಿಕರನ್ನು ಕೊಂದ. ಐದನೆಯವನನ್ನು ಹುಡುಕುತ್ತ ಕುದುರೆಯನ್ನು ಓಡಿಸುವುದರಲ್ಲಿದ್ದ. ಅಷ್ಟರಲ್ಲಿ ಕಮಾಂಡರ್ ಅವನ ಮುಂದೆ ಬಂದು ಅವನ ಕೈಯನ್ನು ಹಿಡಿದ.

"ಗ್ರಿಗೋರಿ ಪ್ಯೆತಲಿಯೇವಿಚ್! ಚೇತರಿಸಿಕೊ!" ಪ್ರೊಖೊರ್ ಅವನನ್ನು ಸಮಾಧಾನ-ಪಡಿಸಿದ.

"ಅವನನ್ನು ಕುದುರೆಯ ಮೇಲೆ ಹತ್ತಿಸಿ, ಒಂದಕ್ಕೆ ಕರಕೊಂಡು ಹೋಗಿ. ಅವನ ಆರೋಗ್ಯ ಚೆನ್ನಾಗಿಲ್ಲ," ಎಂದು ತುಕಡಿಯ ಕಮಾಂಡರ್ ಆಜ್ಞಾಪಿಸಿದ.

ಗ್ರಿಗೋರಿ ತನ್ನ ಟೋಪಿಯನ್ನು ನೆಲಕ್ಕೆಸೆದು ನಡುಗುತ್ತ ನಿಂತುಕೊಂಡ. ಹಲ್ಲು ಮಸೆಯುತ್ತಿದ್ದ ಅವನ ಮುಖ ಭೀಕರವಾಗಿ ತಿರುಚಿಕೊಂಡಿತ್ತು. ಅವನು ನರಳುತ್ತಿದ್ದ ಕೂಡ. ಕಂಬನಿದುಂಬಿದ್ದ ಮತ್ತು ವಕ್ರವಾಗಿದ್ದ ಮುಖವನ್ನು ತನ್ನ ಬಳಿ ಇದ್ದ ಕೊಸೆಕರತ್ತ ತಿರುಗಿಸುತ್ತ ಆತ ಒರಟು ಹಾಗೂ ಅಸ್ಥಿರ ಧ್ವನಿಯಲ್ಲಿ ಕೂಗಿಕೊಂಡ:

"ನಾನು ಯಾರನ್ನು ಕೊಂದೆ? ಸಹೋದರರೇ, ನನಗೆ ಕ್ಷಮೆ ಸಿಗಲಾರದು. ನನ್ನನ್ನು ಕೊಲ್ಲಿ. ದೇವರಿಗಾಗಿಯಾದರೂ ನನ್ನನ್ನು ಕಡಿದು ಹಾಕಿ."

ಮರುದಿನ ತನ್ನ ವಿಭಾಗದ ಕಮಾಂಡರ್ ಹುದ್ದೆಯನ್ನು ರೆಜಿಮೆಂಟಿನ ಕಮಾಂಡರಿಗೊಪ್ಪಿಸಿದ. ಪ್ರೊಖೊರನ ಜೊತೆ ವ್ಯೆಶೆನ್‌ಸ್ಕಾಯಾಗೆ ಹೋದ. ಅಲ್ಲಿ ಆತನನ್ನು ಬಹು ಕಾಲದಿಂದ ಬಲ್ಲ ಮಿತ್ರನೊಬ್ಬನೊಂದಿಗೆ ಉಳಿದುಕೊಂಡ.

"ಇಲ್ಲಿರುವ ಅಧಿಕಾರಿಗಳು ಅಂದರೆ, ಕುಕಿನೊವ್ ಮತ್ತು ಇತರರು ತುಂಬ ಚೆನ್ನಾಗಿ ಕಾರುಬಾರು ಮಾಡುತ್ತಿದ್ದಾರೆ"- ಆ ಮುದುಕ ವ್ಯಂಗ್ಯವಾಗಿ ಹೇಳಿದ.

"ಅಂದರೆ?"

"ಅವರು ಕೊಸೆಕರಲ್ಲದವರನ್ನು ಹಿಂಸಿಸುತ್ತಿದ್ದಾರೆ. ಕೆಂಪು ಸೇನೆಯೊಂದಿಗೆ ಹೋದವರನ್ನೆಲ್ಲ ಬಂಧಿಸುತ್ತಿದ್ದಾರೆ. ಉದಾಹರಣೆಗೆ, ನೀನು ಕ್ಯಾಡೆಟ್‌ಗಳ ಜೊತೆ ಇದ್ದಿಯೆಂದು ಇಟ್ಟುಕೊ. ಆಗ ಕೆಂಪು ಸೇನೆಯವರು ನಿನ್ನ ತಂದೆಯನ್ನು ಬಂಧಿಸುತ್ತಾರೆಂದಿಟ್ಟುಕೊ. ಅಂಥ ಬಂಧನ ನ್ಯಾಯಸಮ್ಮತವಾಗಲಾರದು."

"ಖಂಡಿತ ಆಗಲಾರದು."

"ಆದರೆ, ನಮ್ಮದೇ ಸರಕಾರ ಅವರನ್ನು ಬಂಧಿಸುತ್ತದೆ. ಕೆಂಪು ಸೇನೆ ಇಲ್ಲಿಗೆ ಬಂದಿತ್ತು. ಅವರು ಯಾರನ್ನೂ ಪೀಡಿಸಲಿಲ್ಲ. ಆದರೆ, ನಮ್ಮ ಜನ ಹುಚ್ಚರಾಗಿದ್ದಾರೆ."

ಗ್ರಿಗೋರಿ ಸ್ವಲ್ಪ ನಡುಗುತ್ತ ಎದ್ದ. ಮೇಲಂಗಿಯನ್ನೆತ್ತಿಕೊಂಡ. ಪ್ರೊಖೊರ್‌ನನ್ನು ಕರೆದ–"ನನ್ನ ಖಡ್ಗ ಪಿಸ್ತೂಲುಗಳನ್ನು ತಾ."

ಗ್ರಿಗೋರಿ ನೇರವಾಗಿ ಚೌಕದಲ್ಲಿದ್ದ ಜೈಲಿನ ಬಳಿ ಹೋಗಿ ಒರೆಯಿಂದ ಖಡ್ಗವನ್ನು ತೆಗೆದ. ಕಾವಲಿನವ ಹೆದರಿ ಓಡಿದ. ಒಂದು ಕ್ಷಣದ ನಂತರ ಜೈಲಿನ ಪ್ರಧಾನಾಧಿಕಾರಿ ಕಾಣಿಸಿಕೊಂಡ. ಗ್ರಿಗೋರಿ ಪಿಸ್ತೂಲನ್ನು ತೋರಿಸಿ ಅವನನ್ನು ಅಲ್ಲಿಂದ ಓಡಿಸಿದ.

"ಎಲ್ಲರೂ ಹೊರಬನ್ನಿ. ನಿಮ್ಮ ನಿಮ್ಮ ಮನೆಗಳಿಗೆ ಹೋಗಿ!"– ಗ್ರಿಗೋರಿ ಗರ್ಜಿಸಿ ಜೈಲಿನ ಕೋಣೆಗಳ ಬಾಗಿಲುಗಳನ್ನು ತೆರೆದ. ಎಲ್ಲ ಕೈದಿಗಳನ್ನು ಬಿಡುಗಡೆಗೊಳಿಸಿದ.

ಗ್ರಿಗೋರಿ ತಾರತಾರಸ್ಕದತ್ತ ಕುದುರೆಯನ್ನೋಡಿಸಿದ. ಅಲ್ಲಿ ಆತ ಐದು ದಿನ ಇದ್ದ. ಊರಿನಿಂದ ಹೊರಡಬೇಕೆಂದಿದ್ದ ದಿನ ಆತ ಕುದುರೆಗೆ ನೀರು ಕುಡಿಸಲು ಡಾನ್‌ಗೆ ಹೋದ. ಅಕ್ಸಿನ್ಯಾ ಗಡಿಗೆಯಲ್ಲಿ ನೀರು ತುಂಬಿಸುತ್ತಿದ್ದುದನ್ನು ಕಂಡ. ನೆನಪುಗಳೆಲ್ಲ ಮರುಕಳಿಸಿದುವು. ತನ್ನ ಕುದುರೆಯನ್ನು ಅವಳ ಬಳಿ ನಿಲ್ಲಿಸಿದ.

ಆಕೆ ಆತನನ್ನು ನೋಡಿದಳು.

ಒಂದು ಕ್ಷಣ ಅವರಿಬ್ಬರೂ ಸುಮ್ಮನೇ ನಿಂತುಕೊಂಡರು.

"ಏಕೆ ಮೌನವಾಗಿದ್ದಿ? ಏನನ್ನಾದರೂ ಮಾತನಾಡು."

"ಹೇಳತಕ್ಕದ್ದನ್ನೆಲ್ಲ ಹೇಳಿಯಾಗಿದೆ ಎಂದು ನನಗನಿಸುತ್ತದೆ."

"ನಿಜವಾಗಿಯೂ?"

"ಮರ ವರ್ಷದಲ್ಲಿ ಒಂದೇ ಒಂದು ಬಾರಿ ಹೂಬಿಡುತ್ತದೆ."

"ನಮ್ಮದು ಇಷ್ಟರಲ್ಲಿಯೇ ಹೂ ಬಿಟ್ಟಿದೆಯೆಂದು ಎಣಿಸಿದ್ದೀಯಾ?"

"ನಾನೀಗ ಹೋಗಬೇಕು. ನಾವು ಹೀಗೇ ನಿಂತುಕೊಂಡೇ ಮಾತನಾಡುತ್ತಿದ್ದೇವಲ್ಲ!"

ಅವಳ ಕೆನ್ನೆ ನಾಚಿಕೆಯಿಂದ ಕೆಂಪಾಯಿತು. ಆಕೆಯೆಂದಳು,

"ಇಲ್ಲಿಯೇ ನಮ್ಮ ಪ್ರೇಮ ಚಿಗುರಿತ್ತು. ಗ್ರಿಗೋರಿ, ನಿನಗೆ ನೆನಪಿದೆಯೆ? ಕೊಸೆಕರು ತರಬೇತಿ ಶಿಬಿರಕ್ಕೆ ಹೋದ ದಿನ..."

"ಹೌದು, ನೆನಪಿದೆ."

ಆಕೆಯನ್ನು ಬೀಳ್ಕೊಟ್ಟು ಗ್ರಿಗೋರಿ ತನ್ನ ಕುದುರೆಯನ್ನು ಮನೆಯತ್ತ ಓಡಿಸಿದ. ಪ್ಯೆಂತಲಿ ಹಟ್ಟಿಯಿಂದ ಹೊರಬಂದು ಕೇಳಿದ:

"ನೀನಿನ್ನು ಹೊರಡುತ್ತಿಯಾ? ನಿನ್ನ ಕುದುರೆಗೆ ಮೇವು ಹಾಕಲೆ?"

"ಎಲ್ಲಿಗೆ ಹೋಗಲಿ?" ತಂದೆಯನ್ನೇ ದಿಟ್ಟಿಸುತ್ತ ಗ್ರಿಗೋರಿ ಕೇಳಿದ.

"ಕಾರ್ಗಿನ್‌ಸ್ಕಾಯಾಗೆ."

"ಇಲ್ಲ. ಇವತ್ತು ಹೋಗುವುದಿಲ್ಲ."

"ಏಕೆ?"

"ನನ್ನ ನಿರ್ಧಾರವನ್ನು ಬದಲಿಸಿದ್ದೇನೆ. ಮೋಡಗಳು ಕವಿಯುತ್ತಿವೆ. ಮಳೆ ಬರಬಹುದು."

"ಹೌದು. ಮಳೆ ಬರಬಹುದು." ಮುದುಕ ಒಪ್ಪಿಕೊಂಡ.

ನತಾಲ್ಯಾ ಮತ್ತು ಮಕ್ಕಳಿಗೆ ನಿದ್ರೆ ಬಂದ ನಂತರ ಗ್ರಿಗೋರಿ ಅಕ್ಸಿನ್ಯಾಳ ಮನೆಯತ್ತ ಹೊರಟ.

ಮೇ ೨೨ ರಂದು ವಿದ್ರೋಹಿಗಳ ಸೇನೆ ಡಾನ್‌ನ ಎಡಬದಿಗೆ ಸರಿಯತೊಡಗಿತು. ಹಿಂಜರಿಯುವ ಮುನ್ನ ಪ್ರತಿ ಅಂಗುಲ ನೆಲಕ್ಕಾಗಿ ಅವರು ಹೋರಾಟ ನಡೆಸಿದರು. ಪ್ರೊಖೊರ್ ಝ್ಯೈಕೊವ್ ಎರಡು ದಿನ ಮನೆಯಲ್ಲಿದ್ದ. ಅಕ್ಸಿನ್ಯಾಳಿಗೆ ಗ್ರಿಗೋರಿಯ ಪತ್ರವನ್ನು ಕೊಟ್ಟ. ಗ್ರಿಗೋರಿಯ ಸಲಹೆಯನ್ನು ಇಲಿನಿಚ್ನಾಳಿಗೆ ತಿಳಿಸಿದ.

ವ್ಯೆಶೆನ್‌ಸ್ಕಾಯಾ ತಲಪಿದ ನಂತರ, ಅಕ್ಸಿನ್ಯಾ ಹೊಸ ಇಗರ್ಜಿಯ ಬಳಿಯಲ್ಲಿ ವಾಸಿಸುತ್ತಿದ್ದ ತನ್ನ ಅತ್ತೆಯ ಮನೆಯಲ್ಲಿ ಉಳಿದುಕೊಂಡಳು. ಮರುದಿನವನ್ನು ಗ್ರಿಗೋರಿಯ ನಿರೀಕ್ಷೆಯಲ್ಲಿ ಕಳೆದಳು. ಸಂಜೆಯ ಹೊತ್ತಿಗೆ ಪ್ರೊಖೊರ್ ಝ್ಯೈಕೊವ್ ಅವಳನ್ನು ಹುಡುಕುತ್ತ ಬಂದ.

ಅಕ್ಸಿನ್ಯಾ ಪ್ರೊಖೊರ್‌ನ ಸಂಗಡ ಗ್ರಿಗೋರಿಯ ಗುಡಿಸಲಿಗೆ ಹೋದಳು. ಮುಂದಿನ ಎರಡು ದಿನ ಅಕ್ಸಿನ್ಯಾ ಮತ್ತು ಗ್ರಿಗೋರಿ ತಮ್ಮ ಸುತ್ತಮುತ್ತಲಿನ ಪ್ರಪಂಚವನ್ನು ಮರೆತು ಸ್ವಪ್ನಲೋಕದಲ್ಲಿ ವಿಹರಿಸಿದರು.

ಗ್ರಿಗೋರಿ ಮೂರನೆಯ ದಿನ ತಾರತಾರಸ್ಕಕ್ಕೆ ಹೊರಟ. ಸಂಜೆಯ ಹೊತ್ತಿಗೆ ತಾರತಾರಸ್ಕದ ಎದುರಿಗಿದ್ದ ದಡವನ್ನು ಮುಟ್ಟಿ ತಂದೆಗೆ ಹೇಳಿ ಕಳುಹಿಸಿದ.

"ನಮ್ಮನ್ನು ನೋಡಿ ಹೋಗಲು ಬಂದೆಯಾ?" ಪ್ಯೆಂತಲಿ ಕೇಳಿದ.

"ನೀವೆಲ್ಲ ಹೇಗಿದ್ದೀರಿ? ಅಮ್ಮ ಮತ್ತು ನತಾಲ್ಯಾ ಎಲ್ಲಿದ್ದಾರೆ?"

"ನತಾಲ್ಯಾ ಹಾಸಿಗೆ ಹಿಡಿದಿದ್ದಾಳೆ. ಅವಳು ವಿಷಮಜ್ವರದಿಂದ ನರಳುತ್ತಿದ್ದಾಳೆ. ಆದರೆ ಚಿಂತಿಸಬೇಡ."

ಗ್ರಿಗೋರಿ ಮುಂದಿನ ಎರಡು ದಿನಗಳನ್ನು ತನ್ನ ವಿಭಾಗದ ರಣರಂಗವನ್ನು ವೀಕ್ಷಿಸುತ್ತ ಕಳೆದ.

೧೬

ನತಾಲ್ಯಾ ತನ್ನ ನೆರೆಮನೆಯಲ್ಲಿ ವಾಸಿಸುತ್ತಿದ್ದ ಅಕ್ಸಿನ್ಯಾಳನ್ನು ಭೇಟಿಯಾಗಲು ಹೋದಳು. ಅಕ್ಸಿನ್ಯಾ ಮತ್ತು ನತಾಲ್ಯಾ ಮಲಗುವ ಕೋಣೆಯಲ್ಲಿ ಕುಳಿತು ಮಾತನಾಡತೊಡಗಿದರು.

"ಗ್ರಿಗೋರಿ ಪುನಃ ನಿನ್ನ ಬಳಿ ಬರುತ್ತಿದ್ದಾರೆಂದು ಜನರಾಡಿಕೊಳ್ಳುತ್ತಿದ್ದಾರೆ. ಅವರು ಮನೆಗೆ ಬಂದಾಗಲೆಲ್ಲ ನಿನ್ನನ್ನು ಭೇಟಿಯಾಗುತ್ತಾರಂತೆ. ನಿಜವೆ?"— ನತಾಲ್ಯಾ ಕೇಳಿದಳು.

"ನಿನ್ನ ವಿಷಯದಲ್ಲಿ ನನಗೆ ಕಿಂಚಿತ್ತೂ ದಯೆಯಿಲ್ಲ. ನಾನು ಕಷ್ಟದಲ್ಲಿರುವಾಗ ನಿನಗೆ ಸಂತೋಷವಾಗುತ್ತದೆ. ನೀನು ಕಷ್ಟದಲ್ಲಿರುವುದನ್ನು ಕಂಡು ನನಗೆ ಸಂತೋಷವಾಗುತ್ತದೆ. ನಾವಿಬ್ಬರೂ ಗ್ರಿಗೋರಿಯನ್ನು ಹಂಚಿಕೊಂಡಿದ್ದೇವೆ."

"ನನ್ನ ಜೀವನ ನಿನ್ನಿಂದಾಗಿ ಹಾಳಾಯಿತು. ಸಿಟ್ಟಾಗಬೇಡ. ಸತ್ಯವನ್ನು ಹೇಳಿದ್ದಕ್ಕಾಗಿ ನಿನಗೆ ಧನ್ಯವಾದ."

ಆ ರಾತ್ರಿ ನತಾಲ್ಯಾಳಿಗೆ ನಿದ್ದೆ ಬರಲಿಲ್ಲ. ಅವಳು ಅನ್ಯಮನಸ್ಕಳಾಗಿರುತ್ತಿದ್ದಳು. ಹಗಲಿರುಳು ಮಡಿದು ತನ್ನ ಮನಸ್ಸಿನ ದುಗುಡವನ್ನು

ಮರೆಯಲು ಪ್ರಯತ್ನಿಸುತ್ತಿದ್ದಳು. ಒಂದು ದಿನ ಇಲಿನಿಚ್ನಾಳೊಡನೆ ಹೊಲಗಳಿಂದ ಹಿಂತಿರುಗುತ್ತಿದ್ದಾಗ, "ನನಗೀಗ ಮೂರು ತಿಂಗಳಾಗಿದೆ. ಗರ್ಭಪಾತ ಮಾಡಿಸಿಕೊಳ್ಳುತ್ತೇನೆ," ಎಂದು ಹೇಳಿದಳು.

ರಾತ್ರಿ ಊಟದ ನಂತರ, ನತಾಲ್ಯಾಳೊಂದಿಗೆ ಮಾತನಾಡಬೇಕೆಂದು ಇಲಿನಿಚ್ನಾ ಯೋಚಿಸಿದಳು. ಗರ್ಭಪಾತ ಮಾಡಿಸಿಕೊಳ್ಳದಂತೆ ಅವಳ ಮನ ಒಲಿಸಬೇಕೆಂದು ನಿರ್ಧರಿಸಿದ್ದಳು. ಆದರೆ ಆಕೆ ಮನೆಯ ಕೆಲಸ ಮುಗಿಸುವಷ್ಟರಲ್ಲಿ ನತಾಲ್ಯಾ ಗರ್ಭಪಾತ ಮಾಡಿಸಿಕೊಳ್ಳಲು ಹೋಗಿಯಾಗಿತ್ತು.

ಮಧ್ಯ ರಾತ್ರಿಯ ಹೊತ್ತಿಗೆ ಅರೆ ಪ್ರಜ್ಞಾವಸ್ಥೆಯಲ್ಲಿದ್ದ ನತಾಲ್ಯಾ ಬಂದಳು. ಇಲಿನಿಚ್ನಾ ಅವಳ ಕೈ ಹಿಡಿದು ಕೋಣೆಗೆ ಕರೆದುಕೊಂಡು ಹೋದಳು. ನತಾಲ್ಯಾ ಬಹು ಕಷ್ಟದಿಂದ ಹಾಸಿಗೆಯಲ್ಲಿ ಮಲಗಿಕೊಂಡಳು. ರಕ್ತಸ್ರಾವವಿನ್ನೂ ನಿಂತಿರಲಿಲ್ಲ.

ಪೈಂತಲಿ ವೈದ್ಯನನ್ನು ಕರೆದುಕೊಂಡು ಮುಂಜಾನೆ ಬಂದ. ವೈದ್ಯ ಕೋಣೆಗೆ ಹೋಗಿ ಹತ್ತು ನಿಮಿಷ ನತಾಲ್ಯಾಳನ್ನು ಪರೀಕ್ಷಿಸಿ ನಿಟ್ಟುಸಿರಿಟ್ಟು, "ತುಂಬಾ ರಕ್ತ ಹೋಗಿದೆ. ನಾನೇನನ್ನೂ ಮಾಡುವಂತಿಲ್ಲ," ಎಂದ. ಮಧ್ಯಾಹ್ನ ಆಕೆ ತೀರಿಕೊಂಡಳು.

ನತಾಲ್ಯಾಳನ್ನು ಹೂಳಿದ ಮೂರನೆಯ ದಿನ ಗ್ರಿಗೋರಿ ಮನೆಗೆ ಬಂದ. ಅವನನ್ನು ಕಂಡಾಕ್ಷಣ ಮನ್ಯಾ ಬಿಕ್ಕಳಿಸಿದಳು. ಮಿಶಾತ್ಕಾ ಮತ್ತು ಪೊಲ್ಯುಶ್ಕಾ ಮೆಟ್ಟಿಲಬಳಿ ಬಂದರು. ನತಾಲ್ಯಾಳ ಮರಣ ಗ್ರಿಗೋರಿಯನ್ನು ಗಾಸಿಗೊಳಿಸಿತ್ತು. ಆತ ಅವಳನ್ನು ಬಹುವಾಗಿ ಪ್ರೀತಿಸುತ್ತಿದ್ದ. ತನ್ನಿಂದಾಗಿಯೇ ಆಕೆ ತೀರಿಕೊಂಡಿದ್ದಾಳೆಂಬ ವಿಚಾರದಿಂದ ಆತ ಮತ್ತಷ್ಟು ದುಃಖಿತನಾದ.

ಕೆಲದಿನಗಳನ್ನು ಸ್ವಗ್ರಾಮದಲ್ಲಿ ಕಳೆದನಂತರ ಗ್ರಿಗೋರಿ ರಣರಂಗಕ್ಕೆ ಹೊರಟ. ಆತ ರಣರಂಗಕ್ಕೆ ಹೋದ ಹತ್ತು ದಿನಗಳ ನಂತರ, ಡಾನ್ ನಲ್ಲಿ ಮುಳುಗಿ ದಾರ್ಯಾ ಆತ್ಮಹತ್ಯೆ ಮಾಡಿ-



364-17

ಕೊಂಡಳು. ತನ್ನ ಕುಟುಂಬದವರ ಹಾಗೂ ನೆರೆಹೊರೆಯವರ ಸಾವಿನಿಂದಾದ ದುಃಖವನ್ನು ಮರೆಯಲು ಪ್ರೈಂತಲಿ ಎಲ್ಲ ಪ್ರಯತ್ನವನ್ನು ಮಾಡಿದ. ಆದರೆ ಕೆಲವೇ ದಿನಗಳಲ್ಲಿ ಆತ ಹೊಸ ಆಘಾತವೊಂದಕ್ಕೆ ಗುರಿಯಾಗಬೇಕಾಯಿತು. ಒಂದುದಿನ ಸೇನೆಯ ಬಂಡಿಯೊಂದನ್ನೆಳೆಯುತ್ತಾ ಅವನ ಗೇಟಿನ ಬಳಿ ಕುದುರೆಯೊಂದು ಬಂದು ನಿಂತಿತು. ಮನ್ಯಾ ಆ ಬಂಡಿಯಬಳಿ ಹೋಗಿ ನೋಡಿದಳು. ತನ್ನಣ್ಣನನ್ನು ಅದರಲ್ಲಿ ಕಂಡು ಆಕೆಗೆ ದಂಗು ಬಡಿದಂತಾಯಿತು. ಈ ಸುದ್ದಿ ಮನೆಯವರಿಗೆ ಗೊತ್ತಾದಾಗ ಎಲ್ಲರೂ ಗಾಬರಿಗೊಂಡರು. ಆದರೆ ಗ್ರಿಗೋರಿಯೊಂದಿಗೆ ಬಂದಿದ್ದ ರ್ಝ್ಯುಕೊವಾ ಹೇಳಿದ, "ಗಾಬರಿಯಾಗಬೇಡಿ. ವಿಷಮಜ್ವರದಿಂದ ನರಳುತ್ತಿದ್ದಾನಷ್ಟೆ." ಪ್ರೈಂತಲಿ ಮತ್ತು ರ್ಝ್ಯುಕೊವ್ ಅವನನ್ನು ಮಲಗುವ ಕೋಣೆಗೆ ಕೊಂಡೊಯ್ದರು.

ಗ್ರಿಗೋರಿ ಒಂದು ತಿಂಗಳಿನಲ್ಲಿ ಗುಣವಾದ. ಯುದ್ಧರಂಗ ಡಾನ್‌ನ ಸಮೀಪಕ್ಕೆ ವ್ಯಾಪಿಸಿತ್ತು. ಎಲ್ಲ ಕೊಸೆಕರು ಊರು ಬಿಟ್ಟು ಹೋಗಬೇಕೆಂದು ಜಿಲ್ಲಾ ಮುಖ್ಯಸ್ಥ ಆದೇಶ ನೀಡಿದ. ವೈಶೆನ್‌ಸ್ಕಾಯಾಗೆ ಹೋಗುವ ಮುನ್ನ ಗ್ರಿಗೋರಿ ಅಕ್ಸಿನ್ಯಾಳನ್ನು ಭೇಟಿಯಾದ.

"ನೀನು ನನ್ನ ಜೊತೆ ಬರುತ್ತೀಯಾ?" ಎಂದಾಕೆಯನ್ನು ಕೇಳಿದ.

"ನಾನು ನಿನ್ನ ಜೊತೆ ಎಲ್ಲಿ ಬೇಕಾದರೂ ಬರಲು ಸಿದ್ಧ ಎಂದು ಹಿಂದೊಮ್ಮೆ ಹೇಳಿದ್ದೆ. ಈಗಲೂ ಆ ಮಾತನ್ನು ಪುನರುಚ್ಚರಿಸುತ್ತೇನೆ. ನಿನ್ನಲ್ಲಿ ನನಗಿರುವ ಪ್ರೇಮ ನಿಜವಾದದ್ದು." ಗ್ರಿಗೋರಿ ಅಕ್ಸಿನ್ಯಾ ಮತ್ತು ರ್ಝ್ಯುಕೊವ್ ಮರುದಿನ ಹೊರಡುವುದೆಂದು ನಿರ್ಧರಿಸಿದರು.

ಕುದುರೆಗಳು ಕಾಲ್ನಡಿಗೆಯ ವೇಗದಲ್ಲಿ ಹೊರಟವು. ಅವರು ರಾತ್ರಿಯನ್ನು ಕಾರ್ಗಿನ್‌ಸ್ಕಾಯಾದಲ್ಲಿ ಕಳೆದು ಮುಂಜಾನೆ ಅಲ್ಲಿಂದ ಹೊರಟರು. ಮುಂದಿನ ತಾಣದಲ್ಲಿ ಗ್ರಿಗೋರಿಗೆ ಉಳಕೊಳ್ಳಲು ಸ್ಥಳದೊರೆಯಿತು. ಅಲ್ಲಿ ಅಕ್ಸಿನ್ಯಾಳ ಆರೋಗ್ಯ ಬಿಗಡಾಯಿಸಿತು. ಆಕೆ ವಿಷಮಜ್ವರದಿಂದ ನರಳುತ್ತಿದ್ದಾಳೆಂಬುದು ಗ್ರಿಗೋರಿಗೆ ಖಾತ್ರಿಯಾಯಿತು. ಮಧ್ಯಾಹ್ನದ ಹೊತ್ತಿಗೆ ರಸ್ತೆಯ ಬದಿಯಲ್ಲಿದ್ದ ಮನೆಯೊಂದರಲ್ಲಿ ಅವರಿಗೆ ಆಶ್ರಯ ದೊರೆಯಿತು. ಮುಂದಿನ ಪಯಣದಲ್ಲಿ ಅಕ್ಸಿನ್ಯಾಳನ್ನು ಕರೆದುಕೊಂಡು ಹೋಗುವಂತಿರಲಿಲ್ಲ.

"ಇವಳನ್ನು ನಿಮ್ಮ ಮನೆಯಲ್ಲಿ ಬಿಟ್ಟು ಹೋಗುತ್ತೇನೆ. ಇವಳ ಶುಶ್ರೂಷೆ ಮಾಡಿ. ನೀವು ಕೇಳಿದಷ್ಟು ಹಣಕೊಡುತ್ತೇನೆ. ಇಷ್ಟು ಉಪಕಾರ ಮಾಡಿ!" ಎಂದು ಮನೆಯ ಯಜಮಾನನನ್ನು ವಿನಂತಿಸಿಕೊಂಡ ಗ್ರಿಗೋರಿ, ಜೇಬಿನಲ್ಲಿದ್ದ ಎಲ್ಲ ದುಡ್ಡನ್ನೂ ತನ್ನ ರೈಫಲ್, ತೋಟಾಗಳನ್ನೂ ಅವನಿಗೆ ಕೊಟ್ಟು ಅಕ್ಸಿನ್ಯಾಳನ್ನು ಅವರ ವಶಕ್ಕೊಪ್ಪಿಸಿ ಪಯಣವನ್ನು ಮುಂದುವರಿಸಿದ.

ಜನವರಿಯ ಕೊನೆಯಲ್ಲಿ ಗ್ರಿಗೋರಿ ಮತ್ತು ರ್ಝ್ಯುಕೊವ್ ಬೆಲಿಯಾ ಗ್ಲಿನಾ ಎಂಬ ಗ್ರಾಮವನ್ನು ತಲುಪಿದರು. ಬೀದಿಯೊಂದರಲ್ಲಿ ಹೋಗುತ್ತಿದ್ದಾಗ ರ್ಝ್ಯುಕೊವ್ ತನ್ನ ದಾಯಾದಿ ಆಂದ್ರಿ ಎಂಬಾತನನ್ನು ಭೇಟಿಯಾದ. ಗ್ರಿಗೋರಿಯನ್ನು ಕಂಡಾಕ್ಷಣ ಆಂದ್ರಿ ಹೇಳಿದ, "ನಿನಗೊಂದು ಕೆಟ್ಟ ಸುದ್ದಿಯನ್ನು ತಿಳಿಸಬೇಕಾಗಿದೆ. ನಿನ್ನ ತಂದೆ ನಿನ್ನೆ ದೈವಾಧೀನರಾದರು." ಕೂಡಲೇ ಅವರು ಗಾಡಿಯನ್ನು ಊರಿನೆಡೆಗೆ ಹೊರಳಿಸಿದರು.

ಗ್ರಿಗೋರಿ ಬಾಗಿ ತಂದೆಯ ಮುಖವನ್ನೇ ದಿಟ್ಟಿಸಿದ. ಮುಖ ವಿಕಾರವಾಗಿತ್ತು. ರ್ಝ್ಯುಕೊವ್ ಶವ ಪೆಟ್ಟಿಗೆಯನ್ನು ತಯಾರಿಸಿದ. ಸಂಜೆಯೊಳಗಾಗಿ ದಫನಕಾರ್ಯ ಮುಗಿಯಿತು.

## ೧೭

ಒಂದು ವಾರದ ನಂತರ ತಾರತಾರಸ್ಕಕ್ಕೆ ಪ್ರೊಖೊರ್ ರ್ಝ್ಯುಕೊವ್ ಬಂದ. ಆತ ಗಾಯಗೊಂಡಿದ್ದ. ಮಿಲ್ಲೆರೊವೊ ನಿಲ್ದಾಣದಿಂದ ಅವನನ್ನು ಬಂಡಿಯಲ್ಲಿ ಕೂರಿಸಿ ತರಲಾಗಿತ್ತು. ಈ ಸುದ್ದಿಯನ್ನು ಕೇಳಿದಾಕ್ಷಣ ಅಕ್ಸಿನ್ಯಾ ಬಹಳ ವೇಗವಾಗಿ ನಡೆಯುತ್ತ ಕೆಲವೊಮ್ಮೆ ಓಡುತ್ತ ರ್ಝ್ಯುಕೊವ್‌ನ ಅಂಗಳಕ್ಕೆ ಹೋದಳು.

"ಆತನೀಗ ಕೆಂಪು ಸೇನೆಯನ್ನು ಸೇರಿದ್ದಾನೆ. ತನ್ನ ಹಿಂದಿನ ಪಾಪಗಳಿಗಾಗಿ ಪ್ರಾಯಶ್ಚಿತ್ತ ಮಾಡಿಕೊಳ್ಳುತ್ತಿದ್ದಾನೆ..." ಎಂದು ರ್ಝ್ಯುಕೊವ್ ಹೇಳಿದಾಗ ಅಕ್ಸಿನ್ಯಾ ಅಲ್ಲಿಂದ ಓಡುತ್ತ

ಮೆಲಖೋವ್‌ನ ಮನೆಯ ಗೇಟಿನ ಬಳಿ ಬಂದಳು.

ಒಂದು ದಿನ ಮಿಶಾಕೊಶೈವಾ ರಣರಂಗ ದಿಂದ ಬಂದ. ಇಲಿನಿಚ್ನಾ ಅಡಿಗೆ ಮಾಡುವುದರಲ್ಲಿ ನಿರತಳಾಗಿದ್ದಳು.

"ನಿನ್ನ ಆತ್ಮಸಾಕ್ಷಿ ನೀನಿಲ್ಲಿಗೆ ಬರಲು ಹೇಗ ಬಿಟ್ಟಿತು. ನೀನೊಬ್ಬ ಕೊಲೆಗಡುಕ."

"ನಾನು? ಹೇಗೆ?"

"ನನ್ನ ಮಗ ಪ್ಯೋತ್ರನನ್ನು ನೀನು ಕೊಂದೆ."

"ಯುದ್ಧದಲ್ಲಿ ಇದೆಲ್ಲ ಸಾಮಾನ್ಯ."

"ನೀನು ನಮ್ಮ ನೆಂಟ ಕೊರ್ಶುನೊವ್‌ನನ್ನೂ ಕೊಂದೆ."

"ಕೊರ್ಶುನೊವ್‌ರಂಥವರೇ ಕೊಸೆಕರನ್ನು ಪ್ರಸೆಲಾಯಿಸಿ ದಂಗ ಏಳುವಂತೆ ಪ್ರೋತ್ಸಾಹಿಸಿದ್ದರು. ಅಂಥವರಿಂದಲೇ ಈ ಯುದ್ಧ ಪ್ರಾರಂಭವಾಯಿತು. ನಮ್ಮ ವಿರುದ್ಧ ಬಂಡಾಯವನ್ನು ಪ್ರಾರಂಭ ಮಾಡಿದವರು ಯಾರು? ನಿಮ್ಮ ಮಗ ಗ್ರಿಗೋರಿ ಏನಾಗಿದ್ದಾನೆ? ಆತನೇ ನಿಜವಾದ ಕೊಲೆಗಡುಕ!"

ಮಾರುದಿನ ಆತ ಮತ್ತೆ ಇಲಿನಿಚ್ನಾಳ ಮನೆಗೆ ಬಂದ. ಇಲಿನಿಚ್ನಾ ಮಗಳಿಗೆ ತಾಕೀತು ಮಾಡಿದಳು... "ಆತ ಇನ್ನು ಮುಂದೆ ಇಲ್ಲಿಗೆ ಕಾಲಿಡದಂತೆ ನೋಡಿಕೊ ತಿಳಿಯಿತೆ?"

"ಇಲ್ಲ. ಅವರು ಬರಲೇಬೇಕು. ನೀವು ಅವರನ್ನು ತಡೆಯುವಂತಿಲ್ಲ." ಕಿಡಿ ಕಾರುತ್ತಿದ್ದ ಕಣ್ಣುಗಳನ್ನು ಕಿರಿದು ಮಾಡಿ ದುನ್ಯಾ ಹೇಳಿದಳು.

ಇಗರ್ಜಿಯಲ್ಲಿ ಯಾರೂ ಇಲ್ಲದಿದ್ದ ರಾತ್ರಿ ಹೊತ್ತಿನಲ್ಲಿ ಪಾದ್ರಿ ಅವರಿಬ್ಬರ ಮದುವೆ ಮಾಡಿಸಿದ. ಇದಾದ ಮೂರು ತಿಂಗಳ ನಂತರ ಇಲಿನಿಚ್ನಾ ತೀರಿಕೊಂಡಳು.

ದುನ್ಯಾಳ ಅನುಮತಿ ಪಡೆದು ಅಕ್ಸಿನ್ಯಾ ಮಕ್ಕಳನ್ನು ತನ್ನ ಮನೆಗೆ ಕರೆದುಕೊಂಡು ಹೋದಳು.

ಕೊಶೆವ್ಯಾ ಪಾರ್ಟಿ ಕಚೇರಿಗೆ ಹೋದ.

ಆತನನ್ನು ಗ್ರಾಮದ ಕ್ರಾಂತಿಕಾರಿ ಸಮಿತಿಯ ಅಧ್ಯಕ್ಷನನ್ನಾಗಿ ನೇಮಕ ಮಾಡಿದರು.

ಮಿಲ್ಲೆರೊವೊ ನಿಲ್ದಾಣಕ್ಕೆ ಬಂದಾಗ ಗ್ರಿಗೋರಿಗೆ ಒಂದು ಜಾರು ಬಂಡಿ ಮತ್ತು ಕುದುರೆಗಳನ್ನು ಕೊಟ್ಟರು. ಕೆಂಪು ಸೇನೆಯಿಂದ ನಿವೃತ್ತನಾದ ಸೈನಿಕನಾಗಿದ್ದುದರಿಂದ ಅವನಿಗೆ ಈ ಸೌಲಭ್ಯ ದೊರಕಿತ್ತು. ಗ್ರಿಗೋರಿ ಒಂದು ಮುಂಜಾನೆ ಮನೆ ತಲಪಿದ.

"ಮಿಶಾ. ಶುಭಾಶಯಗಳು!" ಗ್ರಿಗೋರಿ ಹೇಳಿದ.

"ಧನ್ಯವಾದಗಳು!" ಅವರು ಮೇಜಿನ ಬಳಿ ಮೌನವಾಗಿ ಕುಳಿತರು. ಅವರು ಪರಸ್ಪರರ ಭಾವನೆಗಳನ್ನರಿಯಲು ಪ್ರಯತ್ನಿಸುತ್ತಿದ್ದರು. ಹೊಲ ಮತ್ತು ಬೇಸಾಯದ ಕುರಿತು ವಿಚಾರ ವಿನಿಮಯ ಮಾಡಿಕೊಂಡರು. ದುನ್ಯಾಳಿಗೆ ಅತ್ಯಾನಂದವಾಯಿತು. ಗಂಡ ಮತ್ತು ಅಣ್ಣ ರಾಜಿಯಾಗಿದ್ದಾರೆಂದೂ ಇನ್ನು ಮುಂದೆ ಜಗಳ ಮಾಡಿಕೊಳ್ಳುವುದಿಲ್ಲವೆಂದೂ ಆಕೆ ಯೋಚಿಸಿದಳು. ಊಟ ಮುಗಿದ ನಂತರ ದುನ್ಯಾ ಮಕ್ಕಳೊಂದಿಗೆ ಮಲಗಿದಳು. ಗ್ರಿಗೋರಿ ಮತ್ತು ಮಿಶಾ ಮುಖಾಮುಖಿ ಕುಳಿತು ಮಾತ ನಾಡತೊಡಗಿದರು.

ಸ್ವಲ್ಪ ಹೊತ್ತು ಮೌನವಾಗಿದ್ದ ನಂತರ ಗ್ರಿಗೋರಿ ಕೇಳಿದ: "ನಮ್ಮ ನಡುವೆ ಇನ್ನೂ ಭಿನ್ನಾಭಿಪ್ರಾಯಗಳಿವೆ. ನಾನು ಮರಳಿ ಬಂದದ್ದನ್ನು ನೋಡಿ ನಿನಗೆ ಸಂತೋಷವಾಗಿಲ್ಲ ಅಲ್ಲವೆ?"

"ನಿನ್ನ ಅನಿಸಿಕೆ ಸರಿ. ನನಗೆ ಸಂತೋಷ ವಾಗಿಲ್ಲ!"

"ಏಕೆ?"

"ಇನ್ನೊಂದು ಚಿಂತೆ ಪ್ರಾರಂಭವಾಗಿದೆ. ನಾವಿನ್ನೂ ಶತ್ರುಗಳಾಗಿ ಮುಂದುವರಿಯುವಂತೆ ಕಾಣುತ್ತಿದೆ."

"ನನಗೆ ನಿನ್ನ ಮಾತು ಅರ್ಥವಾಗುತ್ತಿಲ್ಲ. ನಾವೇಕೆ ಶತ್ರುಗಳಾಗಿರಬೇಕು ಹೇಳು."

"ನೀನು ನಂಬಲರ್ಹ ವ್ಯಕ್ತಿಯಲ್ಲ. ತೋಳಕ್ಕೆ ಎಷ್ಟು ಆಹಾರ ಕೊಟ್ಟರೂ ಅದು ಕಾಡನ್ನು ನೋಡಿದಾಕ್ಷಣ ಓಡಿ ಹೋಗುತ್ತದೆ."

"ನೀನು ಯಾವುದಕ್ಕಾಗಿ ಹೆದರುತ್ತಿ? ನಾನು ಮತ್ತೆ ಸೋವಿಯತ್ ಸರಕಾರದ ವಿರುದ್ಧ ದಂಗೆ ಏಳಬಹುದೆಂದು ಗ್ರಹಿಸಿದ್ದೀಯಾ?"

"ಯಾವುದಾದರೂ ಘಟನೆ ಸಂಭವಿಸಿದರೆ, ನೀನು ಮತ್ತೆ ಶತ್ರುಪಕ್ಷಕ್ಕೆ ಹೋಗಲಾರೆಯೆಂದು ನನಗನಿಸುವುದಿಲ್ಲ."

"ನಾನು ಪಕ್ಷಾಂತರ ಮಾಡಬಯಸುವದಿಲ್ಲ. ನನ್ನ ಬದುಕನ್ನು ದೇಶ ಸೇವೆಯಲ್ಲಿಯೇ ಕಳೆದಿದ್ದೇನೆ. ಇನ್ನು ಮುಂದೆ ನಾನು ಯಾರ ಅಧೀನದಲ್ಲೂ ಸೇವೆ ಮಾಡಲು ಬಯಸುವುದಿಲ್ಲ. ಹೋರಾಟ ಸಾಕಾಗಿದೆ. ಬಳಲಿ ಬೆಂಡಾಗಿದ್ದೇನೆ. ಕ್ರಾಂತಿ ಮತ್ತು ಪ್ರತಿ ಕ್ರಾಂತಿ ಎರಡರಿಂದಲೂ ನನಗೆ ಜಿಗುಪ್ಸೆ ಹುಟ್ಟಿದೆ; ಅವೆಲ್ಲ ನರಕಕ್ಕೆ ಹೋಗಲಿ! ಇನ್ನು ಮುಂದೆ ನನ್ನ ಮಕ್ಕಳೊಂದಿಗೆ ಬೇಸಾಯ ಮಾಡುತ್ತ ಇರಬೇಕೆಂದಿದ್ದೇನೆ," ಎಂದ. ಗ್ರಿಗೋರಿಯ ಮಾತಿನಲ್ಲಿ ಮಿಶಾನಿಗೆ ನಂಬಿಕೆ ಹುಟ್ಟಲಿಲ್ಲ.

ದುನ್ಯಾ ಬೆಳಿಗ್ಗೆ ಬೇಗ ಎದ್ದಳು. "ನಾನು ಊರು ಸುತ್ತಾಡಿಕೊಂಡು ಬರುತ್ತೇನೆ"–ಎಂದು ಹೇಳಿ ಗ್ರಿಗೋರಿ ಬೀದಿಗಿಳಿದ. ಆತ ರ‍್ಯಾಬ್ಚಿಕೊವ್‌ನ ಮನೆಗೆ ಹೋದ. ರ‍್ಯಾಬ್ಚಿಕೊವ್ ಅವನನ್ನು ಸ್ವಾಗತಿಸುತ್ತ ವೊಡ್ಕಾ ಬಾಟಲಿಯನ್ನು ಮೇಜಿನ ಮೇಲಿಟ್ಟ. ಒಲೆ ಉರಿಸಿದ. ಇಬ್ಬರೂ ಮೊಟ್ಟೆಗಳನ್ನು ಬೇಯಿಸಿ ತಿಂದರು.

"ಲಿಸ್ತನಿಸ್ಕಿಯವರ ಸಮಾಚಾರ ಕೇಳಿದೆಯಾ? ತಂದೆ-ಮಗ ಇಬ್ಬರೂ ತೀರಿಕೊಂಡರು ಮುದುಕ ವಿಷಮ ಜ್ವರದಿಂದಾಗಿ ತೀರಿಕೊಂಡ. ಮಗ ಯೆಕಾಟೆರಿನೊಡಾರ್ ತನಕ ಹೋದ. ಅಲ್ಲಿ ಅವನ ಹೆಂಡತಿ ಜನರಲ್ ಪೆಕ್ರೊವ್‌ಸ್ಕಿಯೊಂದಿಗೆ ಅನೈತಿಕ ಸಂಬಂಧ ಬೆಳೆಸಿಕೊಂಡಳು. ಅವನಿಂದ ಸಹಿಸಲಾಗಲಿಲ್ಲ. ಆತ ಗುಂಡು ಹೊಡೆದುಕೊಂಡು ಆತ್ಮಹತ್ಯೆ ಮಾಡಿಕೊಂಡ," ರ‍್ಯಾಬ್ಚಿಕೊವ್ ಹೇಳಿದ.

ಗ್ರಿಗೋರಿ ಯೋಚನಾಪರನಾಗಿ ಹೇಳಿದ: "ಲಿಸ್ತನಿಸ್ಕಿ ಮತ್ತು ಕೊಸೆವ್ಯಾರಂಥವರನ್ನು ಕಂಡಾಗ ನನಗೆ ಹೊಟ್ಟೆಕಿಚ್ಚಾಗುತ್ತದೆ. ಅವರಿಗೆ ಪ್ರಾರಂಭದಿಂದ ಪ್ರತಿಯೊಂದು ಸ್ಪಷ್ಟವಾಗಿತ್ತು. ಆದರೆ, ನಾನು ಈಗಲೂ ಅನಿಶ್ಚಿತತೆಯ ತೂಗು-

ಹಾಸ್ಯಲೆಯುತ್ತಿದ್ದೇನೆ. ಅವರಿಬ್ಬರೂ ತಮ್ಮ ಮುಂದಿದ್ದ ನೇರ ದಾರಿಯಲ್ಲಿ ನಡೆದರು. ಆದರೆ ನಾನು, ೧೯೧೭ ರಿಂದ ಚಕ್ರಾಕಾರವಾಗಿ ಸುತ್ತುತ್ತ ಕುಡುಕನಂತೆ ಎಡವಿ ಬೀಳುತ್ತಿದ್ದೇನೆ."

ರ್ಯಾಬ್ಚಿಕೊವ್‌ನ ಮನೆಯಿಂದ ಗ್ರಿಗೋರಿ ನೇರವಾಗಿ ಡಾನ್‌ನ ದಡಕ್ಕೆ ಹೋದ. ಮಧ್ಯಾಹ್ನದ ಹೊತ್ತಿಗೆ ವ್ಯೆಶೆನ್‌ಸ್ಕಾಯಾ ತಲುಪಿ ಚೌಕದಲ್ಲಿ ಸ್ವಲ್ಪ ಹೊತ್ತು ನಿಂತುಕೊಂಡ. ರಾಜಕೀಯ ವಿಭಾಗದೆಡೆ ಹೋಗಲು ಅವನಿಗೆ ಮನಸ್ಸಿರಲಿಲ್ಲ. ಅಷ್ಟರಲ್ಲಿ ಅವನಿಗೆ ಯಾಕೊವ್ ಫೊಮಿನ್ ಸಿಕ್ಕಿದ. ಡಾನ್ ಸೇನೆಯ ೨೮ನೇ ರೆಜಿಮೆಂಟಿನಲ್ಲಿ ಕಮಾಂಡರನಾಗಿದ್ದ ಫೊಮಿನ್ ಪ್ಯೋತ್ರನ ಸಂಗಾತಿಯಾಗಿದ್ದ.

ಗ್ರಿಗೋರಿಯನ್ನು ಏಕಾಂತಕ್ಕೆ ಕರೆದುಕೊಂಡು ಹೋದ. ಫೊಮಿನ್ ಅವನ ಕಿವಿಯಲ್ಲಿ ಪಿಸುಗುಟ್ಟಿದ—"ಈ ಪ್ರದೇಶದಲ್ಲಿ ಮತ್ತೆ ಗಲಭೆಗಳು ಪ್ರಾರಂಭವಾಗಿವೆ. ಆಹಾರದ ಕಡ್ಡಾಯ ಕೋರಿಕೆಯಿಂದಾಗಿ ಕೊಸೆಕರು ನೊಂದಿದ್ದಾರೆ. ನೀನು ಇಲ್ಲಿಂದ ಆದಷ್ಟು ಬೇಗ ಹೋಗು."

ಅಕ್ಸಿನ್ಯಾ ಭಕ್ಷ್ಯಗಳನ್ನು ತಯಾರಿಸಿ ತನ್ನ ಪ್ರಿಯತಮನಿಗಾಗಿ ಕಾಯುತ್ತಿದ್ದಳು. ಸಂಜೆ ಗ್ರಿಗೋರಿ ಬಂದ. ಮರುದಿನ ಗ್ರಾಮದ ಕ್ರಾಂತಿಕಾರಿ ಸಮಿತಿಯ ಮುಂದೆ ಹಾಜರಾಗಿ ಕೊಶೆವ್ಯೊಗೆ ತನ್ನ ದಸ್ತಾವೇಜುಗಳನ್ನು ಕೊಟ್ಟ. ತನ್ನ ಕೆಲ ಸೊತ್ತುಗಳನ್ನು ಹಿಡಿದುಕೊಂಡು ಅಕ್ಸಿನ್ಯಾಳ ಮನೆಗೆ ಹೋದ. ಮುಂಜಾನೆ ಮಕ್ಕಳೊಂದಿಗೆ ಆಡಿದ. ಆತ ಶನಿವಾರ ವ್ಯೆಶೆನ್‌ಸ್ಕಾಯಾಗೆ ಹೋಗಿ ರಾಜಕೀಯ ವಿಭಾಗದ ಮುಂದೆ ಹಾಜರಾಗಬೇಕಿತ್ತು. ಆದರೆ, ಗುರುವಾರ ರಾತ್ರಿ ಅವನು ಮಲಗುವ ಸಿದ್ಧತೆಯಲ್ಲಿದ್ದಾಗ ದುನ್ಯಾ ಬಾಗಿಲು ತಟ್ಟಿದಳು—"ಅಣ್ಣಾ, ಆದಷ್ಟು ಬೇಗ ಇಲ್ಲಿಂದ ಹೊರಡು. ವ್ಯೆಶೆನ್‌ಸ್ಕಾಯಾದಿಂದ ನಾಲ್ಕು ಜನ ಕುದುರೆ ಸವಾರರು ಬಂದಿದ್ದಾರೆ. ಅವರು ನಿನ್ನನ್ನು ದಸ್ತಗಿರಿ ಮಾಡುವ ಕುರಿತು ಮಾತನಾಡುತ್ತಿದ್ದರು."

## ೧೮

೧೯೨೦ ರ ಶರತ್ಕಾಲದ ಕೊನೆಯಲ್ಲಿ ಕಡ್ಡಾಯವಾಗಿ ಧಾನ್ಯ ಸಂಗ್ರಹಿಸುವ ಧೋರಣೆಗೆ ಯಶಸ್ಸು ದೊರೆಯಲಿಲ್ಲವಾದ್ದರಿಂದ ಸೋವಿಯತ್ ಸರಕಾರ ಧಾನ್ಯ ಸಂಗ್ರಹ ಪಡೆಗಳನ್ನು ರಚಿಸಿತು. ಡಾನ್ ಪ್ರದೇಶದ ಕೊಸೆಕರಲ್ಲಿ ಅಶಾಂತಿ ತಲೆದೋರಿತು. ಡಾನ್‌ನ ಉತ್ತರದ ಜಿಲ್ಲೆಗಳಲ್ಲಿ ಸಶಸ್ತ್ರ ಗುಂಪುಗಳು ಕಾಣಿಸಿಕೊಂಡುವು. ಡಾನ್‌ನ ವಿಶಾಲ ಪ್ರದೇಶದಲ್ಲಿ ಅಲ್ಲಲ್ಲಿ ತಲೆಯೆತ್ತಿದ್ದ ಈ ಗುಂಪುಗಳನ್ನು ನಿರ್ನಾಮ ಮಾಡಲು ಕೆಂಪು ಸೇನೆಗೆ ಸಾಧ್ಯವಾಗಲಿಲ್ಲ. ಸ್ಥಳೀಯರು ಈ ವಿದ್ರೋಹಿಗಳಿಗೆ ಸಹಾಯ ನೀಡುತ್ತಿದ್ದರು.

ಕಡ್ಡಾಯ ಧಾನ್ಯ ಸಂಗ್ರಹದ ವಿರುದ್ಧ ಫೊಮಿನ್‌ನ ಅಧೀನದಲ್ಲಿದ್ದ ತುಕಡಿಯ ಹಲವಾರು ಸೈನಿಕರು ದಂಗೆಯೆದ್ದರು. ಫೊಮಿನ್ ಮತ್ತು




"ಡಾ. ಯಮುನಪ್ಪ ಅಂತ ಬರೆಯೋ ಬದ್ಲೀ ಮಗನೆ .."

ಕಪಾನಿನ್ ರಹಸ್ಯವಾಗಿ ಅವರನ್ನು ಪ್ರೋತ್ಸಾಹಿಸುತ್ತಿದ್ದರು. ಕ್ರಾಂತಿ ವಿರೋಧಿಗಳಲ್ಲಿ ರಹಸ್ಯವಾಗಿ ಒಂದು ಒಪ್ಪಂದವನ್ನು ಮಾಡಿಕೊಂಡಿದ್ದರು. ಅವರೆಲ್ಲ ಮಾರ್ಚ್ ೧೨ ರಂದು ಸಾಮೂಹಿಕವಾಗಿ ದಂಗೆಯೆದ್ದರು. ಎಲ್ಲ ವಿದ್ರೋಹಿಗಳು ಇಗರ್ಜಿಯ ಬಳಿಯಿದ್ದ ಚೌಕದಲ್ಲಿ ಸಮಾವೇಶಗೊಂಡರು. ನಗರದ ಗಡಿ ಪ್ರದೇಶದಲ್ಲಿದ್ದ ಮನೆಯೊಂದರಲ್ಲಿ ಫೊಮಿನ್, ಕಪಾರಿನ್ ಮೊದಲಾದವರು ಸಭೆ ಸೇರಿದರು. ರಾತ್ರಿಯನ್ನು ಆ ಮನೆಯಲ್ಲಿಯೇ ಕಳೆದರು. ಮರುದಿನ ಮುಂಜಾನೆ ಆ ಊರನ್ನು ತ್ಯಜಿಸಿ ದಕ್ಷಿಣ ಪೂರ್ವದತ್ತ ಹೋದರು.

ಮನೆಯನ್ನು ಬಿಟ್ಟನಂತರ ಗ್ರಿಗೋರಿ ಯೆಲಂಸ್ಕಾಯಾ ಜಿಲ್ಲೆಯ ಗ್ರಾಮವೊಂದರಲ್ಲಿ ಮೂರು ವಾರ ತಲೆ ಮರೆಸಿಕೊಂಡಿದ್ದ. ಅಲ್ಲಿಂದ ಮತ್ತೊಂದು ಗ್ರಾಮಕ್ಕೆ ಹೋಗಿ ಅಕ್ಸಿನ್ಯಾಳ ಸಂಬಂಧಿಕನೊಬ್ಬನೊಂದಿಗೆ ಒಂದು ತಿಂಗಳು ಇದ್ದ. ಅಲ್ಲಿಂದ ಹೊರಟು ಗ್ರಾಮದ ಗಡಿಯಲ್ಲಿದ್ದ

ಬೆಟ್ಟದ ಬಳಿ ಹೋಗುವಷ್ಟರಲ್ಲಿ ಅವನನ್ನು ಮೂರು ಮಂದಿ ಅಶ್ವಾರೋಹಿಗಳು ತಡೆದರು. ಗ್ರಿಗೋರಿ ಅವರನ್ನು ಹಿಂಬಾಲಿಸಿದ. ಅವರು ಗ್ರಾಮದ ಗಡಿಯನ್ನು ದಾಟುತ್ತಿದ್ದಾಗ ಒಂದು ಮನೆ ಕಾಣಿಸಿತು.

ಗ್ರಿಗೋರಿ ನಿಧಾನವಾಗಿ ಆ ಮನೆಯ ಜಗಲಿಯಲ್ಲಿ ಕಾಲಿಟ್ಟ. ಕಾವಲುಗಾರ ಅವನನ್ನು ಕರೆದು ಕೊಂಡು ಒಳಹೋದ. ಒಳಗಿನ ಕೋಣೆಯಲ್ಲಿ ಫೋಮಿನ್ ಆಸೀನನಾಗಿದ್ದ.

ಗ್ರಿಗೋರಿ ಅವನಿಗೆ ವಂದಿಸಿದ.

ಫೋಮಿನ್ ಹೇಳಿದ, "ಮೆಲಖೊವ್, ಭಾಗ್ಯ ನಮ್ಮನ್ನು ಒಂದುಗೂಡಿಸಿದೆ. ಬಾ, ಕುಳಿತುಕೊ. ನಾವೀಗ ಸೋವಿಯತ್ ಸರಕಾರದ ವಿರೋಧಿಗಳಾಗಿದ್ದೇವೆ."

ಫೊಮಿನ್ ಕಪಾರಿನ್‌ನನ್ನು ಕರೆದು ಆತನಿಗೆ ಗ್ರಿಗೋರಿಯ ಪರಿಚಯ ಮಾಡಿಕೊಟ್ಟ. ಗ್ರಿಗೋರಿಗೆ ಉತ್ತೇಜನ ನೀಡುವ ಸಲುವಾಗಿ ಹೇಳಿದ: "ನಾವೀಗ ಕೊಸೆಕರನ್ನು ದಂಗೆ ಏಳುವಂತೆ ಮಾಡಬೇಕಾಗಿದೆ. ಸೋವಿಯತ್ ಸರಕಾರ ಹೆಚ್ಚು ದಿನ ಉಳಿಯಲಾರದು. ಎಲ್ಲ ಕಡೆ ಹೋರಾಟ ನಡೆಯುತ್ತಿದೆ. ಜನ ದಂಗೆ ಎದ್ದಿದ್ದಾರೆ. ಸೈಬೀರಿಯ, ಉಕ್ರೈನ್ ಮತ್ತು ಪೆಟ್ರೋಗ್ರಾಡಿನಲ್ಲಿಯೂ ಜನ ದಂಗೆ ಎದ್ದಿದ್ದಾರೆ. ನಾವು ಹತಾಶರಾಗಬೇಕಿಲ್ಲ...ಗ್ರಿಗೋರಿ, ನೀನು ನಮ್ಮ ಜೊತೆ ಬರುತ್ತೀಯಲ್ಲವೆ?"

"ನಾನು ನಿಮ್ಮ ಗುಂಪನ್ನು ಸೇರುತ್ತೇನೆ. ನಾನು ಬೇರೆಲ್ಲಿಗೂ ಹೋಗಲಾರೆ."

ಮರುದಿನ ಮುಂಜಾನೆ ಫೊಮಿನ್‌ನ ಗುಂಪು ಹೊರಟಿತು. ಅವರ ಗುಂಪನ್ನು ಸರಕಾರಿ ಪಡೆಗಳು ಹಿಂಬಾಲಿಸುತ್ತಿದ್ದುವು. ಎಪ್ರಿಲ್ ೧೮ ರಂದು ಸರಕಾರದ ಪಡೆಗಳು ಅವರ ಮೇಲೆ ಆಕ್ರಮಣವೆಸಗಿದುವು. ಗುಂಪಿನಲ್ಲಿ ಐದು ಮಂದಿ ಮಾತ್ರ ಉಳಿದುಕೊಂಡರು. ಇತರರು ಕೆಂಪು ಸೈನಿಕರ ಖಡ್ಗಗಳಿಗೆ ಬಲಿಯಾದರು.

ರುಬೆಝ್ನಿ ಗ್ರಾಮದ ಎದುರು ಡಾನ್‌ನಲ್ಲಿ ಒಂದು ಚಿಕ್ಕ ದ್ವೀಪವಿತ್ತು. ಆ ದ್ವೀಪದಲ್ಲಿ ಫೊಮಿನ್, ಗ್ರಿಗೋರಿ ಮತ್ತು ಇತರ ಮೂವರು ಆಶ್ರಯ ಪಡೆದರು. ಎಪ್ರಿಲಿನ ಕೊನೆಯಲ್ಲಿ ಒಂದು ರಾತ್ರಿ ಅವರು ದೋಣಿಯಲ್ಲಿ ಕುಳಿತು ಡಾನ್ ನದಿಯನ್ನು ದಾಟಿದರು.

ಒಂದು ರಾತ್ರಿ ಗುಂಪಿನವರು ಪಥಚಲನ ಮಾಡುತ್ತಿದ್ದಾಗ ಗ್ರಿಗೋರಿ ಕುದುರೆಯಿಂದಿಳಿದ. ಉಳಿದವರು ತುಸು ಮುಂದೆ ಹೋದೊಡನೆ ಕುದುರೆಯನ್ನೇರಿ ಗುಂಪು ಹೋಗುತ್ತಿದ್ದ ದಿಕ್ಕಿನ ವಿರುದ್ಧವಾದ ದಿಕ್ಕಿನತ್ತ ದೌಡಾಯಿಸಿದ. ಮರುದಿನ ಮುಂಜಾನೆ ತಾರತಾರಸ್ಕ ಗ್ರಾಮದ ಮುಂದಿದ್ದ ಹುಲ್ಲುಗಾವಲಿಗೆ ಹೋದ. ಕುದುರೆಯನ್ನು ಮರವೊಂದಕ್ಕೆ ಕಟ್ಟಿದ. ಕಾಲ್ನಡಿಗೆಯಲ್ಲಿಯೇ ಅಕ್ಸಿನ್ಯಾಳ ಮನೆಯತ್ತ ಹೋದ. ಮನೆಯ ಬಾಗಿಲನ್ನು ತಟ್ಟಿದ.

ಮಕ್ಕಳು ಮಲಗಿದ್ದರು. ಗ್ರಿಗೋರಿ ಅವರನ್ನು ನೋಡಿದ.

"ನಿನ್ನನ್ನು ಕರೆದುಕೊಂಡು ಹೋಗಲು ಬಂದಿ




"ನಮ್ಮ ಗಣಿತ ಮೇಸ್ಟ್ರು ಕಲಿಸಿದ ತ್ರಿಕೋಣ ಹೀಗಲ್ಲಪ್ಪಾ."

ದ್ದೇನೆ, ಬರುತ್ತಿಯಲ್ಲ?"

"ಎಲ್ಲಿಗೆ?"

"ನನ್ನ ಜೊತೆ, ನಾನು ಫೊಮಿನ್‌ನ ಗುಂಪನ್ನು ಬಿಟ್ಟಿದ್ದೇನೆ. ದಕ್ಷಿಣದತ್ತ ಹೋಗುವ. ಕೂಬಾನಿಗೆ ಹೋಗುವ. ನಾನೇನಾದರೂ ಕೆಲಸ ಮಾಡುತ್ತೇನೆ. ಯಾವ ಕೆಲಸವನ್ನಾದರೂ ಮಾಡ ಬಲ್ಲೆ. ನನ್ನ ಕೈಗಳು ದುಡಿಯಲು ಆತುರ ವಾಗಿವೆ. ಹೋರಾಟದಲ್ಲಿ ನನಗೀಗ ಆಸಕ್ತಿಯಿಲ್ಲ. ಮಕ್ಕಳನ್ನು ಮನ್ಯಾಳ ವಶಕ್ಕೊಪ್ಪಿಸುವೆ."

ಗ್ರಿಗೋರಿ ಮತ್ತು ಅಕ್ಸಿನ್ಯಾ ಹೊರಟರು. ಚಿರ್‌ನದಿಯ ದಡವನ್ನು ತಲಪಿದರು. ಅವ ರೊಂದು ಗ್ರಾಮದ ಗಡಿಗೆ ಬಂದಾಗ ಚೌಕಿಯ ಕಾವಲುಗಾರರು. "ನಿಲ್ಲಿ, ಯಾರದು?–ಎಂದು ಕೇಳಿದರು.

ಕಾವಲುಗಾರರು ಅವರ ಬಳಿ ಬಂದರು. ಗ್ರಿಗೋರಿ ಕುದುರೆಯನ್ನು ದೌಡಾಯಿಸಿದ. ಈಗ ಕಾವಲುಗಾರರಿಗೆ ಘಟನೆಯ ಅರ್ಥ ವಾಗಿ, ಅವರು ಗುಂಡು ಹಾರಿಸಿದರು.

ಅಕ್ಸಿನ್ಯಾ ನೆಲಕ್ಕುರುಳುವುದರಲ್ಲಿದ್ದಳು. ಗ್ರಿಗೋರಿ ಅವಳನ್ನು ಹಿಡಿದುಕೊಂಡ. ಗ್ರಾಮದ ಹೊರಗೆ ಹೋದೊಡನೆ ಮರಳು ಪ್ರದೇಶದಲ್ಲಿ ನಿಂತುಕೊಂಡ. ಅಕ್ಸಿನ್ಯಾಳನ್ನೆತ್ತಿ ನೆಲದ ಮೇಲೆ ಮಲಗಿಸಿದ. ಗುಂಡು ಅವಳ ಶರೀರವನ್ನು ಪ್ರವೇಶಿಸಿತ್ತು. ಕಷ್ಟದಿಂದ ಉಸಿರಾಡುತ್ತಿದ್ದಳು. ಮರುದಿನ ಮುಂಜಾನೆ ಅವನ ತೋಳ ತೆಕ್ಕೆ- ಯಲ್ಲಿಯೇ ಮಡಿದಳು. ಗ್ರಿಗೋರಿ ಅವಳನ್ನು ಅಲ್ಲಿಯೇ ಹೂಳಿದ.

ಈಗ ಗ್ರಿಗೋರಿ ಬದುಕಿನಲ್ಲಿ ಎಲ್ಲವನ್ನೂ ಕಳೆದುಕೊಂಡಿದ್ದ. ಅಕ್ಸಿನ್ಯಾಳನ್ನು ಹೂಳಿದ ನಂತರ ಮೂರು ದಿನ ಬಯಲಿನಲ್ಲಿ ಅಲೆದಾಡಿದ. ನಂತರ ಕಾಡಿಗೆ ಹೋದ. ಅಲ್ಲಿ ಅವನಿಗೆ ಸೇನೆಯಿಂದ ಪಲಾಯನ ಗೈದವಳು ಜನ ಸಿಕ್ಕಿದರು. ಅವನನ್ನು ತಮ್ಮ ಕಂದಕಕ್ಕೆ ಕರೆದುಕೊಂಡು ಹೋದರು. ಗ್ರಿಗೋರಿ ಒಂದು ವಾರ ಅಲ್ಲಿದ್ದ ನಂತರ ಅಲ್ಲಿಂದ ಹೊರಟ. ಡಾನ್‌ನ ತಟವನ್ನು ತಲಪಿದ. ತನ್ನ ರೈಫಲ್ ಪಿಸ್ತೂಲಗಳನ್ನು ನದಿಯಲ್ಲಿ ಎಸೆದ. ಗುಂಡುಗಳಿದ್ದ ಪೆಟ್ಟಿಗೆಯನ್ನು ಸಹ ಎಸೆದ. ಕೈಗಳನ್ನು ಸರಿಯಾಗಿ ತೊಳೆದುಕೊಂಡ ಮೇಲಂ- ಗಿಗೆ ಒರೆಸಿದ. ಡಾನನ್ನು ದಾಟಿ ತಾರತಾರಸ್ಕ ವನ್ನು ಪ್ರವೇಶಿಸಿದ. ಮನೆಯತ್ತ ನಡೆದ. ಮನೆ ಯಿಂದ ತುಸು ದೂರದಲ್ಲಿದ್ದಾಗಲೇ ಮಿಶಾತ್ಕಾ- ನನ್ನು ಕಂಡ. ಮಗನತ್ತ ಧಾವಿಸಿ,

"ಕಂದಾ...ಕಂದಾ..." ಮಗನನ್ನು ಚುಂಬಿ ಸುತ್ತಾ ಗ್ರಿಗೋರಿ ಹೇಳಿದ,

"ನೀವೆಲ್ಲ ಹೇಗಿದ್ದೀರಿ? ಅತ್ತೆ ಮತ್ತು ಪೊಲ್ಯುಶ್ಕಾ ಹೇಗಿದ್ದಾರೆ? ಚೆನ್ನಾಗಿದ್ದಾರಾ?"

ತಂದೆಯತ್ತ ನೋಡದೆಯೇ ಮಿಶಾತ್ಕಾ ಶಾಂತನಾಗಿ ಉತ್ತರ ಕೊಟ್ಟ.

"ಮನ್ಯಾ ಅತ್ತೆ ಚೆನ್ನಾಗಿದ್ದಾರೆ. ಪೊಲ್ಯುಶ್ಕಾ ಕಳೆದ ಬೇಸಗೆಯಲ್ಲಿ ಡಿಫ್ತೀರಿಯಾದಿಂದಾಗಿ ತೀರಿ ಕೊಂಡಳು. ಮಾವ ಮಿಶಾ ಈಗ ಸೈನಿಕರಾಗಿ ದ್ದಾರೆ."

ಮಗನನ್ನು ಎತ್ತಿಕೊಂಡು ಗ್ರಿಗೋರಿ ತನ್ನ ಮನೆಯ ಗೇಟಿನ ಮುಂದೆ ನಿಂತುಕೊಂಡ. ಪ್ರಪಂಚದಲ್ಲೀಗ ಅವನ ಮಟ್ಟಿಗೆ ಮಗ ಮಾತ್ರ ಉಳಿದಿದ್ದ. ಉದಾಸೀನನಾಗಿದ್ದ ಸೂರ್ಯನ ಕೆಳಗೆ ಮಿಂಚುತ್ತಿದ್ದ ವಿಶಾಲ ಪ್ರಪಂಚ ಮತ್ತು ಭೂಮಿಯ ಜೊತೆ ಇನ್ನೂ ಸ್ವಲ್ಪ ಸಮಯ ಅವನನ್ನು ಬೆಸೆದಿದ್ದ ಸಂಪರ್ಕ ಸೇತುವೆಯಂತಿದ್ದ ಈ ಕಂದನನ್ನು ಮಾತ್ರ ಬದುಕು ಉಳಿಸಿತ್ತು.

---

Edited, printed and published by M. N. Mahishi on behalf of the Loka Shikshana Trust, Samyukta Karnataka Press, Koppikar Road, Hubli–580 020 Phone: 64307. Rept: Bombay, V. Satyamurthy Phone: 5510502, Calcutta: H. Majumdar Phone: 46–42331 Madras: K. A. Subramanian Phone: 842201; New Delhi; V. K. Chopra Phone: 7114785.

*Registered with the Registrar of Newspapers for India under No. 3539/57*

